# ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ

[ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ]


ಸಂಶೋಧಕರು

**ಹಂದ್ರಾಳ. ಮಾರ್ಕಂಡೇಯ**

ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ. ನಾಗೇಶ್**

ಮುಖ್ಯಸ್ಥರು,
ಜಾನಪದ ಅಧ್ಯಯನ ವಿಭಾಗ





ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ

[ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಮಹಾಪ್ರಬಂಧ]

ಸಂಶೋಧಕರು

**ಹಂದ್ರಾಳ. ಮಾರ್ಕಂಡೇಯ**

ಮಾರ್ಗದರ್ಶಕರು

**ಡಾ. ಹೆಬ್ಬಾಲೆ ಕೆ. ನಾಗೇಶ್**

ಮುಖ್ಯಸ್ಥರು,
ಜಾನಪದ ಅಧ್ಯಯನ ವಿಭಾಗ



ಜಾನಪದ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೮

# ದೃಢೀಕರಣ ಪತ್ರ

ಹಂದ್ರಾಳ ಮಾರ್ಕಂಡೇಯ ಅವರು ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ ಎಂಬ ಶೀರ್ಷಿಕೆಯ ಪಿಎಚ್.ಡಿ. ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧ ಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾಗುತ್ತಿರುವ ಈ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ : ೨೯/೨/೨೦೦೮

**ಡಾ. ಹೆಬ್ಬಾಲೆ ಕೆ. ನಾಗೇಶ್**

ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು

ಜಾನಪದ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಪ್ರಮಾಣ ಪತ್ರ

**ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಲು ಡಾ. ಹೆಬ್ಬಾಲೆ ಕೆ. ನಾಗೇಶ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವ ಪದವಿಗೂ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ :

H. Markandeya
**ಹಂದ್ರಾಳ ಮಾರ್ಕಂಡೇಯ**
ಸಂಶೋಧನಾ ವಿದ್ಯಾರ್ಥಿ
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಯಾರ್‍ಯಾರ ನೆನೆಯಲಿ...

ಕನ್ನಡ ವಿಶ್ವವಿದ್ಯಾಲಯದ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ ಕುಲಪತಿಗಳಾಗಿದ್ದ ಡಾ.ಎಚ್.ಜೆ. ಲಕ್ಕಪ್ಪಗೌಡ, ಡಾ. ಬಿ.ಎ. ವಿವೇಕ ರೈ, ಡಾ. ಕೆ.ವಿ. ನಾರಾಯಣ, ಪ್ರಭಾರ ಕುಲಪತಿಗಳಾಗಿದ್ದ ಡಾ. ಹಿ.ಚಿ. ಬೋರಲಿಂಗಯ್ಯ ನೂತನ ಕುಲಪತಿಗಳಾದ ಡಾ. ಎ. ಮುರಿಗೆಪ್ಪ, ಕುಲಸಚಿವರಾಗಿದ್ದ ಡಾ. ಕರೀಗೌಡ ಬೀಚನಹಳ್ಳಿ, ಕುಲಸಚಿವರಾದ ವಿ. ಶಂಕರ, ಅಧ್ಯಯನಾಂಗದ ನಿರ್ದೇಶಕರಾದ ಡಾ. ಡಿ. ಪಾಂಡುರಂಗಬಾಬು, ಪ್ರಸಾರಾಂಗದ ನಿರ್ದೇಶಕರಾದ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಅವರುಗಳಿಗೆ ಕೃತಜ್ಞತೆಯಿಂದ ನೆನೆಯುತ್ತೇನೆ.

ಮಹಾಪ್ರಬಂಧದ ರಚನೆಯ ಪ್ರತಿಹಂತದಲ್ಲೂ ನನ್ನನ್ನೂ ಪ್ರೋತ್ಸಾಹಿಸಿ ಆತ್ಮೀಯವಾಗಿ ನಡೆಸಿಕೊಂಡು ಸೂಕ್ತಸಲಹೆಗಳನ್ನು ನೀಡಿ ಮಾರ್ಗದರ್ಶನ ಮಾಡಿದ ಡಾ. ಹೆಬ್ಬಾಲೆ ಕೆ. ನಾಗೇಶ್ ಅವರಿಗೆ ಯಾವತ್ತೂ ಕೃತಜ್ಞ, ವಿಭಾಗದ ಪ್ರಾಧ್ಯಾಪಕರು ಹಾಗೂ ಅಧ್ಯಾಪಕರುಗಳಾದ ಡಾ. ಮಂಜುನಾಥ ಬೇವಿನಕಟ್ಟಿ, ಡಾ.ಸ.ಚಿ. ರಮೇಶ್, ಡಾ. ಹರಿಶ್ಚಂದ್ರ ದಿಗ್ಸಂಗಿಕರ್, ಡಾ. ಮೊಗಳ್ಳಿ ಗಣೇಶ್, ಡಾ. ಸಿ.ಟಿ. ಗುರುಪ್ರಸಾದ್ ಮತ್ತು ವಿಭಾಗದ ಸಿಬ್ಬಂದಿ ವರ್ಗದವರಾದ ಶ್ರೀ ವಿರುಪಾಕ್ಷಯ್ಯ, ಬಸವರಾಜ ಹಾಗೂ ಅಬ್ದುಲ್ ನಬಿ ಇವರುಗಳಿಗೆ,

ವಿಷಯವನ್ನು ವಿಸ್ತರಿಸಿಕೊಳ್ಳಲು ಬೌದ್ಧಿಕ ತಿಳಿವಳಿಕೆ ನೀಡಿದ ಡಾ. ವೀರೇಶ ಬಡಿಗೇರ, ಡಾ. ವಿ.ಬಿ. ತಾರಕೇಶ್ವರ್, ಡಾ. ಕೆ. ರವೀಂದ್ರನಾಥ, ಡಾ. ಸಿ. ಮಹಾದೇವ, ಡಾ. ಎಂ. ಕೊಟ್ರೇಶ್, ಡಾ. ಸುಧಾಕರ ಬಿ.ಎಸ್. (ಪಿ.ಎಸ್.ಐ.), ಎಂ. ಪಂಪಯ್ಯಸ್ವಾಮಿ, ಶ್ರೀ ಸೊನ್ನದ ಈಶಣ್ಣ, ಸುರೇಶ ಮುದ್ದೇಬಿಹಾಳ, ಎಸ್. ರಾಜಶೇಖರ್, ಹೆಚ್. ನಿಂಗಪ್ಪ ವಕೀಲರು, ಗಣೇಶ ಯಾಜಿ ಅವರನ್ನು ಮನದಾಳದಿಂದ ನೆನೆಯುತ್ತೇನೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸರ್ವ ರೀತಿಯಿಂದಲೂ ಆತ್ಮೀಯತೆಯಿಂದ ಮಾಹಿತಿ ನೀಡಿದ ಗಾಣಿಗ ಸಮುದಾಯದವರಿಗೆ ನನ್ನ ಪ್ರೀತಿಪೂರ್ವಕ ಪ್ರಣಾಮಗಳು.

ಅಕ್ಷರ ಬರೆಯಲು ಒತ್ತು ನೀಡಿದ ನನ್ನ ತಂದೆ, ತಾಯಿ, ಅಕ್ಕ, ಅಣ್ಣ, ತಮ್ಮಂದಿರು ಅತ್ತಿಗೆಯಂದರಿಗೆ ಮತ್ತು ನನ್ನ ಕುಟುಂಬದ ವರ್ಗದವರಿಗೆ ನೆನೆಯುತ್ತೇನೆ.

ಮಹಾಪ್ರಬಂಧದ ರಚನೆಯ ಸಂದರ್ಭದಲ್ಲಿ ಗ್ರಂಥಾಲಯದಲ್ಲಿ ಸಹಕರಿಸಿದ ಡಾ. ನಾಗವೇಣಿ, ಡಾ. ಕ.ಅ. ರಾಧಕೃಷ್ಣ ಮತ್ತು ಸಿಬ್ಬಂದಿ ವರ್ಗದವರನ್ನು ನೆನೆಯುತ್ತೇನೆ.

ಸಂಶೋಧನೆಯ ಹಲವು ಸಲಹೆ, ಸೂಚನೆಗಳನ್ನು ನೀಡಿದ ನನ್ನ ಪ್ರೀತಿಯ ಗೆಳೆಯರಾದ ಗುರುರಾಜ ಮುಗುಳಿ, ಜಿ.ಎಂ. ಶರಣಬಸವ, ಇಸ್ಮಾಯಿಲ್ ಜಬೀರ್ ಬಿ., ರಾಧಾ, ಪಿ. ವಿಜಯಲಕ್ಷ್ಮಿ, ನಿರಂಜನ ರಾ.ನ., ಸೀತಾರಾಂ ಹುಳಿಯಾರು, ಶೇಖರಾಚಾರಿ, ಎನ್.ಎಸ್. ವೀರೇಶ, ಈರಣ್ಣ ಹುರುಳಿ, ಬಿ.ಎಸ್. ಗಾದೆಪ್ಪ, ನಾಯಕರ ಹುಲುಗಪ್ಪ, ಎಚ್.ಎನ್. ಕೃಷ್ಣೇಗೌಡ, ಸುದೀಪ್ ಬಿ.ಎಸ್., ಸುಧಾಕರ ಬಿ., ಸೊನ್ನದ ಚಂದ್ರಶೇಖರ್, ಡಿ. ಓಬಯ್ಯ, ಎಸ್. ಚಂದ್ರಪ್ಪ, ಅರುಣ್ ಜೋಳದ ಕೂಡ್ಲಿಗಿ ಹಾಗೂ ಓ.ಬಿ.ಸಿ. ಹಾಸ್ಟೆಲ್‌ನ ಎಲ್ಲಾ ಗೆಳೆಯಂದಿರನ್ನು ಮತ್ತು ವಿಶ್ವವಿದ್ಯಾಲಯದ ಎಲ್ಲ ನೌಕರ ವರ್ಗದವರನ್ನು ಪ್ರೀತಿಯಿಂದ ನೆನೆಯುತ್ತೇನೆ.

ಅಕ್ಷರ ಸಂಯೋಜನೆ ಮಾಡಿಕೊಟ್ಟ ವೈ.ಎಂ.ಶರಣಬಸವ, ಮರಿಸ್ವಾಮಿ ಅವರಿಗೆ ನನ್ನ ಪ್ರೀತಿಪೂರ್ವಕ ಕೃತಜ್ಞತೆಗಳು.

**ಹಂದ್ರಾಳ ಮಾರ್ಕಂಡೇಯ**

# ಪರಿವಿಡಿ



ಅಧ್ಯಾಯ ೧

ಪ್ರಸ್ತಾವನೆ \ ೧

೧.೧. ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ

೧.೨. ಗಾಣಿಗರ ಕುರಿತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

೧.೩. ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು

೧.೪. ಅಧ್ಯಯನದ ರೂಪುರೇಷೆಗಳು

ಅಧ್ಯಾಯ ೨

ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ \ ೨೧

೨.೧. ಬಳ್ಳಾರಿ: ನಾಮ ವಿವೇಚನೆ

೨.೨. ಶಾಸನಗಳು

೨.೩. ಐತಿಹ್ಯ ಮತ್ತು ದಂತಕಥೆ

೨.೪. ಪೌರಾಣಿಕ

೨.೫. ಭೌಗೋಳಿಕ ಲಕ್ಷಣಗಳು

ಅಧ್ಯಾಯ ೩

ಗಾಣಿಗರ ಮೂಲ ಇತಿಹಾಸ \ ೩೭

೩.೧. ಪದ ನಿಷ್ಪತ್ತಿ ಮತ್ತು ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು

೩.೨. ಪೌರಾಣಿಕ ಹಿನ್ನೆಲೆ

೩.೩. ಶಾಸನಗಳ ಉಲ್ಲೇಖ

ಅಧ್ಯಾಯ ೪

ಸಾಮಾಜಿಕ ವ್ಯವಸ್ಥೆ \ ೫೧

೪.೧. ಕುಟುಂಬ (ಜೀವನ) ಪದ್ಧತಿ

೪.೨. ಗಾಣಿಗ ಸಮುದಾಯದ ಒಳ ಪಂಗಡಗಳು

೪.೩. ಗಾಣಿಗರ ಬೆಡಗುಗಳು

೪.೪. ಗಾಣಿಗರ ರಕ್ತಸಂಬಂಧ

೪.೫. ನ್ಯಾಯಪದ್ಧತಿ

೪.೬. ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ

೪.೭. ವೈದ್ಯ ಪದ್ಧತಿ

೪.೮. ಆಹಾರ ಪದ್ಧತಿ

೪.೯. ಉಡುಗೆ-ತೊಡುಗೆ
೪.೧೦. ವಸತಿ ವ್ಯವಸ್ಥೆ
೪.೧೧. ರಾಜಕೀಯ, ಆರ್ಥಿಕ, ಸ್ಥಿತಿಗತಿ
೪.೧೨. ನಿಷೇಧಗಳು
೪.೧೩. ಸಂಘಸಂಸ್ಥೆಗಳು

**ಅಧ್ಯಾಯ ೫**
**ಆಚರಣೆಗಳು \ ೯೫**
ಜೀವನಾವರ್ತನ ಆಚರಣೆಗಳು
೫.೧. ಜನನ ಮತ್ತು ಬಾಣಂತನ
೫.೨. ಋತುಮತಿ
೫.೩. ಜವಳ
೫.೪. ಮದುವೆ
೫.೫. ಸೀಮಂತ
೫.೬. ನಾಮಕರಣ
೫.೭. ಮರುವು ಚುಚ್ಚುವುದು
೫.೮. ಸಾವು-ಸಂಸ್ಕಾರ
೫.೯. ಕುಟುಂಬದ ಮೇಲೆ ಸಾವಿನ ಪರಿಣಾಮ

**ಅಧ್ಯಾಯ ೬**
**ಹಬ್ಬಗಳು ಮತ್ತು ಧಾರ್ಮಿಕ ಕೇಂದ್ರಗಳು \ ೧೩೬**
೬.೧. ಹಬ್ಬದ ಪರಿಕಲ್ಪನೆ
೬.೨. ಹಿರಿಯರ ಹಬ್ಬ
೬.೩. ಯುಗಾದಿ
೬.೪. ಪಂಚಮಿ ಹಬ್ಬ
೬.೫. ಬನ್ನಿ ಹಬ್ಬ
೬.೬. ದೀಪಾವಳಿ
೬.೭. ಸೀಗಿ ಹುಣ್ಣಿಮೆ
೬.೮. ಗೌರಿ ಹುಣ್ಣಿಮೆ
೬.೯. ಸಂಕ್ರಾಂತಿ ಸಂಕ್ರಮಣ
೬.೧೦. ಶಿವರಾತ್ರಿ
೬.೧೧. ರಕ್ಷಾಬಂಧನ

**ಅಧ್ಯಾಯ ೭**
**ಗಾಣಿಗರ ಜನಪದ ಸಾಹಿತ್ಯ \ ೧೫೪**
೭.೧. ಗಾಣಿಗರ ಗಾದೆಗಳು
೭.೧.೧. ಕೌಟುಂಬಿಕ ಗಾದೆಗಳು
೭.೧.೨. ಸಾಮಾಜಿಕ ಗಾದೆಗಳು

೭.೧.೩. ನೈತಿಕ ಗಾದೆಗಳು
೭.೧.೪. ಲೈಂಗಿಕ ಗಾದೆಗಳು
೭.೧.೫. ಸಂಕೀರ್ಣ ಗಾದೆಗಳು
೭.೨. ಗಾಣಿಗರ ಒಗಟುಗಳು
೭.೩. ಗಾಣಿಗರ ಒಡಪುಗಳು
೭.೪. ಗಾಣಿಗರ ನಂಬಿಕೆಗಳು
೭.೪.೧. ಅಂಗ ಸಂಬಂಧಿ ನಂಬಿಕೆಗಳು
೭.೪.೨. ವಸ್ತು ಸಂಬಂಧಿ ನಂಬಿಕೆಗಳು
೭.೪.೩. ಕಾರ್ಯ ಸಂಬಂಧಿ ನಂಬಿಕೆಗಳು
೭.೪.೪. ಶವ ಸಂಸ್ಕಾರ ಮತ್ತು ನಂಬಿಕೆಗಳು
೭.೫. ಶಕುನಗಳು

**ಅಧ್ಯಾಯ ೮**

**ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು** \ ೧೮೧
೮.೧. ವೃತ್ತಿ ಸಂಬಂಧ ಉಪಕರಣಗಳು
೮.೨. ಅವಲಂಬಿತ ವೃತ್ತಿ
೮.೩. ಹಿಂದಿನ ಕಾಲದ ಸಮಾಜದಲ್ಲಿ ಗಾಣಿಗರ ಸ್ಥಾನಮಾನ
೮.೪. ಕೈಗಾರಿಕೀಕರಣದ ಪರಿಣಾಮ ಗಾಣಿಗರ ಇಂದಿನ ಸ್ಥಾನಮಾನ ಮತ್ತು ಸಂಬಂಧಗಳು
೮.೫. ಗಾಣಿಗರು ಮತ್ತು ಆಧುನಿಕ ಜಗತ್ತು

**ಅಧ್ಯಾಯ ೯**

**ಸಮಾರೋಪ** \ ೧೯೮

**ಅನುಬಂಧಗಳು** \ ೨೦೬
ವಕ್ತೃ ವಿವರ
ಪರಾಮರ್ಶನ ಗ್ರಂಥಗಳು
ಛಾಯಾಚಿತ್ರಗಳು

# ಅಧ್ಯಾಯ ೧

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

೧.೨. ಗಾಣಿಗರ ಕುರಿತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

೧.೩. ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು

೧.೪. ಅಧ್ಯಯನದ ರೂಪು-ರೇಷೆಗಳು

## ೧.೧. ಅಧ್ಯಯನದ ಉದ್ದೇಶ ಸ್ವರೂಪ ಮತ್ತು ವ್ಯಾಪ್ತಿ

ಬಹುಮುಖಿ ಸಂಸ್ಕೃತಿಯ ತವರೂರಾದ ಭಾರತದಲ್ಲಿ ಹಲವು ಬಗೆಯ ಜೀವನ ಕ್ರಮಗಳು ಸಮ್ಮಿಲನಗೊಂಡಿವೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಪ್ರಾದೇಶಿಕತೆಗೆ ಹೊಂದಿಕೊಂಡಂತೆ ವೈವಿಧ್ಯಮಯ ಸಮುದಾಯಗಳು, ಜಾತಿ, ಭಾಷೆಗಳಿಗೆ ಸೇರಿದ ಜನಸಮುದಾಯಗಳಿವೆ. ಪ್ರತಿಯೊಂದು ಸಮುದಾಯಗಳಿಗೆ ಅವುಗಳದೇ ಆದ ಅನನ್ಯತೆಗಳಿವೆ. ಕೆಲವು ಸಾಂಸ್ಕೃತಿಕ ಆಚರಣೆಗಳು ಒಂದು ಸಮುದಾಯಕ್ಕೂ ಹಾಗೂ ಮತ್ತೊಂದು ಸಮುದಾಯಕ್ಕೂ ಸಾಮ್ಯವಿರುವಂತೆ ಕಂಡರೂ ಮೂಲತಃ ವ್ಯತ್ಯಾಸಗಳಿವೆ. ಭಾರತದಲ್ಲಿ ಸಾಮಾಜಿಕ ವ್ಯವಸ್ಥೆಯ ಏಣಿ ಶ್ರೇಣಿಯಿಂದ ಕೂಡಿದ್ದು. ಇಂತಹ ಏಣಿ ಶ್ರೇಣಿಯ ಸಮಾಜದಲ್ಲಿ ಗಾಣಿಗ ಸಮುದಾಯವೂ ಬದುಕಿನ ಸ್ಥೂಲ ನೋಟವನ್ನು ಪರಿಚಯಿಸುವುದಾಗಿದೆ.

ಇತ್ತೀಚಿನ ದಶಕಗಳಲ್ಲಿ ಕರ್ನಾಟಕದಲ್ಲಿ ಸಂಸ್ಕೃತಿ ಚಿಂತನ ಕುರಿತು ತೀವ್ರಗತಿಯಲ್ಲಿ ಅಧ್ಯಯನಗಳು ನಡೆದಿವೆ. ನಡೆಯುತ್ತಲೂ ಇವೆ. ಕನ್ನಡ ಸಾಂಸ್ಕೃತಿಕ ಸಂದರ್ಭದಲ್ಲಿ ಇದೊಂದು ಮಹತ್ವದ ಹಾಗೂ ಉತ್ಕೃಷ್ಟದ ಬೆಳವಣಿಗೆಯೆನ್ನಲು ಅಡ್ಡಿಯಿಲ್ಲ. ಸಮಾಜ ವಿಜ್ಞಾನಗಳಲ್ಲಿ ಮಾನವ ಸಮುದಾಯಗಳನ್ನು ವಿವಿಧ ಮಾದರಿಗಳಲ್ಲಿ ವಿವಿಧ ಉದ್ದೇಶಗಳಿಗಾಗಿ ಅಧ್ಯಯನ ಮಾಡಲಾಗುತ್ತದೆ.

ಮಾನವ ಶಾಸ್ತ್ರಜ್ಞರು ಕೈ ಹಾಕುತ್ತಿದ್ದ ಬುಡಕಟ್ಟು ಸಮುದಾಯಗಳ ಕ್ಷೇತ್ರವನ್ನು ಇಂದೂ ಜಾನಪದ ವಿದ್ವಾಂಸರು ಪ್ರವೇಶಿಸಿದ್ದಾರೆ. ಒಂದು ಸಮುದಾಯದ ಬದುಕಿನ ರೀತಿ-ನೀತಿ ಸಂಸ್ಕೃತಿಗಳನ್ನು ಅರಿಯಬೇಕಾದಲ್ಲಿ ಆ ಸಮುದಾಯವು ಅನುಸರಿಸುವ ನಂಬಿಕೆ, ಸಂಪ್ರದಾಯ, ಆಚರಣೆ, ವಿಧಿನಿಷೇದ, ಭಾಷೆ. ಅಂತಹ ಸಂಸ್ಕೃತಿಯನ್ನು ಜೀವಂತವಾಗಿರುವ ಆ ಸಮುದಾಯದ ಜನಪದ ಹಿನ್ನೆಲೆಯ ಅರಿವನ್ನು ಮಾಡಿಕೊಳ್ಳುವುದು ಅವಶ್ಯಕವೇನೋ ಇಂದಿನ ಜಾಗತೀಕರಣ ಪ್ರಕ್ರಿಯೆಯಲ್ಲಿ ಎಷ್ಟು ಬುಡಕಟ್ಟು ಸಮುದಾಯಗಳು ಕಳೆದು ಹೋಗುತ್ತವೆಯೇನೋ ಎನ್ನುವ ಭಯದ ಮಧ್ಯದಲ್ಲಿಯೂ ಅಂತಹ ಪ್ರಕ್ರಿಯೆಗಳನ್ನು ಎದುರಿಸಿ ನಿಂತು ತಮ್ಮ ಮೂಲ ಬೇರುಗಳನ್ನು ಕಾಯ್ದುಕೊಳ್ಳಲು ಇಂತಹ ಸಮುದಾಯಗಳಲ್ಲಿ ನಿರಂತರವಾದ ಹೋರಾಟ ನಡೆಯುತ್ತಲೇ ಇರುತ್ತದೆ. ದೂರದಿಂದ ನೋಡಿದಾಗ ಭಾರತದ ಒಂದು ಸಮುದಾಯ ಇನ್ನೊಂದು ಸಮುದಾಯಕ್ಕೆ ಯಾವುದೇ ರೀತಿಯ ಭಿನ್ನತೆಯನ್ನು ಹೊಂದಿಲ್ಲ ಎಂದು ಕಂಡುಬಂದರೂ ಯಾವುದೇ ಒಂದು ಸಮುದಾಯದ ಸಮೀಪಕ್ಕೆ ಹೋಗಿ ಅದರ ಆಳಕ್ಕೆ ಇಳಿದಾಗಲೇ ಆ ಸಮುದಾಯದ ವೈಶಿಷ್ಟಗಳು. ಅಂತಹ ಸಮುದಾಯಗಳಲ್ಲಿ ಬಳ್ಳಾರಿ ಜಿಲ್ಲಾ ಲಿಂಗಾಯಿತ ಗಾಣಿಗರನ್ನು ಕುರಿತು ಅಧ್ಯಯನ ಕೈಗೊಳ್ಳಲಾಗಿದೆ.

ಸಾಮಾನ್ಯವಾಗಿ ಅಧ್ಯಯನಕ್ಕೆ ಒಳಪಡುವ ಸಮುದಾಯಗಳ ಸಾಂಸ್ಕೃತಿಕ ವಿವರಗಳನ್ನು ಕಲೆಹಾಕುವ ಕ್ಷೇತ್ರಕಾರ್ಯಕ್ಕೆ ಮಾತ್ರ ಸೀಮಿತಗೊಳ್ಳುತ್ತದೆ. ಆ ನಿಟ್ಟಿನಲ್ಲಿ ಒಂದು ಸಮುದಾಯದ ನೆಲೆ ಬೆಲೆಯನ್ನು

ಗುರುತಿಸುವುದು ಸಾಧ್ಯವಾಗಬೇಕು ಎನ್ನುವುದು ಗಾಣಿಗರ ಅಧ್ಯಯನಕ್ಕೆ ಇರುವ ಮತ್ತೊಂದು ಕಾಳಜಿ. ಮತಧರ್ಮನಿಷ್ಠೆ ಸಮಾಜವೊಂದರಲ್ಲಿ ಸಮುದಾಯದ ಅಧ್ಯಯನಗಳು ಪಡೆಯುತ್ತಿರುವ ಸಾಂಸ್ಕೃತಿಕ ಒಳ ರಚನೆಯ ಸ್ವರೂಪವನ್ನು ಗಮನಿಸಿದರೆ ಆಳದಲ್ಲೆಲ್ಲೋ ಮನುಷ್ಯ ನಿರ್ಮಿತ ಸಾಮಾಜಿಕ ನಿರ್ಬಂಧಗಳನ್ನು ಮೀರುವ ನಿಸರ್ಗ ಸಹಜ ರೀತಿಯು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನಿಜ ಸಂಸ್ಕೃತಿಯ ರೂಪಗಳು ವಾಸ್ತವದಲ್ಲಿ ಯಾವುದನ್ನು ಸಂಸ್ಕೃತಿ ಎಂದು ಬಿಂಬಿಸಲಾಗುತ್ತಿದೆಯೋ ಅದಕ್ಕಿಂತ ಬೇರೆಯೇ ಆದ ರೀತಿಯಲ್ಲಿ ನೆಲೆಗೊಂಡಿವೆ ಎನ್ನುವುದು ಸ್ಪಷ್ಟವಾಗುತ್ತದೆ. ಸಮುದಾಯದ ಅಧ್ಯಯನದ ಸಂದರ್ಭದಲ್ಲಿ ಮಾಹಿತಿ ಸಂಗ್ರಹಣೆಯ ಜೊತೆ ಜೊತೆಗೆ ವಿಶ್ಲೇಷಣೆ ಹಾಗೂ ಮೌಲ್ಯಮಾಪನ ಕಾರ್ಯವೂ ಒಂದು ರೀತಿಯಲ್ಲಿ ಆಗುತ್ತದೆ ಎನ್ನುವುದು ನಿಜವಾದರೂ ಪ್ರಸ್ತುತ ಸಂದರ್ಭದಲ್ಲಿ ಸಮುದಾಯದ ವಿಧಾನಗಳು ಈ ಬಗೆಯ ಸಾಂಪ್ರದಾಯಿಕ ಪ್ರಕ್ರಿಯೆಗೆ ಮಾತ್ರ ಚಾಚಿಕೊಳ್ಳದೆ ಸಾಂಸ್ಕೃತಿಕ ವಿನ್ಯಾಸದ ಅರ್ಥಶೋಧವನ್ನು ಪ್ರಧಾನ ಗುರಿ ಎಂದು ನಂಬುತ್ತದೆ. ಈ ಕಾರಣದಿಂದ ಸಮುದಾಯದ ಅಧ್ಯಯನಕ್ಕೆ ತರ್ಕಬದ್ಧ ವೈಚಾರಿಕ ನೆಲೆ ಪ್ರಾಪ್ತವಾಗುತ್ತದೆ.

ಪ್ರಸ್ತುತ ಅಧ್ಯಯನವು ಬಳ್ಳಾರಿ ಜಿಲ್ಲೆಯ ಗಾಣಿಗರು; ಒಂದು ಅಧ್ಯಯನವನ್ನು ಕೇಂದ್ರವಾಗಿರಿಸಿಕೊಂಡಿದೆ. ಅಧ್ಯಯನದ ಅನುಕೂಲಕ್ಕಾಗಿ ಅಂದರೆ ಅಧ್ಯಯನದಲ್ಲಿ ಸ್ಪಷ್ಟತೆಗಾಗಿ ಖಚಿತ ಮತ್ತು ನಿಖರವಾದ ಮಾಹಿತಿಗಳನ್ನು ಒದಗಿಸಬೇಕಾದ ಸಂದರ್ಭಗಳಲ್ಲಿ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟವನ್ನು ವಿಷಯ ಸಮರ್ಥನೆ ಮಡಿಕೊಳ್ಳಲಾಗಿದೆ. ಗಾಣಿಗರ ಅಧ್ಯಯನ ಒಟ್ಟು ಸಾಂಸ್ಕೃತಿಕ ವಿವರಗಳನ್ನು ಸಂಗ್ರಹಿಸುತ್ತಲೇ ಚಾರಿತ್ರಿಕ ಸಂದರ್ಭದಲ್ಲಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ. ಗಾಣಿಗರ ಮೂಲ, ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಗಳು, ಆರ್ಥಿಕ ಸ್ಥಿತಿ-ಗತಿಗಳು, ಕಸುಬು ಮತ್ತು ಹಿನ್ನೆಲೆ, ರಾಜಕೀಯ ಜೀವನ ಹಾಗೂ ಅವರ ಸಾಮಾಜಿಕ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತು ಅಧ್ಯಯನ ಗಾಣಿಗರ ಒಟ್ಟು ಜೀವನ ವಿಧಾನವನ್ನು ಸಮಕಾಲೀನ ಸಾಮಾಜಿಕ ಸಂದರ್ಭದೊಂದಿಗೆ ಮುಖಾಮುಖಿಯಾಗಿಸುವ ಪ್ರಯತ್ನ ಇಲ್ಲಿದೆ. ಈ ಬಗೆಯ ಅಧ್ಯಯನಕ್ಕೆ ಶಿಸ್ತು ತಂದುಕೊಡುವ ಗಾಣಿಗರನ್ನು ಕುರಿತಾದ ಈವರೆಗಿನ ಬರಹಗಳು ಮತ್ತು ಅಥೆಂಟಿಸಿಟಿಯನ್ನು ಒದಗಿಸುವ ಸಮುದಾಯದ ಹಿರಿಯರು ಮತ್ತವರ ಅನುಭವಗಳನ್ನು ಈ ಅಧ್ಯಯನದ ಮೂಲ ಆಕರಗಳೆಂದು ಸ್ವೀಕರಿಸಲಾಗಿದೆ.

ಸಂಶೋಧಕ ಕೈಗೊಳ್ಳುವ ಯಾವುದೇ ತನ್ನ ಕಾರ್ಯಕ್ಕೆ ಸ್ಪಷ್ಟವಾದ ಉದ್ದೇಶ ಇಟ್ಟುಕೊಂಡು. ಆ ಪ್ರಯತ್ನಕ್ಕೆ ತೀವ್ರತೆ ಬಂದು ಬೇಗ ಫಲಪ್ರದವಾಗುವುದು, ಇಲ್ಲಿಯವರೆಗೆ ಗಾಣಿಗ ಸಮುದಾಯ ಕುರಿತು ಅಲ್ಲಲ್ಲಿ ಅಧ್ಯಯನ ನಡೆದಿದ್ದರೂ ಸಮಗ್ರವಾದ ಅಧ್ಯಯನ ನಡೆದಿರುವುದಿಲ್ಲ. ಗಾಣಿಗ ಸಮುದಾಯದ ಅಧ್ಯಯನದ ಕೊರತೆ ಇರುವುದರಿಂದ ಬಳ್ಳಾರಿ ಜಿಲ್ಲಾ ಗಾಣಿಗರು ಒಂದು ಅಧ್ಯಯನ ಈ ವಿಷಯವನ್ನು ಪಿಎಚ್.ಡಿ. ಪದವಿಗೆ ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಹಮ್ಮಿಕೊಳ್ಳಲಾಗಿದೆ.

ಪ್ರಸ್ತುತ ಅಧ್ಯಯನದ ಉದ್ದಕ್ಕೂ ಕ್ಷೇತ್ರಕಾರ್ಯ ಮಾಡಿ ಈ ಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಗಾಣಿಗ ಸಮುದಾಯದ ಪ್ರಾಚೀನತೆಯ ಬಗೆಗೆ ಮೌಖಿಕ ಆಕರಗಳು ಮತ್ತು ಇತರ ಗ್ರಂಥಗಳಲ್ಲಿ ಪ್ರಸ್ತಾಪಿಸಲ್ಪಟ್ಟ ಆಧಾರ ಸಾಮಗ್ರಿಗಳನ್ನು ಪ್ರಬಂಧದಲ್ಲಿ ಬಳಸಿಕೊಳ್ಳಲಾಗಿದೆ. ಪ್ರಸ್ತುತ ಈ ಪ್ರಬಂಧದಲ್ಲಿ ಗಾಣಿಗ ಸಮುದಾಯದ ಸಂಸ್ಕೃತಿಯ ಮೂಲ ಸ್ವರೂಪದ ಬಗೆಗೆ ಒಂದು ಸ್ಪಷ್ಟವಾದ ನಿರ್ಧಾರಕ್ಕೆ ಬರಲು ಪ್ರಯತ್ನಿಸಲಾಗಿದೆ. ಈ ಪ್ರಬಂಧದಲ್ಲಿ ಪ್ರಸ್ತಾಪಿಸಿರುವ ವಿಷಯ ಸಾಮಗ್ರಿಗೆ ಹೆಚ್ಚಿನ ಮೆರಗು ಕೊಡುವಂತೆ ಹಲವಾರು ನಕ್ಷೆ, ಭಾವಚಿತ್ರಗಳು ಹಾಗೂ ದಾಖಲಾತಿಗಳನ್ನು ಅಲ್ಲಲ್ಲಿ ಸೇರಿಸಿ ಈ ಅಧ್ಯಯನಕ್ಕೆ ಸಾಧ್ಯವಾದಷ್ಟು ಖಚಿತತೆಯನ್ನು ತಂದುಕೊಡಲಾಗಿದೆ.

ಈ ಸಮುದಾಯದ ಅಧ್ಯಯನಕ್ಕಾಗಿ ಬಳ್ಳಾರಿ ಜಿಲ್ಲೆಯಲ್ಲಿ ಬರುವ ಏಳು ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಅವುಗಳೆಂದರೆ:

ಬಳ್ಳಾರಿ

ಸಿರುಗುಪ್ಪ

ಹೊಸಪೇಟೆ

ಸಂಡೂರು

ಕೂಡ್ಲಿಗಿ

ಹಗರಿಬೊಮ್ಮನಹಳ್ಳಿ

ಹೂವಿನ ಹಡಗಲಿ

ಈ ಮೇಲಿನ ತಾಲ್ಲೂಕುಗಳನ್ನು ಕ್ಷೇತ್ರಕಾರ್ಯ ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಏಳು ತಾಲ್ಲೂಕುಗಳಲ್ಲಿ ಪ್ರಮುಖವೆನಿಸಿದ ಮನೆಗಳಿಗೆ ಹೋಗಿ ಹಿರಿಯರಿಂದ ಮಾಹಿತಿಯನ್ನು ಪಡೆದುಕೊಳ್ಳಲಾಗಿದೆ. ಪೇಟೆಗಳಲ್ಲಿ, ರಸ್ತೆಯ ಅಕ್ಕಪಕ್ಕದಲ್ಲಿಯೂ ಗಾಣಿಗರನ್ನು ಭೇಟಿಯಾಗಿ ಅವರ ಜೊತೆ ಅನೇಕ ಪೂರ್ವ ವರ್ತಮಾನ ಸಂಗತಿಗಳನ್ನು ಕುರಿತು ಸಮಾಲೋಚಿಸಲಾಗಿದೆ.

ಕ್ಷೇತ್ರಕಾರ್ಯ ಕೈಗೊಂಡಾಗ ಪೂರ್ವ ಸಿದ್ಧತೆಗೆ ಪ್ರಶ್ನಾವಳಿಯ ಚೌಕಟ್ಟನ್ನು ಹಾಕಿಕೊಂಡು ಆಯ್ಕೆ ಮಾಡಿದ ತಾಲ್ಲೂಕುಗಳನ್ನು ಸಂದರ್ಶಿಸಿ ಗಾಣಿಗರ ಮತ್ತು ಇತರ ಸಮುದಾಯದ ಅನುಭವಿ ಹಿರಿಯರೊಂದಿಗೆ ಗಂಡಸರು ಮತ್ತು ಹೆಂಗಸರೊಡನೆ ಹೆಚ್ಚಿನ ಮಾಹಿತಿ ಸಂಗ್ರಹಿಸಿ ಈ ಪ್ರಬಂಧಕ್ಕೆ ಅಗತ್ಯವಾದ ವಿಷಯಗಳನ್ನು ಪೂರಕವಾಗಿ ಅಳವಡಿಸಲು ಯತ್ನಿಸಲಾಗಿದೆ.

ಒಟ್ಟಾರೆ ಪ್ರಬಂಧವನ್ನು ಒಂಬತ್ತು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಕುರಿತದ್ದಾಗಿದೆ. ಇದರಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಈ ವಿಷಯಕ್ಕೆ ಪೂರಕವಾಗಿ ನಡೆದ ಇದುವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು

ಮಾಡಲಾಗಿದೆ. ಅಧ್ಯಯನಕ್ಕಾಗಿ ಕೈಗೊಂಡ ವಿಧಾನವನ್ನು ತಿಳಿಸುತ್ತಾ ಅಧ್ಯಯನದ ರೂಪುರೇಷೆಗಳನ್ನು ಕೊಡಲಾಗಿದೆ.

ಎರಡನೆಯ ಅಧ್ಯಾಯವು ಅಧ್ಯಯನದ ಅನುಕೂಲಕ್ಕಾಗಿ ಗುರುತಿಸಿಕೊಂಡ ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟವನ್ನು ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಜಿಲ್ಲೆಯ ಚಾರಿತ್ರಿಕ ನೋಟ, ಬಳ್ಳಾರಿ, ನಾಮ ವಿವೇಚನೆ, ಶಾಸನಗಳು, ಐತಿಹ್ಯ ಮತ್ತು ದಂತಕಥೆ, ಪೌರಾಣಿಕ, ಭೌಗೋಳಿಕ ಲಕ್ಷಣಗಳು ಮತ್ತು ಇತರೆ ವಿವರಗಳನ್ನು ಕುರಿತಂತೆ ಸಂಕ್ಷಿಪ್ತವಾಗಿ ಹೇಳಲಾಗಿದೆ.

ಮೂರನೆಯ ಅಧ್ಯಾಯವು ಗಾಣಿಗರ ಮೂಲ ಇತಿಹಾಸವನ್ನು ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಪದನಿಷ್ಪತ್ತಿ ಮತ್ತು ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು, ಪೌರಾಣಿಕ ಹಿನ್ನೆಲೆ ಮತ್ತು ಶಾಸನಗಳ ಉಲ್ಲೇಖಗಳನ್ನು ಅಡಕಗೊಳಿಸಲಾಗಿದೆ.

ನಾಲ್ಕನೆಯ ಅಧ್ಯಾಯವು 'ಸಾಮಾಜಿಕ ವ್ಯವಸ್ಥೆ' ಒಳಗೆ ಅವರ ಕೌಟುಂಬಿಕ ಪದ್ಧತಿ, ಗಾಣಿಗ ಸಮುದಾಯದ ಒಳಪಂಗಡಗಳು, ಬೆಡಗುಗಳು, ರಕ್ತಸಂಬಂಧ, ನ್ಯಾಯ ಪದ್ಧತಿ, ಜಾತಿ ಬಹಿಷ್ಕಾರ, ವೈದ್ಯ ಪದ್ಧತಿ, ಆಹಾರ ಪದ್ಧತಿ, ಉಡುಗೆ-ತೊಡುಗೆ, ವಸತಿ ವ್ಯವಸ್ಥೆ, ರಾಜಕೀಯ, ಆರ್ಥಿಕ ಸ್ಥಿತಿ-ಗತಿ, ನಿಷೇಧಗಳು ಮತ್ತು ಸಂಘ-ಸಂಸ್ಥೆಗಳ ಬಗ್ಗೆ ಗಮನ ಹರಿಸಲಾಗಿದೆ.

ಐದನೆಯ ಅಧ್ಯಾಯವು 'ಆಚರಣೆಗಳು' ಇದರಲ್ಲಿ ಗಾಣಿಗರ ಜನನ ಮತ್ತು ಬಾಣಂತನ, ಋತುಮತಿ, ಜವಳ, ಜಾತಿಸಂಸ್ಕಾರ, ಮದುವೆ, ಸೀಮಂತ, ಸಾವು-ಸಂಸ್ಕಾರ ಮತ್ತು ಕುಟುಂಬದ ಮೇಲೆ ಸಾವಿನ ಪರಿಣಾಮಗಳನ್ನು ಕುರಿತು ಸೂಕ್ಷ್ಮ ಅವಲೋಕನ ಮಾಡಲಾಗಿದೆ.

ಅಧ್ಯಾಯ ಆರು ಹಬ್ಬಗಳು ಮತ್ತು ಧಾರ್ಮಿಕ ಕೇಂದ್ರಗಳನ್ನು ಕುರಿತು ಈ ಅಧ್ಯಾಯದಲ್ಲಿ ಕಟ್ಟಿಕೊಡಲಾಗಿದೆ.

ಅಧ್ಯಾಯ ಏಳು 'ಜಾನಪದ ಸಾಹಿತ್ಯ' ಎಂದಿದೆ. ನೂರಾರು ವರ್ಷಗಳಿಂದ ಬಾಯಿಂದ ಬಾಯಿಗೆ, ಉಳಿದುಕೊಂಡು ಬಂದ ಸಾಹಿತ್ಯ ಸಂಪತ್ತು ಹೇರಳವಾಗಿದೆ. ಇದನ್ನು ಸಾಧ್ಯವಾದಷ್ಟು ಸಮಗ್ರವಾಗಿ ಸಂಗ್ರಹಿಸಿ ಗಾಣಿಗರ ನಂಬಿಕೆ ಶಕುನಗಳು, ಗಾದೆಗಳು, ಒಗಟುಗಳು ಮತ್ತು ವಡಪುಗಳು ಇತ್ಯಾದಿಯಾಗಿ ವಿಂಗಡಿಸಿ ದಾಖಲಿಸಲಾಗಿದೆ.

ಅಧ್ಯಾಯ ಎಂಟರಲ್ಲಿ 'ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು' ಕುರಿತು ಇದರಲ್ಲಿ ವೃತ್ತಿ ಸಂಬಂಧ ಉಪಕರಣಗಳು, ಅವಲಂಬಿತ ವೃತ್ತಿ, ಹಿಂದಿನ ಕಾಲದ ಸಮಾಜದಲ್ಲಿ ಗಾಣಿಗರ ಸ್ಥಾನಮಾನ, ಕೈಗಾರಿಕೀಕರಣದ ಪರಿಣಾಮ ಗಾಣಿಗರ ಇಂದಿನ ಸ್ಥಾನಮಾನ ಮತ್ತು ಸಂಬಂಧಗಳು, ಗಾಣಿಗರು ಮತ್ತು ಆಧುನಿಕ ಜಗತ್ತು.

ಕೊನೆಯದಾಗಿ 'ಸಮಾರೋಪ' ಮತ್ತು 'ಅನುಬಂಧ'ಗಳಿದ್ದು, ಅನುಬಂಧ ಒಂದರಲ್ಲಿ ವಕ್ತೃ ವಿವರವಿದ್ದು, ಅನುಬಂಧ ಎರಡರಲ್ಲಿ ಚಿತ್ರಗಳು. ಅನುಬಂಧ ಮೂರರಲ್ಲಿ ಪರಾಮರ್ಶಿತ ಗ್ರಂಥಗಳ ಸೂಚಿ ಅಡಕಗೊಳಿಸಲಾಗಿದೆ.

## ೧.೨. ಗಾಣಿಗರ ಕುರಿತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ

ಗಾಣಿಗರ ಸಂಸ್ಕೃತಿಯ ಮೂಲಶೋಧನೆ, ಅವರ ಆಚರಣೆ ಮತ್ತು ನಂಬಿಕೆಗಳ ವಿವರಣೆ, ಅವರ ಒಟ್ಟಾರೆ ಸಂಸ್ಕೃತಿ ಒಳಗೊಳ್ಳುವ ಚಾರಿತ್ರಿಕ, ಸಾಮಾಜಿಕ ಪ್ರಭಾವ ಪ್ರೇರಣೆಗಳು ಮತ್ತು ಆಯಾಮಗಳ ಚರ್ಚೆ ನಡೆಸುವುದು ಆ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂದು ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಗಾಣಿಗರನ್ನು ಕುರಿತು ನಡೆದಿರುವ ಅಧ್ಯಯನದ ಸಮೀಕ್ಷೆಗೆ ಹೊರಟರೆ ನಿರಾಶೆಯ ನಡುವೆಯು ಕೆಲವೊಂದು ಕುತೂಹಲಕರ ಸಂಗತಿಗಳು ಕಂಡುಬರುತ್ತವೆ.

ಗಾಣಿಗರನ್ನು ಕುರಿತ ಕೆಲವು ವಿವರವಾದ ಮಾಹಿತಿಗಳನ್ನು ಸಂಗ್ರಹಿಸುವ ದೃಷ್ಟಿಯಿಂದ ಬೆಂಗಳೂರು ರೂರಲ್ ಗೆಜೆಟಿಯರ್‌ನ ಪುಟಗಳನ್ನು ತಿರುವಿದರೆ ಅಲ್ಲಿ ಕಾಣುವುದಿಷ್ಟು :

Ganiga: The Ganiga is a caste of oil pressers and the word is derived from the Kannada word Gana meaning an oil mill. They are found scattered all over the district and their number in the undivided district in 1984 was 25,217. There are subsects among them such as the Sajjans, Jyothipana, Jyothinagara etc. There are also the two division the Hegganigas who yoke two bullocks to the Gana and Kiruganigas Yoking only one bullock. Generally Setti is the title suffixed to their names. They worship both Shiva and Vishnu, invite Dasayyas on all important occasions. They bury the dead. They take non-vegetarian food except the Sajjans who are Lingayats. They speak Kannada at Home.

ಗಾಣಿಗರು ಎಣ್ಣೆಯನ್ನು ತೆಗೆಯುವ ವೃತ್ತಿಯವರು ಮತ್ತು ಈ ಶಬ್ದವು ಕನ್ನಡದ 'ಗಾಣ' ಶಬ್ದದಿಂದ ಉತ್ಪನ್ನವಾಗಿದ್ದು ಎಣ್ಣೆಯ ಗಾಣಿಗ ಎಂಬರ್ಥವನ್ನು ಕೊಡುತ್ತದೆ. ಇವರು ಜಿಲ್ಲೆಯ ಬೆಂಗಳೂರು ಗ್ರಾಮಾಂತರ ಎಲ್ಲ ಭಾಗದಲ್ಲಿ ಹರಡಿರುವರು. ಮತ್ತು ೧೯೮೪ರಲ್ಲಿ ಈ ಅವಿಭಾಜಿತ ಜಿಲ್ಲೆಯಲ್ಲಿ ಇವರ ಜನಸಂಖ್ಯೆ ೨೫,೨೧೭ ಮತ್ತು ಇವರಲ್ಲಿ ಹಲವಾರು ಉಪಜಾತಿಗಳಿವೆ. ಅವುಗಳೆಂದರೆ ಸಜ್ಜನರು, ಜ್ಯೋತಿಪಣ, ಜ್ಯೋತಿನಗರ ಮೊದಲಾದವು. ಇವರಲ್ಲಿ ಹೆಗ್ಗಾಣಿಗ ಮತ್ತು ಕಿರುಗಾಣಿಗರೆಂಬ ಎರಡು ಉಪಜಾತಿಗಳಿದ್ದು, ಹೆಗ್ಗಾಣಿಗರು ಗಾಣಕ್ಕೆ ಎರೆಡು ಎತ್ತುಗಳನ್ನು ಉಪಯೋಗಿಸಿದರೆ, ಕಿರುಗಾಣಿಗರು ಕೇವಲ ಒಂದು ಎತ್ತನ್ನು ಗಾಣಕ್ಕೆ ಬಳಸುತ್ತಾರೆ. ಸಾಮಾನ್ಯವಾಗಿ 'ಸೆಟ್ಟಿ' ಎಂಬ ಉಪನಾಮವನ್ನು ತಮ್ಮ ಹೆಸರಿನೊಂದಿಗೆ ಬಳಸುವರು. ಇವರು 'ಶಿವ' ಮತ್ತು 'ವಿಷ್ಣು' ಇಬ್ಬರನ್ನು ಪೂಜಿಸುವರು, ಮತ್ತು ಎಲ್ಲಾ ಸಮಾರಂಭಗಳಲ್ಲಿ ದಾಸಯ್ಯರನ್ನು ಆಹ್ವಾನಿಸುವರು. ಇವರು ಸಸ್ಯಹಾರಿಗಳಾಗಿದ್ದು ಲಿಂಗಾಯತರಾದ ಸಜ್ಜನರು ಸಸ್ಯಹಾರಿಗಳು. ಇವರು ಮನೆಯಲ್ಲಿ ಕನ್ನಡ ಭಾಷೆ ಮಾತನಾಡುವರು.[೧]

ಬೆಂಗಳೂರು ರೂರಲ್ ಗೆಜೆಟಿಯರ್ ಸಂಪಾದಕರು ಗಾಣಿಗರ ಸಾಂಸ್ಕೃತಿಕ ಚಿತ್ರಣವನ್ನು ಕೊಡದಿದ್ದರೂ ಅವರ ಮೂಲವನ್ನು ಕುರಿತಾಗಿ ಸ್ಪಷ್ಟ ಮಾಹಿತಿಯನ್ನು ನೀಡುತ್ತಾರೆ. ಮೊದಲನೆಯದಾಗಿ ಗಾಣಿಗರು ಅವರ ಹೆಸರೇ ಸೂಚಿಸುವಂತೆ ಗಾಣದಿಂದ ಎಣ್ಣೆ ತಯಾರು ಮಾಡುವ ಕಾಯಕದವರು ಎನ್ನುವುದು. ಗಾಣಿಗರು ಸಾವಿರಾರು ವರ್ಷ ಪೂರ್ವದಲ್ಲಿಯೇ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಬಂದರು ಎಂದು ಕೆಲವರ ತಿಳುವಳಿಕೆ.

ಇನ್ನು ಗೆಜೆಟಿಯರ್‌ನ ಸಂಪಾದಕರು ಹೇಳುವ ಮತ್ತೊಂದು ಮಾತು ಗಾಣಿಗರ ಸಾಂಸ್ಕೃತಿಕ ಸಾಮಾಜಿಕ ಬದುಕನ್ನು ಕುರಿತದ್ದಾಗಿದೆ. ಅದೆಂದರೆ ಗಾಣಿಗರು ಇತರ ಲಿಂಗಾಯತ ಪಂಗಡದವರ ಜೊತೆಗೆ ವೈವಾಹಿಕ ಸಂಬಂಧವನ್ನು ಬೆಳೆಸುವುದಿಲ್ಲ ಎನ್ನುವುದು. ಗಾಣಿಗರ ಸಾಮಾಜಿಕ ನೆಲೆಯನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಇದು ಮಹತ್ವದ ವಿಚಾರವಾಗಿದೆ.

ಬೆಂಗಳೂರು ರೂರಲ್ ಗೆಜೆಟಿಯರ್‌ನಲ್ಲಿ ಸಿಗುವ ಮಾಹಿತಿಗಳು ಗಾಣಿಗರ ಅಧ್ಯಯನಕ್ಕೆ ಪೂರಕವಾಗಿವೆ ಮತ್ತು ಅವರ ಕುರಿತಾದ ಮಾಹಿತಿಗಳು ಆಗಿವೆ.

ಎರಡನೆಯದಾಗಿ ಗಾಣಿಗರ ಬಗ್ಗೆ ಇನ್ನಷ್ಟು ಮಾಹಿತಿಗಳು "ಪೀಪಲ್ ಆಫ್ ಇಂಡಿಯಾ ಕರ್ನಾಟಕ" ಕೆ.ಎಸ್. ಸಿಂಗ್‌ರವರ ವಾಲ್ಯೂಂ-xxvi, ಪಾರ್ಟ್ ಟೂ, ಪುಟ ೪೮೭, ೨೦೦೩ರ ಸಂಪುಟದಲ್ಲಿ ದೊರಕುತ್ತದೆ.

ಗಾಣಿಗರು ಎಂಬುದಾಗಿ ಅವರ ಹೆಸರೇ ತಿಳಿಸುವಂತೆ, ಇವರು ಎಣ್ಣೆಯನ್ನು ತಯಾರಿಸುವಂತಹ ಸಮುದಾಯದವರಾಗಿದ್ದಾರೆ. 'ಗಾಣ' ಎಂದರೆ ಎಣ್ಣೆಯನ್ನು ತೆಗೆಯುವ ಸಾದನ ಮತ್ತು ಯಾರು ಗಾಣದಲ್ಲಿ ಕೆಲಸ ಮಾಡುತ್ತಾರೋ ಅವರನ್ನು ಗಾಣಿಗರೆನ್ನುತ್ತಾರೆ. ಇವರಲ್ಲಿ ಐದು ಪಂಗಡಗಳಿವೆ. ಅವುಗಳೆಂದರೆ ಜ್ಯೋತಿ ಪಣ, ಸಜ್ಜನ, ಹೆಗ್ಗಾಣಿಗ, ಕಿರುಗಾಣಿಗ ಮತ್ತು ತೆಲುಗು ಗಾಣಿಗರಾಗಿದ್ದಾರೆ. ಥರ್ಸ್ಟನ್ (೧೯೦೯). ಅವರು ಸಂಡೂರು (ಬಳ್ಳಾರಿ ಜಿಲ್ಲೆ) ತಾಲೂಕಿನಲ್ಲಿ ಎಣ್ಣೆ ಮತ್ತು ಕಲ್ಲು ಎಂಬ ಎರಡು ಉಪ ವಿಭಾಗಗಳಿವೆ ಎಂದು ಅಭಿಪ್ರಾಯ ಪಡುತ್ತಾರೆ.

ಗಾಣಿಗರು ತಮ್ಮ ಉತ್ಪತ್ತಿಯನ್ನು ಭಗವಾನ್ ಈಶ್ವರನ ಬೆವರಿನಿಂದ ಜನಿಸಿದ ಆದಿಮಾನವನಿಂದಾಗಿದೆ ಎಂದು ತಿಳಿಯುತ್ತಾರೆ. (ನಂಜುಂಡಯ್ಯ ಮತ್ತು ಐಯ್ಯರ್ ೧೯೩೦). ಮಾಹಿತಿಯನ್ನು ಒದಗಿಸುವವರ ಅಭಿಪ್ರಾಯಕ್ಕೂ ಮತ್ತು ಐಯ್ಯರ್ ಅವರ ಅಭಿಪ್ರಾಯಕ್ಕೂ ಅಂತರವಿದ್ದು, ಅವರು ತಮ್ಮ ಪುಸ್ತಕದ ಪರಿವಿಡಿಯಲ್ಲಿ ತಾತ್ವಿಕವಾಗಿ ಗಾಣಿಗರ ಉತ್ಪತ್ತಿಯನ್ನು ಚರ್ಚಿಸುತ್ತಾರೆ. ಇಲ್ಲಿ ಉತ್ಪತ್ತಿಗೆ ಇರುವ ಕಾರಣಗಳಲ್ಲಿ ಮಾತ್ರ ವ್ಯತ್ಯಾಸವಿದೆ. ದಂತಕಥೆಗಳ ಪ್ರಕಾರ ಭಗವಂತನಾದ ಶಿವ ಮತ್ತು ಅವನ ಪತ್ನಿಯಾದ ಪಾರ್ವತಿಯರು ಎಣ್ಣೆಯಲ್ಲಿ ಸ್ನಾನವನ್ನು ಮಾಡಬೇಕೆಂದು ಬಯಸಿ, ಒಬ್ಬ ಗಾಣಿಗನಲ್ಲಿ ಎಣ್ಣೆಯನ್ನು ಒದಗಿಸುವಂತೆ ಕೇಳಲಾಗಿ, ಅವನು ಸಮಯದಲ್ಲಿ ಎಣ್ಣೆಯನ್ನು ಒದಗಿಸಲು ಅಸಮರ್ಥನಾದನು. ಇದರಿಂದ

ಅವರು ಸಿಟ್ಟುಗೊಂಡರು. ಆತನು ಮರಳಿ ಬಂದಾಗ ಆತನು ತಂದ ಎಣ್ಣೆಯನ್ನು ಮೆಟ್ಟಿಲುಗಳಿಗೆ ಎಸೆಯಲು ಹೇಳಲಾಯಿತು. ಈಶ್ವರನು ತನ್ನ ಹಣೆಯಿಂದ ಬಂದಂತಹ ಬೆವರಿನ ಹನಿಯಿಂದ ಒಬ್ಬ ಮನುಷ್ಯನನ್ನು ಸೃಷ್ಟಿಸುವನು. ಮತ್ತು ಈಶ್ವರನು ಇವನಲ್ಲಿ ಸ್ನಾನ ಮಾಡುವುದಕ್ಕಾಗಿ ಎಣ್ಣೆಯನ್ನು ಒದಗಿಸಲು ಕೇಳಿದಾಗ. ಆತನು ಎಣ್ಣೆಯನ್ನು ಅರೆಯನ್ನು ಎಣ್ಣೆಕಾಳನ್ನು ಕೇಳಿದನು. ಆವಾಗ ಅವನಿಗೆ ನೀಡಿದಂತಹ ಎಣ್ಣೆಕಾಳನ್ನು ತನ್ನ ಅಂಗೈ(ಎಡಗೈ)ಯಲ್ಲಿಟ್ಟು ತನ್ನ ಬಲಗೈಯ ಮೊಣಗಂಟಿನಿಂದ ತಿರುಗಿಸಿದಾಗ ಎಣ್ಣೆಯು ಅತಿಯಾಗಿ ಇಳಿದು ಬಂದಿತು. ಈ ದೇವತಾ ಪುರುಷನೇ ಶಿವ ಜ್ಯೋತಿ ಪಣ ಎಂದು ಕರೆಯಲ್ಪಟ್ಟಿದ್ದಾನೆ.

ಗಾಣಿಗರು ಕರ್ನಾಟಕದ ಎಲ್ಲ ಜಿಲ್ಲೆಗಳಲ್ಲಿ ಹರಡಿದ್ದಾರೆ. ಶಿವ ಜ್ಯೋತಿ ಪಣರು ಹೆಚ್ಚಾಗಿ ಮೈಸೂರು ಸಂಸ್ಥಾನದ ದಕ್ಷಿಣ ಭಾಗದಲ್ಲಿ ಹೆಚ್ಚಾಗಿ ಕಂಡುಬಂದರೆ ಸಜ್ಜನರು ಹೆಚ್ಚಾಗಿ ಕರ್ನಾಟಕದ ಉತ್ತರ ಭಾಗದಲ್ಲಿ ಕಂಡು ಬರುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತುಳು ಮಾತನಾಡುವ ಗಾಣಿಗರು ಕಂಡು ಬಂದರೆ, ತೆಲುಗು ಮಾತನಾಡುವ ಗಾಣಿಗರು ಬೆಂಗಳೂರು, ಕೋಲಾರ ಮತ್ತು ತುಮಕೂರು ಜಿಲ್ಲೆಗಳಲ್ಲಿ ಕಂಡುಬರುತ್ತಾರೆ. ಇವರು ಕನ್ನಡ ಭಾಷೆ ಮತ್ತು ಅದರ ಲಿಪಿಯನ್ನು ಬಳಸುತ್ತಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಗಾಣಿಗರು ತೆಂಗಿನ ಕಾಯಿ (ಕೊಬ್ಬರಿ)ಯಿಂದ ಎಣ್ಣೆಯನ್ನು ತೆಗೆಯುತ್ತಾರೆ.

ಗಾಣಿಗರು ಮಧ್ಯಮ ಮತ್ತು ಮಧ್ಯಮಕ್ಕಿಂತ ಕೆಳಗಿನ ಎತ್ತರವನ್ನು ಹೊಂದಿದ್ದಾರೆ. ಈ ಎತ್ತರವು ಸರಾಸರಿಯಾಗಿ ೧೬೫೧.೬ಮಿ.ಮೀ. ಆಗಿದೆ. ತಲೆಗೆ ಸಂಬಂಧಪಟ್ಟ ಸೂಚ್ಯಂಕವು ೭೮.೨೭ ಆಗಿದೆ. ಮಧ್ಯಮ ಶಿರಸ್ಸೂಚ್ಯಂಕವು ೫೩% ಇದೆ. ದೀರ್ಘ ಶಿಷ್ಯಮ ೨೬% ಇದ್ದರೆ ಹೃಸ್ವಶೀರ್ಷಮ ೨೦% ಇದೆ ಥರ್ಸ್ಟನ್‌ರು ಸರಾಸರಿ ಶಿರ ಸೂಚ್ಯಂಕವನ್ನು ಮೊದಲು ೮೦.೫ ಎಂದು ಹೇಳಿ ೭೭.೬ ಎಂದು ಘೋಷಿಸಿದರು.

ವೀರಶೈವ ಪಂಗಡಕ್ಕೆ ಸೇರಿದ ಇವರು ಸಸ್ಯಾಹಾರಿಗಳಾಗಿದ್ದಾರೆ. ಗಾಣಿಗರು ಪ್ರಮುಖ ಆಹಾರ ಜೋಳ, ರಾಗಿ, ಗೋದಿ, ನವಣೆ, ಅಕ್ಕಿ ಮುಂತಾದವುಗಳನ್ನು ಬಳಸುತ್ತಾರೆ. ಇವರು ವಿವಿಧ ತರಕಾರಿಗಳನ್ನು ಮತ್ತು ಕಮಲದ ಕಂದ ಮೂಲಗಳನ್ನು ತಿನ್ನುತ್ತಾರೆ.

ಪ್ರಧಾನ ಗಾಣಿಗರಲ್ಲಿ ಕಿರುಗಾಣಿಗ, ಹೆಗ್ಗಾಣಿಗ ಮತ್ತು ತೆಲುಗು ಗಾಣಿಗರೆಂಬ ಮೂರು ಪ್ರಕಾರಗಳಿವೆ. ಹೆಗ್ಗಾಣಿಗರು ಸಸ್ಯಾಹಾರಿಗಳಾಗಿರುವುದರಿಂದ ಮತ್ತು ವೀರಶೈವ ಧರ್ಮವನ್ನು ಸ್ವೀಕರಿಸಿರುವುದರಿಂದ ಇವರು ಗಾಣಿಗರಲ್ಲಿ ಶ್ರೇಷ್ಠರೆಂದು ಪರಿಗಣಿಸಲ್ಪಡುತ್ತಾರೆ. ಇವರ ನಂತರದವರು ಕಿರುಗಾಣಿಗರು. ಶಿವ ಜ್ಯೋತಿ ಪಣ ಎಂಬ ಪದವನ್ನು. ಹೆಗ್ಗಾಣಿಗ ಮತ್ತು ಕಿರುಗಾಣಿಗರಿಬ್ಬರು ಬಳಸುತ್ತಾರೆ. ಸಜ್ಜನರು ಹೆಗ್ಗಾಣಿಗರಾಗಿದ್ದಾರೆ. ಕಿರುಗಾಣಿಗರು ಗಾಣದಲ್ಲಿ ಒಂದು ಎತ್ತನ್ನು ಬಳಸಿದರೆ, ಹೆಗ್ಗಾಣಿಗರು ಎರಡು ಎತ್ತುಗಳನ್ನು ಗಾಣದಲ್ಲಿ ಬಳಸುತ್ತಾರೆ. ಹೆಗ್ಗಾಣಿಗರು ಗಾಣದಲ್ಲಿ ಕಲ್ಲನ್ನು ಬಳಸುತ್ತಾರೆ. ಹೆಗ್ಗಾಣಿಗರಲ್ಲಿ ಕೆಲವರನ್ನು ಮುಂಡಿಗಾಣಿಗರೆಂದು ಕರೆಯುತ್ತಾರೆ.

ತೆಲುಗು ಗಾಣಿಗರು ತಮ್ಮ ಮಾತೃಭಾಷೆಯಾದ ತೆಲುಗುಗಿಂತ ಬೇರೆಯಾದ ಭಾಷೆಯನ್ನು ಮಾತನಾಡುತ್ತಾರೆ. ಈ ಗುಂಪಿನಲ್ಲಿ ತಮಿಳು ಮತ್ತು ಮರಾಠಿ ಭಾಷಿಕ ಎಣ್ಣೆ ಅರೆಯುವ ಸಮುದಾಯದವರು ಇವರಲ್ಲಿ

ಸೇರುವುದಿಲ್ಲ. ಸಾಮಾನ್ಯವಾಗಿ, ಕಿರುಗಾಣಿಗರು ತೆಲುಗು ಗಾಣಿಗರೊಂದಿಗೆ ವೈವಾಹಿಕ ಸಂಬಂಧವನ್ನು ಇಟ್ಟುಕೊಳ್ಳುವುದಿಲ್ಲ. ಆದರೆ ಇತ್ತೀಚೆಗೆ ಇಂತಹ ಸಂಬಂಧಗಳು ಅಧಿಕವಾಗಿ ನಡೆಯುತ್ತಿವೆ.

ನಂಜುಂಡಯ್ಯ ಮತ್ತು ಐಯ್ಯರರು (೧೯೩೦) ಗಾಣಿಗರಲ್ಲಿರುವ ಗೋತ್ರಗಳನ್ನು ಗುರುತಿಸಿದ್ದಾರೆ. ಅದೇ ರೀತಿಯಾಗಿ ಹಾಸನದಲ್ಲಿರುವ ಶಿವ ಜ್ಯೋತಿಪನ ಸಮುದಾಯದ ಗೋತ್ರಗಳ ವಿಷಯವನ್ನು ಮರೆತು ಹೋದಂತೆ ಕಂಡುಬಂದಿದೆ. ಮೊದಲು, ಇವರಲ್ಲಿ ೧೨ ಕುಲಗಳಿದ್ದವು ಆದರೆ ಅವುಗಳಾವುವು ಬಳಕೆಯಲ್ಲಿಲ್ಲದೆ, ಮದುವೆಯ ಸಂದರ್ಭದಲ್ಲಿ ಕೊಡು ಕೊಳ್ಳುವಿಕೆಯ ವಿಚಾರದಲ್ಲಿ ಪಂಗಡಗಳ ಹೆಸರನ್ನಷ್ಟೇ ಬಳಸಲಾಗುವುದು.

ಗಾಣಿಗರಲ್ಲಿ ಚಿಕ್ಕಪ್ಪ ಅಥವಾ ಚಿಕ್ಕಮ್ಮನ ಮಗ ಅಥವಾ ಮಗಳೊಂದಿಗೆ ಮತ್ತು, ಮಾಮ ಮತ್ತು ಸೋದರತ್ತೆಯ ಮಗ, ಮಗಳೊಂದಿಗೆ ವೈವಾಹಿಕ ಸಂಬಂಧಗಳು ನಡೆಯುತ್ತವೆ. ವಯಸ್ಕರ ನಡುವೆಯೇ ಮದುವೆ ನಡೆಯುತ್ತದೆ. ಮದುವೆಗಳು ಕರಾರಿನಂತೆ ನಡೆಯುತ್ತದೆ. ಗಂಡು ಮತ್ತು ಹೆಣ್ಣಿನ ಸಂಬಂಧಗಳು ಪರಸ್ಪರ ಭೇಟಿ ಮಾಡಿ ನಂತರ ಎರಡು ಕಡೆಯವರ ಒಪ್ಪಿಗೆಯ ನಂತರ ಲಗ್ನ ಪತ್ರಿಕೆಯನ್ನು ಬರೆಯುವ ಕಾರ್ಯಕ್ರಮ ನಡೆಯುತ್ತದೆ. ಏಕಪತ್ನಿತ್ವವು ಸಾಮಾನ್ಯವಾಗಿದೆ. ಮೊದಲ ಪತ್ನಿಯು ಬಂಜೆ ಅಥವಾ ಹುಚ್ಚಿ ಅಥವಾ ಗಂಡು ಮಗುವಿಗೆ ಜನ್ಮನೀಡದೇ ಹೋದರೆ ಆವಾಗ ಪುರುಷನು ಒಬ್ಬರಿಗಿಂತ ಅಧಿಕ ಸ್ತ್ರೀಯರನ್ನು ಮದುವೆಯಾಗಬಹುದು. ಈ ರೀತಿಯಾದ ಬಹು ಪತ್ನಿತ್ವಕ್ಕೆ ಹೆಂಡತಿಯ ಅನುಮತಿಯೂ ಅಗತ್ಯವಾಗಿದೆ.

೩೦ ವರ್ಷಗಳ ಹಿಂದೆ ಗಾಣಿಗರಲ್ಲಿ, ವಧುದಕ್ಷಿಣೆಯ ರೂಪದಲ್ಲಿ ಒಂದು ಪಳ್ಳದಷ್ಟು ಅಕ್ಕಿಯನ್ನು ವಧುವಿನ ಸಂಬಂಧಿಕರಿಗೆ (ಪಾಲಕರಿಗೆ) ನೀಡಬೇಕಾಗಿತ್ತು. ಆದರೆ ಈ ಪದ್ಧತಿಯನ್ನು ಈಗ ನಿಷೇಧಿಸಲಾಗಿದೆ. ಇದರ ಬದಲು ಈಗ ವರದಕ್ಷಿಣೆಯನ್ನು ವರನ ಪಾಲಕರು ಕೇಳಿದಷ್ಟು ಕೊಡುವ ಸಂಪ್ರದಾಯ ಬೆಳೆದು ಬಂದಿದೆ.

ಮದುವೆಯ ನಂತರದ ಜೀವನವು ಪುರುಷನ ಮನೆಯಲ್ಲೇ ನಡೆಯುತ್ತದೆ. ಒಂದು ವೇಳೆ ಸ್ತ್ರೀಯು ಪರಿತ್ಯಜಿಸಲ್ಪಟ್ಟರೆ, ಆವಾಗ ಗಂಡನು ಅವಳಿಗೆ ಜೀವನಾಂಶವನ್ನು ಕೊಡಬೇಕಾಗುತ್ತದೆ. ಆದರೆ ಅಂತಹ ಪರಿಸ್ಥಿತಿಗಳು ಬಹಳ ಕಡಿಮೆ ನಡೆಯುತ್ತದೆ. ಗಂಡನು ಬದುಕಿದ್ದಾಗ ಸ್ತ್ರೀಯು ಇನ್ನೊಂದು ಮದುವೆ ಆಗುವಂತಿಲ್ಲ. ಒಂದು ವೇಳೆ ಈ ರೀತಿಯಾಗಿ ಮದುವೆಯಾದರೆ ಸಮುದಾಯವು ಅವಳ ಸಂಸಾರದಲ್ಲಿ ಸಾಮಾಜಿಕ ನಿರ್ಬಂಧವನ್ನು ವಿಧಿಸುತ್ತದೆ. ವಿಧವೆಗೆ ಮಾತ್ರ ಮರುಮದುವೆಯ ಅವಕಾಶವಿದೆ. ಸೋದರಿಯ ಪುನರ್ವಿವಾಹಕ್ಕೆ ಅವಕಾಶವಿದೆ, ಆದರೆ ಮೃತನ ಪತ್ನಿಯ ಪುನರ್ವಿವಾಹಕ್ಕೆ ಅವಕಾಶವಿಲ್ಲ.

ಸಮುದಾಯದ ಹಿರಿಯರು ಮದುವೆಯನ್ನು ನಡೆಸಿಕೊಡುತ್ತಾರೆ. ಮತ್ತು ವಿಧವಾ ಸಹೋದರಿ ಅಥವಾ ಮಗಳನ್ನು ನೋಡಿಕೊಳ್ಳುತ್ತಾರೆ. ತಂದೆಯ ಆಸ್ತಿಯಲ್ಲಿ ಪುತ್ರರು ಸಮಾನವಾದ ಪಾಲನ್ನು ಪಡೆಯುತ್ತಾರೆ. ಒಂದು ವೇಳೆ ಸ್ತ್ರೀಗೆ ಮದುವೆಯಾಗದೆ ಬ್ರಾಹ್ಮಚಾರಿಣಿಯಾಗಿದ್ದರೆ ಅವಳ ಜೀವನ ನಿರ್ವಹಣೆಗಾಗಿ ಒಂದು ಅಂಶ ಪಾಲನ್ನು ಪೂರ್ವಜರ ಆಸ್ತಿಯಲ್ಲಿ ತೆಗೆದಿಡಲಾಗುವುದು. ಪಾಲುದಾರಿಕೆಯ ಸಂದರ್ಭದಲ್ಲಿ ಹಿರಿಯರು

ಬದುಕಿದ್ದರೆ ಅಜ್ಜಿ ಪಾಲು ರೂಪದಲ್ಲಿ ಕೆಲವು ಅಂಶದಷ್ಟು ಆಸ್ತಿಯನ್ನು ತೆಗೆದಿಡಲಾಗುವುದು. ತಂದೆಯ ನಂತರ ಹಿರಿಯ ಮಗನು ಸಮುದಾಯದ ಹಿರಿಯವನಾಗಿ ನಿಯುಕ್ತಿಗೊಳ್ಳುತ್ತಾನೆ.

ಗಾಣಿಗರ ಮಹಿಳೆಯರು ಸಂಬಳವನ್ನು ಪಡೆಯುವುದಕ್ಕಾಗಿ ಕೃಷಿ ಚಟುವಟಿಕೆಗಳನ್ನು ಮಾಡಿದರೆ, ಅವಳು ಸಂಪಾದಿಸಿದ ಹಣವನ್ನು ಪುರುಷನು ನಿಯಂತ್ರಿಸುವನು. ಸಾಮಾಜಿಕ ಹಿಡಿತದಲ್ಲಿ, ಸಮುದಾಯದ ಆಚರಣೆಗಳಲ್ಲಿ ಮತ್ತು ಸಮಾಜದ ಧಾರ್ಮಿಕಾಚರಣೆಗಳಲ್ಲಿ ಸ್ತ್ರೀಯರಿಗೆ ಯಾವುದೇ ನಿರ್ಬಂಧಗಳಿಲ್ಲ. ಅದೇ ರೀತಿಯಾಗಿ, ಕೌಟುಂಬಿಕ ಸಂಪ್ರದಾಯಗಳಲ್ಲಿ ಮತ್ತು ಧಾರ್ಮಿಕ ಆಚರಣೆಗಳಲ್ಲಿ ಮಹಿಳೆಯರು ಪ್ರಮುಖ ಪಾತ್ರವನ್ನು ವಹಿಸುತ್ತಾರೆ.

ಗಾಣಿಗ ಮಹಿಳೆಯರು ಪ್ರಥಮ ಬಾರಿಗೆ ಗರ್ಭಿಣಿಯಾದಾಗ, ಅವಳ ಪಾಲಕರು ಅವಳನ್ನು ಪ್ರಸವಕ್ಕಾಗಿ ತಮ್ಮ ಮನೆಗೆ ಕರೆದುಕೊಂಡು ಹೋಗುತ್ತಾರೆ. ಅಟ್ಟಕ್ಕಿ ಉಣಿಸುವುದು ಅಥವಾ ಬಸಿರು ಹೊಸಗಿ (ಗರ್ಭಿಣಿಯರ ಸಂಪ್ರದಾಯಾಚರಣೆ)ಯನ್ನು ಆಚರಿಸಲಾಗುತ್ತದೆ. ಆ ಸಂದರ್ಭದಲ್ಲಿ ಕೋಳಿ ಮಾಂಸ ಮತ್ತು ಸಿಹಿ ತಿಂಡಿಗಳನ್ನು ಅವಳಿಗೆ ನೀಡಲಾಗುತ್ತದೆ. ಇದನ್ನು ಅವಳ ಗರ್ಭಿಣಿ ಅವಸ್ಥೆಯ ೫ ಅಥವಾ ೭ನೆಯ ತಿಂಗಳಿನಲ್ಲಿ ನಡೆಸಲಾಗುತ್ತದೆ. ವೃದ್ಧಿ(ಜನನ), ಅಶೌಚ(ಮೈಲಿಗೆ)ವನ್ನು ಹತ್ತು ದಿನಗಳವರೆಗೆ ಆಚರಿಸಲಾಗುತ್ತದೆ. ಜನನದ ನಂತರ ೧೨ನೆಯ ದಿನದಂದು ನಾಮಕರಣವಿರುತ್ತದೆ, ಅಂದು ಬಂಧು ಬಾಂಧವರಿಗೆ ಸಸ್ಯಾಹಾರಿ ಊಟವನ್ನು ಹಾಕಲಾಗುವುದು. ಒಬ್ಬ ಬ್ರಾಹ್ಮಣನು ಮಗು ಜನಿಸಿದ ನಕ್ಷತ್ರದ ಅನುಸಾರ ಹೆಸರನ್ನು ಸೂಚಿಸುತ್ತಾನೆ.

ಈ ಸಮುದಾಯದ ಹುಡುಗಿಯು ಮೈನೆರೆದಾಗ, ಹೊಸಗೆ ಎಂಬ ಆಚರಣೆಯನ್ನು ಮಾಡಲಾಗುವುದು. ಅವಳ ಪ್ರಥಮ ರಜೋದರ್ಶನದ ದಿನದಂದು, ಮನೆಯೊಳಗೆ ಒಂದು ಗುಡಿಸಲನ್ನು ನಿರ್ಮಿಸಿ, ಅಲ್ಲಿ ಸೋದರ ಮಾವನು ಹತ್ತಿ ಮರದ, ಹಲಸಿನ ಮತ್ತು ಮಾವಿನ ಮರದ ಎಲೆಗಳನ್ನು ಹರಡುತ್ತಾನೆ. ಮೈಲಿಗೆಯು ೧೧ ದಿನಕ್ಕೆ ಮುಗಿಯುತ್ತದೆ. ೧೨ನೆಯ ದಿನದಂದು ಅವಳಿಗೆ ಸ್ನಾನವನ್ನು ಮಾಡಿಸಿ ಹೊಸಬಟ್ಟೆಗಳನ್ನು ತೊಡಿಸಿ, ಆರತಿಯನ್ನು ಬೆಳಗಿಸಲಾಗುವುದು. ಬಂಧು ಬಾಂಧವರಿಗೆ ಊಟವನ್ನು, ಸಿಹಿಯನ್ನು ಹಂಚಲಾಗುವುದು.

ಗಾಣಿಗರು ಮದುವೆ ಸಮಾರಂಭವನ್ನು ವಧುವಿನ ಮನೆಯಲ್ಲಿ ನಡೆಸುತ್ತಾರೆ. ಹುಡುಗ ಮತ್ತು ಹುಡುಗಿಯರ ಪಾಲಕರು ಮದುವೆಯ ಸಂಬಂಧವನ್ನು ವಿನಿಮಯ ಮಾಡಿಕೊಳ್ಳುತ್ತಾರೆ. ಮತ್ತು ಹುಡುಗ ಮತ್ತು ಹುಡುಗಿಯು ಹಿರಿಯರ ನಿರ್ಧಾರಕ್ಕೆ ಗೌರವ ಕೊಡಬೇಕು. ಬ್ರಾಹ್ಮಣ ಪುರೋಹಿತರೊಂದಿಗೆ ಚರ್ಚಿಸಿದ ನಂತರ ವಿವಾಹ ದಿನಾಂಕವನ್ನು ನಿರ್ಧರಿಸಲಾಗುವುದು. ಮದುವೆಯು ದೊಡ್ಡ 'ಪೆಂಡಾಲ'ಗಳಲ್ಲಿ ನಡೆಸಲಾಗುವುದು ಅಲ್ಲಿ ೧೨ ಮಣ್ಣಿನ ಮಡಿಕೆಗಳನ್ನು ೧೨ ಕಂಬಗಳನ್ನು, ೧೨ ಪವಿತ್ರ ಪಾತ್ರೆಗಳನ್ನು, ೧೨ ದೀಪಗಳನ್ನು ಇಡಲಾಗುವುದು. ಮದುವೆಯ ಪ್ರಧಾನ ಸಂಪ್ರದಾಯವಾದ ಧಾರೆಯು ದೇವಾಲಯದಲ್ಲಿ ನಡೆಯುತ್ತದೆ. ಆದರೆ ಉಳಿದ ಸಂಪ್ರದಾಯ ಹುಡುಗಿಯ ಮನೆಯಲ್ಲಿ ಮದುವೆಯ ದಿನದಂದೇ

ನಡೆಯುತ್ತದೆ. ಈ ಸಂಪ್ರದಾಯಗಳಲ್ಲಿ ಬ್ರಾಹ್ಮಣರಿರುತ್ತಾರೆ. ನಂತರದ ದಿನದಂದು, ವಧುವನ್ನು ವರನೊಂದಿಗೆ ಪಾಲಕರ ಮನೆಗೆ ಕರೆದುಕೊಂಡು ಬರಲಾಗುವುದು. ನಂತರ ಮೂರು, ನಾಲ್ಕು ದಿನಗಳಲ್ಲಿ ಅವಳು ತನ್ನ ಮನೆ(ಗಂಡನ ಮನೆ)ಗೆ ಮರಳುತ್ತಾಳೆ. ಅಲ್ಲಿ, ಬಂಧು ಬಾಂಧವರಿಗೆ ವರನ ಸಂಬಂಧಿಕರಿಂದ ಮಾಂಸದ ಊಟವನ್ನು ಬಡಿಸಲಾಗುವುದು. ಇದನ್ನು 'ಬೀಗರ ಊಟ' ಎಂದು ಕರೆಯಲಾಗುತ್ತದೆ.

ಹಿಂದಿನ ಕಾಲದಲ್ಲಿ, ಗಾಣಿಗರಲ್ಲಿ ಯಾರಾದರೊಬ್ಬರು ಮರಣ ಹೊಂದುತ್ತಾರೆಂದು ತಿಳಿದಾಗ ಅವರನ್ನು ಮನೆಯಿಂದ ಹೊರಗೆ ತರಲಾಗುತ್ತಿತ್ತು. ಆದರೆ ಈ ಪದ್ಧತಿಯು ಈಗ ನಿಂತು ಹೋಗಿದೆ. ಶವಕ್ಕೆ ಹೊಸಬಟ್ಟೆಯನ್ನು ತೊಡಿಸಲಾಗುವುದು. ವಿಭೂತಿ, ಕುಂಕುಮ ಮತ್ತು ಅರಿಶಿಣವನ್ನು ಶವದ ಮೇಲೆ ಅದನ್ನು ಹೂಳುವ ಮೊದಲು ಹಾಕಲಾಗುವುದು. ಶವದ ತಲೆಯು ಉತ್ತರಕ್ಕೆ ಬರುವಂತೆ ಇಟ್ಟು ಹೂಳಲಾಗುವುದು. ಮರಣದ ಮೈಲಿಗೆಯು ೧೨ ದಿನಗಳ ತನಕ ಇರುತ್ತದೆ. ೧೨ನೆಯ ದಿನದಂದು ಬ್ರಾಹ್ಮಣ ಪುರೋಹಿತರು ಪುಣ್ಯಾಹವನ್ನು ಆಚರಿಸುತ್ತಾರೆ. ಪ್ರತಿ ವರ್ಷ ಪಿತೃ ಪಕ್ಷದಂದು ಮಾಂಸಹಾರಿ ಆಹಾರವನ್ನು ಅರ್ಪಿಸುವ ಮೂಲಕ ಪಿತೃಗಳಿಗೆ ತೃಪ್ತಿಗೊಳಿಸಲಾಗುವುದು.

ಗಾಣಿಗರಿಗೆ ಪ್ರಧಾನ ಆರ್ಥಿಕ ಉತ್ಪತ್ತಿಯು ಭೂಮಿಯಾಗಿದೆ. ಅವರು ಕೃಷಿಕರು, ಕೃಷಿ ಕಾರ್ಮಿಕರು ಮತ್ತು ಸಣ್ಣ ವ್ಯಾಪಾರಸ್ಥರಾಗಿದ್ದಾರೆ. ಆದರೆ ಅವರ ಸಂಪ್ರದಾಯಸ್ಥ ವ್ಯಾಪಾರವೂ ಎಣ್ಣೆ ತೆಗೆಯುವುದಾಗಿದೆ. ಆದರೆ ಇತ್ತೀಚೆಗೆ ಎಣ್ಣೆ ಗಿರಣಿಗಳು ಪ್ರಾರಂಭವಾದುದರಿಂದ ಇದನ್ನೇ ಅವಲಂಬಿಸಿಲ್ಲ. ಹಳ್ಳಿಗಳಲ್ಲಿ ಎಣ್ಣೆ ಗಾಣಗಳಿದ್ದರೂ ಅದನ್ನು ಅವರು ಎರಡನೆಯ ಉದ್ಯೋಗವನ್ನಾಗಿ ಬಳಸಿಕೊಂಡಿದ್ದಾರೆ. ಗ್ರಾಮಾಂತರ ಪ್ರದೇಶದ ವಿದ್ಯಾವಂತ ಗಾಣಿಗರು ಸಣ್ಣ ವ್ಯವಹಾರಗಳನ್ನು ಆಶ್ರಯಿಸಿದ್ದಾರೆ. ಅವರು ಉನ್ನತ ಹುದ್ದೆಗಳನ್ನು ಬಯಸಿದ್ದಾರೆ.

ಗಾಣಿಗ ಸಮುದಾಯದ ಸಭೆಯನ್ನು 'ಕುಲ ಪಂಚಾಯತ್' ಎಂದು ಕರೆಯುತ್ತಾರೆ. ಅವರ ಸಮುದಾಯಕ್ಕೆ ಸಂಬಂಧಪಟ್ಟ ಯಾವುದೇ ನಿರ್ಧಾರಗಳನ್ನು ಹಿರಿಯರು ನಿರ್ಧರಿಸುತ್ತಾರೆ. ಇದಕ್ಕೆ ಅಧ್ಯಕ್ಷರೆಂಬುವುದಾಗಿ ಇರುವುದಿಲ್ಲ. ಆದರೆ 'ಕಟ್ಟೆಮನೆ' ಎಂಬುದಾಗಿ ಇದ್ದು ಅದಕ್ಕೆ ಗೌಡ; ಅಥವಾ ಸೇಟ್ ಅಥವಾ ಯಜಮಾನರೆಂದು ಇರುತ್ತಾರೆ. ವಿವಿಧ ಪ್ರದೇಶಗಳಲ್ಲಿ ಇಂತಹ ೯ ಕಟ್ಟೆ ಮನೆಗಳು ಪ್ರಸಿದ್ಧಿಯಾಗಿದೆ. ಅವುಗಳೆಂದರೆ ಹಾಸನ, ಅರಕಲಗೂಡು, ಬಾಣಾವರ್, ಬೇಲೂರು, ಚಿಕಮಗಳೂರು, ಚೆನ್ನರಾಯ ಪಟ್ಟಣ, ನರಸೀಪುರ, ಅರಕಲಗೂಡು ಮತ್ತು ಶ್ರವಣಬೆಳಗೊಳ. ಮದುವೆಯ ಸಂದರ್ಭದಲ್ಲಿ ಈ ಪ್ರದೇಶದ ಹಿರಿಯರಿಗೆ ಸಾಂಪ್ರದಾಯಿಕ ಕಾಣಿಕೆಯಂತೆ ವೀಳ್ಯೆದೆಲೆ ಮತ್ತು ಅಡಿಕೆಯನ್ನು ನೀಡಲಾಗುತ್ತದೆ. ತಮ್ಮ ಸಮುದಾಯಕ್ಕೆ ಸಂಬಂಧಪಟ್ಟ ಯಾವುದೇ ಪ್ರಧಾನ ಚರ್ಚೆಗಳಿದ್ದರೆ ಮಾತ್ರ ಅವರು ಬಂದು ಸೇರುತ್ತಾರೆ. ಗ್ರಾಮೀಣ ಸಭೆಗೆ ಚುನಾವಣೆಯು ಬಾಯಿ ಮಾತಿನಲ್ಲಿ ನಡೆಯುತ್ತದೆ. ಆದರೆ ಇಂತಹ ಸಮುದಾಯಗಳು ಯಾವುದೇ ಪರಿಣಾಮವನ್ನು ಬೀರುತ್ತಿಲ್ಲ. ಸಣ್ಣ ಅಪರಾಧಗಳ ಅಪರಾಧಿಗಳಿಗೆ ಹಣದ ಮೂಲಕ ಶಿಕ್ಷೆಯನ್ನು ವಿಧಿಸಲಾಗುತ್ತದೆ. ಲೈಂಗಿಕ ಹಿಂಸೆ ಮೊದಲಾದ ಪ್ರಧಾನ ಅಪರಾಧಗಳು ಸಭೆಯಲ್ಲಿ

ಚರ್ಚಿಸಲಾಗುವುದಿಲ್ಲ. ಜಿಲ್ಲಾ ಮಟ್ಟದ, ರಾಜ್ಯಮಟ್ಟದ ಮತ್ತು ರಾಷ್ಟ್ರ ಮಟ್ಟದ ಗಾಣಿಗರ ಸಂಘಟನೆಗಳಿದ್ದು, ಅವುಗಳು ಸಮುದಾಯದ ಕಲ್ಯಾಣಕ್ಕಾಗಿ ದುಡಿಯುತ್ತವೆ.

ಗಾಣಿಗರು ಹಿಂದೂಗಳಾಗಿದ್ದಾರೆ. ಇವರು ದೇವ ಮತ್ತು ದೇವತೆಗಳಿಬ್ಬರನ್ನೂ ಪೂಜಿಸುತ್ತಾರೆ. ಕೆಲವು ಪಂಗಡದವರಿಗೆ ಚೆಲುವರಾಯ ಸ್ವಾಮಿಯು ದೇವರಾಗಿದ್ದಾರೆ, ದಿಂಡಿಗಲ್ಲು ಸಂತೆ ಕಾಳಮ್ಮ ದೇವಿಯು ದೇವತೆಯಾಗಿದ್ದಾಳೆ. ಅದೇ ರೀತಿಯಾಗಿ ಕೆಲವು ಪಂಗಡಗಳಿಗೆ ಚೆನ್ನಿಗರಾಯಸ್ವಾಮಿ ಮತ್ತು ಬೆಂಕಿನಕೆರೆ ಅಮ್ಮಳು ದೇವ ಮತ್ತು ದೇವತೆಯಾಗಿದ್ದಾರೆ. ಯೋಗ ನರಸಿಂಹ, ಆಂಜನೇಯ ಮತ್ತು ಮಾರಿಯಮ್ಮ ಇವರು ಸ್ಥಳೀಯ ದೇವರಾಗಿದ್ದಾರೆ. ಇವರು ಪುಣ್ಯ ಕ್ಷೇತ್ರದ ದರ್ಶನಕ್ಕಾಗಿ ಹಾಸನ ಜಿಲ್ಲೆಯ ಬೇಲೂರಿಗೂ, ದಕ್ಷಿಣ ಕನ್ನಡ ಜಿಲ್ಲೆಯ ಧರ್ಮಸ್ಥಳಕ್ಕೂ ಹೋಗುತ್ತಾರೆ.

ಯುಗಾದಿ, ಮಲದ ಹಬ್ಬ, ತೇರೋತ್ಸವ, ಗೌರಿ ಗಣೇಶ, ದೀಪಾವಳಿ, ಮಕರ ಸಂಕ್ರಾಂತಿ ಮತ್ತು ಶಿವರಾತ್ರಿ ಇವುಗಳು ಗಾಣಿಗರು ಆಚರಿಸುವ ಪ್ರಧಾನ ಹಬ್ಬಗಳಾಗಿವೆ. 'ಪೆರಿಯಾ ಪಟ್ಟಣದಮ್ಮನ ಹಬ್ಬ'ವು ಈ ಸಮುದಾಯದ ಏಳಿಗೆಗಾಗಿ ಆಚರಿಸುವ ಹಬ್ಬವಗಿದೆ.

ಗಾಣಿಗರಲ್ಲಿ, ಸಹಭೋಜನವು ಬ್ರಾಹ್ಮಣ, ಲಿಂಗಾಯತ ಮತ್ತು ಇತರ ಸಸ್ಯಾಹಾರಿ ಉಚ್ಚಸ್ತರೀಯ ಗುಂಪುಗಳೊಂದಿಗೆ ನಿರ್ಬಂಧವನ್ನು ವಿಧಿಸಲಾಗಿದೆ. ಇವರಿಗಿಂತ ಹಂದಿ ಮಾಂಸವನ್ನು ತಿನ್ನುವಂತಹ ಒಕ್ಕಲಿಗರು ಕೆಳವರ್ಗದವರಾಗಿದ್ದರು. ಗಾಣಿಗ ಪುರುಷರು ಅವರೊಂದಿಗೆ ಊಟ ಮಾಡುತ್ತಾರೆ. ಆದರೆ ಸ್ತ್ರೀಯರು ಅವರೊಂದಿಗೆ ಊಟ ಮಾಡುವುದಿಲ್ಲ. ದೇವಾಂಗರು ಇವರಿಗೆ ಸಮಾನರಾಗಿದ್ದಾರೆ. ಬೆಸ್ತರು ಇವರಿಗಿಂತ ಕೆಳವರ್ಗದವರಾಗಿದ್ದಾರೆ.

ಎಲ್ಲಾ ಸಮುದಾಯದವರು ಸಾಮಾಜಿಕ ಶೋಷಣೆಗಳಿಂದ ಜಾಗೃತರಾಗಿದ್ದಾರೆ. ಆದಿ ಕರ್ನಾಟಕದವರನ್ನು ಬಿಟ್ಟು ಉಳಿದ ಸಮುದಾಯದವರು ಗಾಣಿಗರೊಂದಿಗೆ ಬೆರೆಯುತ್ತಾರೆ. ವರ್ಣ ವ್ಯವಸ್ಥೆಯಲ್ಲಿ ಗಾಣಿಗರು 'ವೈಶ್ಯ' ವರ್ಗಕ್ಕೆ ಸೇರಿದವರಾಗಿದ್ದಾರೆ. ಆಧುನಿಕ ಪ್ರಗತಿಯ ಕೊಂಡಿಯಾಗಿ ಈ ಸಮುದಾಯದಲ್ಲಿ ಶಿಕ್ಷಕರು, ಇಂಜಿನಿಯರ್‌ಗಳು, ಆಡಳಿತಗಾರರು ಮತ್ತು ಉನ್ನತ ಹುದ್ದೆಯಲ್ಲಿರುವವರು ಇದ್ದಾರೆ. ರಾಜಕೀಯ ನಾಯಕತ್ವವು ಹಳ್ಳಿ, ತಾಲೂಕು ಮತ್ತು ಜಿಲ್ಲೆಗಳ ಸ್ತರದಲ್ಲಿ ಬೇರೂರಿದೆ.

ಈ ಸಮುದಾಯದ ಹುಡುಗ ಮತ್ತು ಹುಡುಗಿಯರಿಗೆ ಪ್ರೌಢ ಶಾಲೆಯ ಸ್ತರದ ವರೆಗಿನ ಶಿಕ್ಷಣಕ್ಕೆ ಉತ್ತೇಜನ ನೀಡಲಾಗುತ್ತದೆ. ಗಾಣಿಗರು ಆಧುನಿಕ ವೈದ್ಯ ಪದ್ಧತಿಯನ್ನು ಮತ್ತು ಕುಟುಂಬ ಯೋಜನೆಯನ್ನು ಅನುಸರಿಸುತ್ತಾರೆ. ಇವರು ಗ್ರಾಮೀಣ ಉದ್ಯೋಗ ಕಾರ್ಯಕ್ರಮದ ಪ್ರಯೋಜನವನ್ನು ಪಡೆದುಕೊಂಡಿದ್ದಾರೆ. ಗ್ರಾಮಗಳಲ್ಲಿ ನೀರಾವರಿ ಸೌಲಭ್ಯಗಳನ್ನು ದೊರಕಿಸಲಾಗಿದೆ. ಇವರು ಕೃಷಿಯಲ್ಲಿ ರಸಗೊಬ್ಬರ ಮತ್ತು ರಾಸಾಯನಿಕ ಗೊಬ್ಬರವನ್ನು ಬಳಸುತ್ತಾರೆ.[೨]

"ಪೀಪಲ್ ಆಫ್ ಇಂಡಿಯಾ ಕರ್ನಾಟಕ"ದ ಸಂಪಾದಕರು ತಿಳಿಸುವ ಗಾಣಿಗರ ಉಡುಗೆ ತೊಡುಗೆ, ಆಹಾರ ಮತ್ತು ಆಚರಣೆಗಳಿಗೆ ಸಂಬಂಧಿಸಿದ ಅದರಲ್ಲೂ ಬಳ್ಳಾರಿ ಜಿಲ್ಲೆಯ ಅಧ್ಯಯನದ ಸಂದರ್ಭದಲ್ಲಿ

ಗಾಣಿಗರು ವೀರಶೈವ ನಡುವಿನ ಬಾಂಧವ್ಯದ ಭಾವನಾತ್ಮಕ ಬೆಸುಗೆಯಂತಿದ್ದಾರೆ. ಈ ಪರಿಯ ಸಂಸ್ಕೃತಿಯ ವಿವರಗಳಿರುವ ಗಾಣಿಗರ ಕುರಿತಾಗಿ ಸಾಕಷ್ಟು ಅಧ್ಯಯನ ಯಾಕೆ ಸಾಧ್ಯವಾಗಿಲ್ಲ? ಎನ್ನುವುದು ಯೋಚಿಸಬೇಕಾದುದು.

ಮೇಲಿನ ಎರಡು ಅಧ್ಯಯನಗಳ ಹೊರತಾಗಿ ಗಾಣಿಗರ ಕುರಿತು ವಿಸ್ತಾರವಾದ ಮಾಹಿತಿ ನಮಗೆ ದೊರೆಯುವ ಮೂರನೆಯ ಆಕರವೆಂದರೆ ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಾಚಾರಿ ಅವರು ರಚಿಸಿರುವ "ಕ್ಯಾಸ್ಟ್ ಆಂಡ್ ಟ್ರೈಬ್ಸ್ ಆಫ್ ಸೌತೇರನ್ ಇಂಡಿಯಾ"ದ ಎರಡನೆ ಸಂಪುಟ, ೧೯೮೭, ಪುಟ ೨೬೩ರಲ್ಲಿ ಥರ್‌ಸ್ಟನ್ ಕೊಡುವ ವಿವರಗಳು ಆಂಧ್ರಪ್ರದೇಶದಲ್ಲಿನ 'ಗಾಂಡ್ಲ', ಜನಾಂಗವನ್ನು ಕುರಿತಾದವು. ತಮಿಳುನಾಡಿನಲ್ಲಿ 'ವಣಿಯನ್' ಅದು ಕನ್ನಡದಲ್ಲಿ 'ಗಾಣಿಗ' ಎಂದೂ, ಕೇರಳ ರಾಜ್ಯದಲ್ಲಿ 'ಚಟ್ಟಿಯಾರ್' ಎಂದೂ ಆಯಾ ರಾಜ್ಯದ ಭಾಷೆಯ ರೂಪವನ್ನು ಪಡೆದುಕೊಂಡಿದೆ. 'ಥರ್‌ಸ್ಟನ್' ಅವರ ಅಧ್ಯಯನ ವೈಜ್ಞಾನಿಕವಾದ, ಸಂಶೋಧನಾತ್ಮಕ ಶಿಸ್ತನ್ನು ಒಳಗೊಂಡಿದ್ದು ಕರ್ನಾಟಕದ ಸಾಂಸ್ಕೃತಿಕ ಸ್ವರೂಪದ ನಿಜಲಕ್ಷಣಗಳನ್ನು ವಿವರಿಸುತ್ತದೆಯಾದ್ದರಿಂದ ಅವರ ಮಾತುಗಳನ್ನು ಇಲ್ಲಿ ಯಥಾವತ್ತಾಗಿ ಬಳಸಿಕೊಳ್ಳಲಾಗಿದೆ.

ಗಾಣಿಗ ಎಂಬ ಹೆಸರು ತೆಲುಗು ಶಬ್ದ 'ಗಾಣುಗ'ದಿಂದ ಉತ್ಪನ್ನವಾಗಿದೆ. ಇದರ ಅರ್ಥ ಎಣ್ಣೆಯ ಗಾಣ. ಗಾಣಿಗರು-ಕರಾವಳಿ ತೀರದಲ್ಲಿ ಎಣ್ಣೆಯ ಗಾಣದಲ್ಲಿ ತಿರುಗಿಸುವವರು' ಎಂಬರ್ಥವಿದೆ. ಈ ಜಾತಿಯು ಮೂರು ಉಪ ವಿಭಾಗಗಳನ್ನು ಹೊಂದಿದೆ. ಆದರೆ ಈ ಉಪ ಜಾತಿಯವರು ಒಟ್ಟಿಗೆ ಊಟ ಮಾಡುವುದಿಲ್ಲ ಮತ್ತು ಅಂತರ್ ವಿವಾಹವನ್ನು ಮಾಡಿಕೊಳ್ಳುವುದಿಲ್ಲ. ಆ ಉಪ ಜಾತಿಗಳೆಂದರೆ ಹೆಗ್ಗಾಣಿಗರು ಇವರು ಎರಡು ಎತ್ತುಗಳನ್ನು ಕಲ್ಲಿನ ಎಣ್ಣೆ ಗಾಣದಲ್ಲಿ ಬಳಸುತ್ತಾರೆ. ಕಿರುಗಾಣಿಗರು ಇವರು ಮರದ ಗಾಣದಲ್ಲಿ ಎಣ್ಣೆಯನ್ನು ತಯಾರಿಸುವವರು. ಮತ್ತು ಇವರು ಕೇವಲ ಒಂದು ಎತ್ತನ್ನು ಗಾಣದಲ್ಲಿ ಬಳಸುವ ತಯಾರಿಸುವವರು. ಸಂಗ್ರಹಾರ್ಥವಾಗಿ ಇವರನ್ನು ಜ್ಯೋತಿ ಪಣರು ಅಥವಾ ಜ್ಯೋತಿ ನಗರರು (ಬೆಳಕಿನ ನಗರದವರು) ಎಂದು ಕರೆಯುತ್ತಾರೆ. ಇವರು ಗಾಣದಲ್ಲಿ ಎಣ್ಣೆಯನ್ನು ಅರೆಯುವುದರೊಂದಿಗೆ ತಾಳೆ ಗರಿಯಿಂದ ಕೊಡೆಯನ್ನು ತಯಾರಿಸುವುದು, ಕೃಷಿ ಕಾರ್ಯ ಮತ್ತು ಕಾರ್ಮಿಕರಾಗಿ ದುಡಿಯುತ್ತಾರೆ. ಇವರು ದೇವತಾ ಪೂಜೆಗಳಿಗಾಗಿ ಬ್ರಹ್ಮಣರನ್ನು ನಿಯೋಜಿಸುತ್ತಾರೆ. ಆನೆಗೊಂದಿಯ ವ್ಯಾಸರಾಯ ಮಠದ ಮಠಾಧಿಪತಿಗಳು ಇವರಿಗೆ ಗುರುಗಳು. ಇವರ ಜಾತಿಯಲ್ಲಿ ಬಾಲ್ಯ ವಿವಾಹ ಪದ್ಧತಿಯಿದ್ದು ವಿಧವಾ ವಿವಾಹ, ಮರು ವಿವಾಹ ಪದ್ಧತಿಯು ಪ್ರಚಲಿತದಲ್ಲಿಲ್ಲ ಇವರು ಮೀನು, ಮಾಂಸ ಮತ್ತು ಕೋಳಿಯನ್ನು ತಿನ್ನುವರು. ಆದರೆ ಸಾರಾಯಿಯನ್ನು ಕುಡಿಯುವುದಿಲ್ಲ. ಚೆಟ್ಟಿ ಎಂಬುವುದು ಅವರ ಅಡ್ಡ ಹೆಸರಾಗಿದೆ. ೧೮೯೧ರ ಮದ್ರಾಸ್ ಜನಗಣತಿಯ ವರದಿಯ ಪ್ರಕಾರ, ಗಾಣಿಗರ ಗುರುಗಳು ಶೃಂಗೇರಿ ಮಠದ ಅಧಿಪತಿಗಳಾಗಿದ್ದರು ಮತ್ತು ಅವರು ತಮ್ಮ ಕಾರ್ಯಕ್ರಮಗಳಿಗೆ ಬ್ರಾಹ್ಮಣರನ್ನು ಯೋಜಿಸುತ್ತಿದ್ದರು. ಶೃಂಗೇರಿಯು ಸ್ಮಾರ್ತ ಮತದವರ ಮಠವಾಗಿದ್ದು ಇದು ತಂಜಾವೂರು, ಕುಂಭಕೋಣಂ ಮೊದಲಾದ ಸ್ಥಳಗಳಲ್ಲಿ ತನ್ನ ಶಾಖೆಯನ್ನು ಹೊಂದಿದೆ. ಇದೇ ಹೆಸರಿನಲ್ಲಿ ಮೈಸೂರು ನಗರದಲ್ಲೊಂದು ಸ್ಥಳವಿದ್ದು ಇದರಿಂದಲೇ ಮಠವು ತನ್ನ ಹೆಸರನ್ನು ಪಡೆದಿದೆ.

ಮೈಸೂರು ಸಂಸ್ಥಾನದ ಗಾಣಿಗರ ಸಂಬಂಧ ಪಟ್ಟಂತೆ ವಿ.ಎನ್. ನರಸಿಂಹ ಅಯ್ಯಂಗಾರರ ಅಭಿಪ್ರಾಯ ಈ ರೀತಿಯಾಗಿದೆ. "ಸಾರ್ವಜನಿಕವಾಗಿ ಸಂಗ್ರಹಿಸಲ್ಪಟ್ಟ ಸಂಖ್ಯೆಯು ಈ ಜಾತಿಯವರನ್ನು ನಾಗರೀಕರೊಂದಿಗೆ ಸೇರಿಸುತ್ತದೆ. ಜಾತಿ ಶ್ರೇಷ್ಠತ್ವವು ಭಾರತದಲ್ಲಿ ವೇದಗಳ ಕಾಲದಿಂದ ಪ್ರಾರಂಭವಾಗಿದೆ. ವೇದಗಳಲ್ಲಿರುವ ಪುರುಷ ಸೂಕ್ತದ ಪ್ರಕಾರ ಬ್ರಾಹ್ಮಣರು ಬ್ರಹ್ಮನ ಮುಖದಿಂದ ಜನಿಸಿದ್ದಾರೆಂದು ಹೇಳಿದರೆ ಇದರ ಜಾತಿಯವರು ಕೂಡ ತಮ್ಮ ಜನನವನ್ನು ಇದೇ ರೀತಿಯಾಗಿ ದೈವತ್ವದ ಕಲ್ಪನೆಯನ್ನು ಮಾಡುತ್ತಾರೆ. ಗಾಣಿಗರು ಬಲವಾಗಿ ನಂಬುವಂತೆ ಅವರು ಉತ್ತರದಿಂದ ವಲಸೆ ಬಂದಿದ್ದಾರೆ. ಮೈಸೂರಿನ ಶ್ರೀಮಂತ ವ್ಯಕ್ತಿ, ಮಲ್ಲಿಕಾರ್ಜುನ ಅರಸು ಎಂಬುವವರು ಬೆಂಗಳೂರಿನಲ್ಲಿ ಮೊದಲ ಬಾರಿಗೆ ಪೇಟೆಯನ್ನು ನಿರ್ಮಿಸಿದರು. ಆ ಕಾಲದಲ್ಲಿ ನಾಗರತರೊಂದಿಗೆ ಗಾಣಿಗರು ಕೂಡ ಇಲ್ಲಿಗೆ ಬಂದಿದ್ದರೂ ಮಲ್ಲರಾಜನು ಈ ಎರಡು ಜಾತಿಯಲ್ಲಿರುವ ಹಿರಿಯ ವ್ಯಕ್ತಿಗಳನ್ನು ಸೆಟ್ಟಿಗಳು ಮತ್ತು ಯಜಮಾನರೆಂದು ನಿಯೋಜಿಸಿ ಅವರಿಗೆ ಮನೆ ತೆರಿಗೆಯನ್ನು ರದ್ದು ಪಡಿಸಿದರು. ಗಾಣಿಗರು ವೈಷ್ಣವರೂ ಆಗಿದ್ದಾರೆ, ಶೈವರೂ ಆಗಿದ್ದಾರೆ. ಇವರ ಗುರುಗಳು ಧರ್ಮಶಿವಾಚಾರ್ಯ ಸ್ವಾಮಿಗಳು, ಅವರು ಮದ್ರಾಸಿನಲ್ಲಿ ನೆಲೆಸಿರುವರು. ಕೆಲವು ಗೋತ್ರಗಳು ಸಾಮಾನ್ಯವಾಗಿ ಈ ಮದುವೆ ಸಂದರ್ಭವನ್ನು ಇಟ್ಟುಕೊಳ್ಳುವುದಿಲ್ಲ. ಅವರು ವಿಷ್ಣು ಆರಾಧಕರಾಗಿದ್ದು ತಮ್ಮ ಸಂಸ್ಥಾನದಲ್ಲಿ ಜಾತ್ರೆಯ ಸಂದರ್ಭದಲ್ಲಿ ಹನುಮಂತ ಮತ್ತು ಗರುಡನ ಚಿತ್ರವುಳ್ಳ ಧ್ವಜವನ್ನು ಹಿಡಿದುಕೊಂಡಿರುವರು. ಈ ಚಿಹ್ನೆಗಳು ಈ ವಂಶದ ಪೂರ್ವಜರಾದ ಸಿರಿಯಾಳ ಸೆಟ್ಟಿ ಎಂಬುವವನಿಗೆ ರಾಮನು ನೀಡುವುದಾಗಿದೆ. ಗಾಣಿಗರು ತಮ್ಮನ್ನು ಧರ್ಮಸಿವಾಚಾರ್ ವೈಶ್ಯರು ಎಂದು ಕರೆದುಕೊಳ್ಳುವರು. ಇವರು ಲಿಂಗ ಧರಿಸುವರು ಮತ್ತವರನ್ನು ಸಜ್ಜನರು ಎಂದು ಕರೆಯುವರು. ಆದರೆ ಆ ಸಮೂಹದಲ್ಲಿ ಇವರ ಜನಸಂಖ್ಯೆ ಬಹಳ ಕಡಿಮೆಯಿದೆ. ಇವರು ಬೇರೆ ಪಂಗಡಗಳೊಂದಿಗೆ ಯಾವುದೇ ಸಾಮಾಜಿಕ ಸಂಬಂಧಗಳನ್ನು ಇಟ್ಟುಕೊಳ್ಳುವುದಿಲ್ಲ".

ಮರಾಠರು ಸಣ್ಣ ರಾಜ್ಯದಲ್ಲಿದ್ದಂತಹ ಸಂಡೂರಿನ ಗಾಣಿಗರು ಎಣ್ಣೆ ಮತ್ತು ಕಲ್ಲು ಎಂಬ ಉಪಜಾತಿಗಳನ್ನು ಹೊಂದಿದ್ದರೂ, ಗಾಣಿಗರು ಶೇಕಡಾವಾರು ಜನಸಂಖ್ಯೆಯು ಅಧಿಕವಾಗಿದೆ. ಇವರ ಸರಾಸರಿ ಶಿರಸೂಚ್ಯಂಕ ಅಧಿಕವಾಗಿದ್ದು, ೮೦.೫ ಅಧಿಕವಾಗಿದ್ದರೆ ೭೭.೬ ಕಡಿಮೆಯಿದೆ.

W (ಡಬ್ಲ್ಯೂ) ಫ್ರಾನ್ಸಿಸ್‌ರು ತಮ್ಮ ಗ್ರಂಥ "ಗಾಣಿಗರ ಎಣ್ಣೆಗಾಣಗಳು" ಎಂಬುವುದರಲ್ಲಿ ಈ ರೀತಿಯಾಗಿ ಉಲ್ಲೇಖಿಸುವರು. ಹುಣಸೆ ಮರದ ತಿರುಳಿನಿಂದ ತಯಾರಿಸಿದಂತಹ ಮರದ ಒರಳನ್ನು ಭೂಮಿಯಲ್ಲಿ ಹುದುಗಿಸಿರುವರು. ಸಿಲಿಂಡರಿನಾಕೃತಿಯ ಮರದ ತುಂಡನ್ನು ಇದಕ್ಕೆ ಜೋಡಿಸುವರು. ಇದು ಕಬ್ಬಿಣದ ಸಲಾಕೆಯನ್ನು ಹೊಂದಿರುತ್ತದೆ. ಒಂದು ಮರದ ಉದ್ದದ ತುಂಡನ್ನು ಇದಕ್ಕೆ ಜೋಡಿಸುವರು ಅದರ ಒಂದು ತುದಿಯು ಭೂಮಿಯನ್ನು ಹೊಂದಿರುವುದು ಮತ್ತು ಅದರ ತುದಿಗೆ ಎರಡು ಎತ್ತುಗಳನ್ನು ಕಟ್ಟಿರುವರು. ಈ ಜೋಡಣೆಗೆ ರಾಟೆಯನ್ನು ಜೋಡಿಸಿರುವುದರಿಂದ ಸಿಲಿಂಡರಿನಾಕೃತಿಯ ಒತ್ತಡವು ವೇಗವಾಗಿ ಅಧಿಕವಾಗುವುದು. ಎತ್ತುಗಳು ಸುತ್ತಲು ಪ್ರಾರಂಭಿಸಿದಾಗ ಕಾಲುಗಳು ಸಿಲಿಂಡರಿನಾಕೃತಿಯ ಮರದ

ತುಂಡಿನ ತಿರುಗುವಿಕೆಯಿಂದಾಗಿ ಪುಡಿಯಾಗುವವು ಮತ್ತು ಇದರಿಂದುಂಟಾಗುವ ಎಣ್ಣೆಯು ಕೆಳಗೆ ಹರಿದು ಬರುವುದು.

ಮೇಲ್ಕಾಣಿಸಿದ ವಿಷಯವು ಒಂಟೆತ್ತು ಗಾಣಿಗರಿಗೆ ಸಂಬಂಧಿಸಿದ್ದು. ಇವರು ಎರುಡ ಎತ್ತುಗಳನ್ನು ಬಳಸಿ ತಮ್ಮ ಎಣ್ಣೆಗಾಣವನ್ನು ಬಳಸುವ ಜಾತಿಯವರಿಗಿಂತ ಉತ್ತಮವಾಗಿರುವರು. ಮೊದಲಿನವರು ಬಲಗೈ ಪಕ್ಷಕ್ಕೆ ಸೇರಿದವರಾದರೆ, ನಂತರದವರು ಎಡಗೈ ಪಕ್ಷಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಹಲವಾರು ಉಪಜಾತಿಗಳಿದ್ದು ಅವರಲ್ಲಿ ದೇವ ಮತ್ತ ಒಂಟೆತ್ತು ಇವರು ಅಂತರ್ಜಾತೀಯ ವಿವಾಹವಾಗುತ್ತಾರೆ. ಆದರೆ ಅವರಲ್ಲಿ ಕಾಶಿ, ತೇಲಿ ಮತ್ತು ಚಂದನಾಪುಗಳು ಅಂತರ್ ವೈವಾಹಿಕ ಸಂಬಂಧಗಳನ್ನು ಹೊಂದಿದ್ದಾರೆ. ಬೇರೆ ತೆಲುಗು ಜಾತಿಯವರಂತೆ ಇವರಿಗೆ ಹಲವಾರು ಗೋತ್ರಗಳಿದ್ದು. ಅವುಗಳಲ್ಲಿ ಕೆಲವುಗಳಿಗೆ ನಿರ್ಬಂಧವಿರುವುದು ಆಶ್ಚರ್ಯಕರ ಸಂಗತಿಯಾಗಿದೆ. ಉದಾಹರಣೆಗೆ ಬದ್ರನೊಲ್ಲು ಮತ್ತು ಬಲನೊಲ್ಲು ಗೋತ್ರದ ಸದಸ್ಯರು Erylhroxylon monogynum ಎಂಬ ಮರವನ್ನು ಕಡೆಯಬಾರದು. ಅದೇ ರೀತಿ ವೀರನೊಲ್ಲು ಮತ್ತು ವಿಟ್ಟನೊಲ್ಲು ಗೋತ್ರದ ಸದಸ್ಯರಿಗೆ Feronia elephantum ಎಂಬ ಮರವನ್ನು ಕಡಿಯುವುದಕ್ಕೆ ನಿಷೇಧವಿದೆ. ಆದರೆ ವೀಡೆನೊಲ್ಲು ಗೋತ್ರದವರು Nyetanthes arbar-Tristis ಎಂಬ ಮರವನ್ನು ಕಡಿಯಬಹುದು. ಕೆಲವು ಗೋತ್ರದ ಸದಸ್ಯರು ಅರಿಶಿಣ, ಕಬ್ಬು ಮತ್ತು ಸಜ್ಜೆ ಮೊದಲಾದ ಧಾನ್ಯಗಳ ವ್ಯವಸಾಯ ಮಾಡುವುದನ್ನು ನಿಷೇಧಿಸಲಾಗಿದೆ.

ಒಂಟೆತ್ತು ಗಾಣಿಗರು ಶೈವರಾಗಿದ್ದು, ಲಿಂಗಾಯತ ಬ್ರಾಹ್ಮಣರ ಆರಾಧ್ಯರು ಶಿಷ್ಯರಾಗಿರುವರು. ಕೆಲವರು ಜನಿವಾರವನ್ನು ಧರಿಸಿದರೆ ಮತ್ತೆ ಕೆಲವರು ತಮ್ಮ ತಲೆಯಲ್ಲಿ ವೈಷ್ಣವತ್ವದ ಸಂಕೇತವಾಗಿ ಕೆಂಪು ಪಟ್ಟಿಯನ್ನು ಧರಿಸುವರು. ಕೆಲವು ಭಾಗದಲ್ಲಿ ಇವರು ನೇಕಾರ ವರ್ಗದ ಆರಾಧ್ಯ ದೇವರಾದ ಚೌಡೇಶ್ವರನನ್ನು ಆರಾಧಿಸುವರು. ಕೃಷ್ಣ ಜಿಲ್ಲೆಯಲ್ಲಿ ಇವರು ಮಲ್ಲಿಕಾರ್ಜುನ ಸ್ವಾಮಿಯನ್ನು ಆರಾಧಿಸುವರು.

ಇವರ ಪ್ರಧಾನ ಉದ್ಯೋಗ ಎಣ್ಣೆಯನ್ನು ತೆಗೆಯುವುದಾಗಿದ್ದು, ಕೆಲವರು ಹತ್ತಿಯ ವ್ಯಾಪಾರ, ಬೇಳೆ ಕಾಳುಗಳ ವ್ಯಾಪಾರವನ್ನು ಮತ್ತೆ ಕೆಲವರು ವ್ಯವಸಾಯವನ್ನು ಮಾಡುವರು. ಕೆಲವು ಪ್ರದೇಶದಲ್ಲಿ ಗಾಣಕ್ಕೆ ಬಳಸುವ ಪ್ರಾಣಿಗಳ ಕಣ್ಣನ್ನು ಕಟ್ಟಿರುವುದಿಲ್ಲ. ಯಾಕೆಂದರೆ, ಕೆಲವರು ಹೇಳಿಕೆಯಂತೆ ಪ್ರಾಣಿಗಳಿಗೆ ಆ ರೀತಿಯಾಗಿ ಕಟ್ಟಿದರೆ ಸ್ವಲ್ಪ ತಿರುಗಿದ ನಂತರ ಅವುಗಳು ನಿಂತು ಬಿಡುವವು. ಶಾಸ್ತ್ರದ ಪ್ರಕಾರ ಎಳ್ಳೆಣ್ಣೆಯನ್ನು ಅರೆಯುವುದು ದೋಷಕ್ಕೆ ಕಾರಣವಾಗುವುದು. ಆದರೆ ದೇವತೆಗಳ ದೀಪಗಳಲ್ಲಿ ಇದರ ಎಣ್ಣೆಯನ್ನು ಬಳಸುವುದರಿಂದ ಅವರು ದೋಷವನ್ನು ಕ್ಷಮಿಸುವರೆಂಬ ವಾಡಿಕೆಯಿದೆ. ಗಾಣದಲ್ಲಿ ಧಾನ್ಯವನ್ನು ಹಾಕಲು ಮತ್ತು ಎಣ್ಣೆಯನ್ನು ತೆಗೆಯಲು ಎಡಗೈಯನ್ನು ಬಳಸುತ್ತಾರೆ. ತಾವೇನಾದರೂ ಅಪರಾಧವನ್ನು ಮಾಡಿದ್ದರೆ ಅದರ ಪರಿಹಾರಕ್ಕೆ ಉರಿಯುತ್ತಿರುವ ಬೆಂಕಿಗೆ ಒಂದು ತುಂಡು ಬಂಗಾರವನ್ನು ಹಾಕುವುದು ಸಾಮಾನ್ಯವಾದ ವಿಷಯವಾಗಿದೆ.

ಇವರ ವಿವಾಹ ಪದ್ಧತಿಯು ತೆಲುಗು ಪದ್ಧತಿಯಂತಿದೆ. ಆದರೆ ಕೈಗೆ ದಾರವನ್ನು ಬಿಗಿಯುತ್ತಾರೆ. ಮತ್ತು ಕೈಗೆ ಉಪ್ಪನ್ನು ಸಾಮಾನ್ಯವಾಗಿ ಕೊಡುತ್ತಾರೆ. ವರನ ಕೈಯಲ್ಲಿ ಒಂದು ಚೂರಿಯನ್ನು ಕೊಡಲಾಗುವುದು. ಅದನ್ನು ಅವನು ಮದುವೆ ಸಮಾರಂಭ ಮುಗಿಯುವ ತನಕ ಅವನ ಕೈಯಲ್ಲೇ ಹಿಡಿದುಕೊಂಡಿರಬೇಕು. ಮದುವೆಯ ಸಮಾರಂಭದಲ್ಲಿ ವರನಿಗೆ ಜನಿವಾರವನ್ನು ತೊಡಿಸಲಾಗುವುದು. ತಾಳಿಯು ಸಾಮಾನ್ಯವಾದ ಬೊಟ್ಟುವಿನಿಂದ ಮಾಡಲ್ಪಟ್ಟಿರುವುದಿಲ್ಲ. ಆದರೆ ತೆಳುವಾದ ಲೋಹದ ದಾರವಿದ್ದು ಮತ್ತು ಅದು ಸಮಾರಂಭದ ಕೊನೆಯ ದಿನದಂದು ತೆಗೆಯಲಾಗುವುದು ಮತ್ತು ಬೊಟ್ಟನ್ನು ಅವರ ಬದಲು ಇಡಲಾಗುವುದು. ಮೂರನೆಯ ದಿನದಂದು ವರ ಮತ್ತು ವಧುವರಿಬ್ಬರು ಜಮ್ಮಿ ಮರವನ್ನು ಪೂಜಿಸುತ್ತಾರೆ. ಆ ಮೇಲೆ ವರನು ತನ್ನ ಜನಿವಾರವನ್ನು ಮರದಲ್ಲಿ ಬೀಸಾಡುತ್ತಾನೆ. ಬಾಲ ದಾಸಲು ಎಂದು ಕರೆಯಲ್ಪಡುವ ಐದು ಯುವಕರು ಕೂಡಿ ಮರವನ್ನು ಪೂಜಿಸಿ, ಒಂದು ವೇಳೆ ಅವರು ಜನಿವಾರವನ್ನು ಧರಿಸಿದ್ದರೆ ಅದನ್ನು ಮರಕ್ಕೆ ಅರ್ಪಿಸುತ್ತಾರೆ. ಮರಣ ಹೊಂದಿದವರನ್ನು ಹೂಳಲಾಗುವುದು. ಒಂದು ವೇಳೆ ಮರಣ ಹೊಂದಿದವರು ಸಂಪ್ರದಾಯ ಬದ್ಧ ಶೈವರಾಗಿದ್ದಾರೆ ಅವರನ್ನು ಕುಳಿತುಕೊಂಡು ಭಂಗಿಯಲ್ಲಿ ಸಮಾದಿ ಮಾಡಲಾಗುವುದು. ಒಂದು ವೇಳೆ ಯುವ ಬ್ರಹ್ಮಚಾರಿಯ ಮರಣವಾದರೆ, ಅವನ ಶವವನ್ನು ಅರ್ಕ ವೃಕ್ಷದೊಂದಿಗೆ ಮದುವೆ ಮಾಡಿಸುತ್ತಾರೆ. ಮತ್ತು ಹೆಣವನ್ನು ಹೂಮಾಲೆಗಳಿಂದ ಅಲಂಕಾರ ಮಾಡುತ್ತಾರೆ. ಅಂತ್ಯ ಸಂಸ್ಕಾರದ ಕಾರ್ಯಕ್ರಮಗಳು ಹನ್ನೊಂದನೆಯ ದಿನದಲ್ಲಿ ಆಚರಿಸುತ್ತಾರೆ. ಕಾಗೆಗಳಿಗೆ ಅನ್ನವನ್ನು ಕೊಡಲಾಗುವುದು. ಮತ್ತು ಮರಣ ಹೊಂದಿದವನ ಆತ್ಮವನ್ನು ಸೂಚಿಸುವಂತಹ ಮರದ ಕಂಬವನ್ನು ಅವನ ಬಟ್ಟೆಗಳಿಂದ ಅಲಂಕರಿಸಲಾಗುವುದು. ವಿಧವೆಯ ಬಳೆಗಳನ್ನು ಈ ಕಂಬದ ಬಳಿಯಲ್ಲೇ ಒಡೆಯಲಾಗುವುದು ಮತ್ತು ಕೊನೆಗೆ ಅವುಗಳನ್ನು ನದಿಗೋ, ಕೆರೆಗೋ ಎಸೆಯಲಾಗುವುದು. ಗಾಣಿಗ ಎಂಬುವುದು ಎಣ್ಣೆ ತೆಗೆಯುವವರ ಮತ್ತು ಎಣ್ಣೆಯನ್ನು ಹಿಂಡುವ ಔದ್ಯೋಗಿಕಕ್ಕೆ ಹೆಸರಾಗಿದೆ.[೩]

ಈ ಅಧ್ಯಯದನಲ್ಲಿ ಥರ್‌ಸ್ಟನ್ ಅವರ ಕೊಡುವ ವಿವರಗಳು ಗಾಣಿಗರ ಸಾಮಾಜಿಕ ಸಾಂಸ್ಕೃತಿಕ ನಿಜ ನೆಲೆಗಳನ್ನು ಪ್ರತಿನಿಧಿಸುವಂತಿವೆ. ಗಾಣಿಗರ ಮೂಲವನ್ನು ಕುರಿತಂತೆ ಥರ್‌ಸ್ಟನ್ ಅವರಿಗೂ ಸ್ಪಷ್ಟತೆ ಇದೆ. ಇಷ್ಟಾಗಿಯೂ ಗಾಣಿಗರ ಮೂಲ ಶ್ರಮದ ನಿರ್ದಿಷ್ಟ ನೆಲೆ ಯಾವುದೆಂಬ ಬಗ್ಗೆ ಅಸ್ಪಷ್ಟತೆ ಇದ್ದೇ ಇದೆ. ಈ ಕುರಿತು ಚರ್ಚೆ ಕೂಡ ಗಾಣಿಗರ ಅಧ್ಯಯನದ ಸಂದರ್ಭದಲ್ಲಿ ಅನಿವಾರ್ಯವಾಗಿರುವುದರಿಂದ ಗಾಣಿಗರ ಆಚರಣೆ ಮತ್ತು ಅವುಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಗಾಣಿಗರ ನಿರ್ದಿಷ್ಟ ಮೂಲವನ್ನು ಹುಡುಕುವ ಪ್ರಯತ್ನ ಮಾಡಲಾಗುವುದು.

"ಸೈಯದ್ ಸಿರಾಜ ಉಲ್ ಹಸಾನ್" ಅವರು ಗಾಣಿಗರನ್ನು ಕುರಿತು ಸುದೀರ್ಘವಾದ ವಿವರಣೆ ಕೊಟ್ಟಿದ್ದಾರೆ. 'ಗಾಂಡ್ಲ, 'ಗಾಣಿಗರು', 'ತಿಲವಾನ್', 'ತಿಲಘಾತಕ' ಇವರು ಹೈದರಾಬಾದ್ ಸಂಸ್ಥಾನದ ಹಲವಾರು ಗ್ರಾಮಗಳಲ್ಲಿ ಕಂಡು ಬರುವ ಎಣ್ಣೆ ಅರೆಯುವ ಮತ್ತು ಅದರ ವ್ಯಾಪಾರವನ್ನು ಮಾಡುವಂತಹ ಸಮುದಾಯವಾಗಿದೆ. ಆದರೆ ವಾರಂಗಲ್ ಜಿಲ್ಲೆಯಲ್ಲಿ ಇವರು ಹೆಚ್ಚಾಗಿ ಎಣ್ಣೆಕಾಳುಗಳನ್ನು ಉತ್ಪಾದಿಸುತ್ತಾರೆ.

ಈ ಜಾತಿಯ ಸದಸ್ಯರು ತೆಲಂಗಾಣದಲ್ಲಿ ತಮ್ಮನ್ನು 'ಗಾಂಡ್ಲ' ಎಂದು ಕರ್ನಾಟಕದಲ್ಲಿ 'ಗಾಣಿಗ'ರೆಂದು ಮತ್ತು ಮಹಾರಾಷ್ಟ್ರದಲ್ಲಿ 'ತಿಲವಾನ್'ರೆಂದು ಕರೆಯುತ್ತಾರೆ. ಅದೇ ರೀತಿಯಾಗಿ ಹೊರಗಿನವರು ಇವರನ್ನು ತೇಲಿ ಮತ್ತು ತಿಲಘಾತಕರೆಂದು ಕರೆಯುತ್ತಾರೆ. ತೆಲುಗಿನ 'ಗಾಂಡ್ಲ' ಎನ್ನುವ ಶಬ್ದವು ಕರ್ನಾಟಕದ 'ಗಾಣಿಗರು' ಎಂಬ ಶಬ್ದದಿಂದ ಉತ್ಪನ್ನವಾಗಿದೆಯೆಂದು ತಿಳಿದು ಬರುತ್ತದೆ. ಇವೆರಡು ಶಬ್ದಗಳು ಗಾಣ ಅಥವಾ ಎಣ್ಣೆ ಅರೆಯುವ ಸ್ಥಳವೆಂಬ ಅರ್ಥ ಬರುವ ಕರಾವಳಿಯ 'ಗಾಣಿಗ' ಶಬ್ದದಿಂದ ಬಂದಿದೆ.[೪]

ಕನ್ನಡ ವಿಶ್ವವಿದ್ಯಾಲಯದ ವಿಶ್ವಕೋಶ: ೨.೨೦೦೦ರಲ್ಲಿ ಪ್ರಕಟಿಸಿರುವ 'ಕರಕುಶಲ ಕಲೆಗಳು' ಕೃತಿಯನ್ನು ಡಾ. ಕರೀಗೌಡ ಬೀಚನಹಳ್ಳಿಯವರು ಸಂಪಾದಿಸಿದ್ದಾರೆ. ಇದು ಜನಾಂಗಗಳ ಅಧ್ಯಯನಗಳಿಗೆ ಉಪಯುಕ್ತವಾದ ಕೃತಿಯಾಗಿದೆ.

ಗಾಣ ಎಂದರೆ ಒಂದು ವಸ್ತುವನ್ನು ಹಿಂಡಿ ದ್ರವರೂಪದ ವಸ್ತುವನ್ನು ಪಡೆಯುವಲ್ಲಿ ಉಪಯೋಗಿಸುವ ಸಾಧನ, ಮೂಲತಃ ಎಳ್ಳು, ಕುಸುಬಿ, ಔಡಲ, ಹರಳು, ಕಡಲೆ, ಕೊಬ್ಬರಿ ಮುಂತಾದ ಎಣ್ಣೆ ಹಿಂಡುವ ಸಾಧನವಾಗಿದ್ದ ಗಾಣ.

ಹೀಗೆ ಗಾಣ, ಗಾಣಿಗ, ಗಾಣದ ತೆರೆ ಅಥವಾ ಗಾಣಿಗರ ಸುಂಕ ಈ ರೀತಿ ಗಾಣಕ್ಕೆ ಸಂಬಂಧಿಸಿದ ದಾಖಲೆಗಳು ಅನೇಕ ಕಡೆಗೆ ಲಭ್ಯವಾಗುತ್ತವೆ. ಇದರಿಂದ ಗಾಣದ ಇತಿಹಾಸವು ಬಹು ಪ್ರಾಚೀನ ಕಾಲದಿಂದಲೇ ಬಳಕೆಯಾಗಿರುವುದು ತಿಳಿದು ಬರುತ್ತದೆ.[೫]

ಕರ್ನಾಟಕ ರಾಜ್ಯಕೋಶ- ೪, ೨೦೦೦ರಲ್ಲಿ ಪ್ರಕಟಿಸಿರುವ 'ಜನಸಮುದಾಯ ಸಂಪುಟ' ಕೃತಿಯನ್ನು ಡಾ. ಹೆಚ್.ಡಿ. ಪ್ರಶಾಂತ್ ಸಂಪಾದಿಸಿದ್ದಾರೆ. ಇದು ಜನಾಂಗಗಳ ಅಧ್ಯಯನಗಳಿಗೆ ಉಪಯುಕ್ತವಾದ ಕೋಶವಾಗಿದೆ.

ಈ ರಾಜ್ಯಕೋಶವನ್ನು ಗಾಣಿಗರ ವೃತ್ತಿ, ಮೂಲ, ಭಾಷೆಯ ವಿಚಾರಗಳನ್ನು ಪ್ರಸ್ತಾಪಿಸಿದ್ದಾರೆ. ಈ ಗಾಣಿಗರಲ್ಲಿ ಮುಖ್ಯವಾದ ಉಪಪಂಗಡಗಳೆಂದರೆ ಕಿರುಗಾಣಿಗರು, ಹೆಗ್ಗಾಣಿಗ, ಜ್ಯೋತಿಫನ, ಪಂಚಮಸಾಲಿ ಗಾಣಿಗ, ಸಜ್ಜನ, ತೇಲಿ, ವನಿಯನ್, ಗಾಂಡ್ಲ, ಕರಿಗಾಣಿಗ, ಬಿಳಿ ಗಾಣಿಗ ಮತ್ತು ತುಳುಗಾಣಿಗರು ಎಂದು ಗುರುತಿಸಿದ್ದಾರೆ.[೬]

ಗಾಣಿಗರಿಗೆ ಸಂಬಂಧಿಸಿದಂತೆ ಮತ್ತೆರಡು ಮುಖ್ಯವಾದ ಅಧ್ಯಯನಗಳೆಂದರೆ ಡಾ. ದೇವೇಂದ್ರಕುಮಾರ್ ಹಕಾರಿ. ಅವರ 'ಜಾನಪದೀಯ'[೭] ಕೃತಿ ಮತ್ತು ಡಾ. ಮೃತ್ಯುಂಜಯ ಹೊರಕೇರಿಯವರ 'ಮಧುರ ಜಾನಪದ'[೮] ಈ ಎರಡು ಕೃತಿಗಳಲ್ಲಿ ಗಾಣಿಗರ ಸಾಂಸ್ಕೃತಿಕ ವಿವರಗಳನ್ನು ತುಂಬ ಆಸ್ಥೆಯಿಂದ ಕಲೆ ಹಾಕಿರುವ ಲೇಖಕರು ಅವರ ಮೂಲ ಇತಿಹಾಸ, ಸಾಮಾಜಿಕ ಸ್ಥಾನಮಾನಗಳ ಕುರಿತಾದ ವಿಶ್ಲೇಷಣೆಯನ್ನು ನಡೆಸಿದ್ದಾರೆ. ಈ ಅಧ್ಯಯನಕ್ಕೆ ಈ ಕೃತಿಗಳನ್ನು ಆಕರಗಳಾಗಿಟ್ಟುಕೊಳ್ಳಲಾಗಿದೆ.

ಒಟ್ಟಿನಲ್ಲಿ ಗಾಣಿಗರನ್ನು ಕುರಿತು ಈವರೆಗೆ ನಡೆದಿರುವ ಸಂಶೋಧನಾ ಕಾರ್ಯ ಸಾಂಸ್ಕೃತಿಕವಾಗಿ, ಸಮಗ್ರ ಹಾಗೂ ಸಕ್ರಮವಾದುದಲ್ಲ. ಅವರ ಸಂಸ್ಕೃತಿಯ ಒಂದೊಂದು ಅಂಶಗಳನ್ನು ಎತ್ತಿಕೊಂಡು ಬಿಡಿ ಬಿಡಿಯಾಗಿ ಪರಿಚಯಾತ್ಮಕ ರೂಪದಲ್ಲಿ ಸಂಗ್ರಹಕಾರ್ಯ ನಡೆದಿದೆ. ಈ ಜನರನ್ನು ಕುರಿತು ಬೇರೆ ಬೇರೆ ವಿಷಯಗಳ ಮೇಲೆ ಪಿಎಚ್.ಡಿ. ಅಧ್ಯಯನಗಳು ಇಲ್ಲಿಯವರೆಗೂ ನಡೆದಿರುವುದಿಲ್ಲ. ಈ ಒಂದು ಕೊರತೆಯು ಇಲ್ಲಿ ಕಂಡುಬರುವುದರಿಂದ, ಅವರ ಬದುಕಿನ ಆಳಕ್ಕಿಳಿವ ಉದ್ದೇಶದಿಂದ 'ಬಳ್ಳಾರಿ ಜಿಲ್ಲಾ ಗಾಣಿಗರು' ಎಂಬ ಅಧ್ಯಯನವನ್ನು ತಲಸ್ಪರ್ಶಿಯಾಗಿ ಮಾಡಲು ಕ್ಷೇತ್ರಕಾರ್ಯಕ್ಕೆ ಇಳಿಯಬೇಕಾಯಿತು. ಅದರ ಫಲಶ್ರುತಿಯೇ ಈ ಸಂಶೋಧನಾ ಮಹಾಪ್ರಬಂಧ.

## ೧.೩. ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು

ಸಮುದಾಯಗಳ ಅಧ್ಯಯನ ಸಂದರ್ಭದಲ್ಲಿ ಬಹಳ ಮುಖ್ಯವಾಗಿ ಕೈಗೊಳ್ಳುವ ಕ್ಷೇತ್ರಕಾರ್ಯದಿಂದ ಆ ಸಮುದಾಯದ ಒಟ್ಟಾರೆ ಸಾಂಸ್ಕೃತಿಕ ಗ್ರಹಿಕೆಗಳನ್ನು ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ. ಗಾಣಿಗರ ಅಧ್ಯಯನವನ್ನು ಈ ಬಗೆಯ ವ್ಯಾಪಕ ಕ್ಷೇತ್ರ ಕಾರ್ಯದಲ್ಲಿ ತೊಡಗಿಸಿಕೊಂಡೇ ಆರಂಭಿಸಲಾಗಿದೆ.

ಕ್ಷೇತ್ರ ಕಾರ್ಯದಲ್ಲಿ ಮುಖ್ಯವಾಗಿ ಎರಡು ರೀತಿಯ ವಿಧಾನಗಳನ್ನು ಅನುಸರಿಸಲಾಗಿದೆ.

**೧. ಗಾಣಿಗರು ದಟ್ಟವಾಗಿ ವಾಸಿಸುವ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿಗೆ ಭೇಟಿ ಕೊಡುವುದು ಒಂದನೆಯ ವಿಧಾನ.**

ಈ ವಿಧಾನದಲ್ಲಿ ಗಾಣಿಗರ ಮೂಲ, ಕಸುಬು, ಆಚರಣೆ, ನಂಬಿಕೆ, ಇತಿಹಾಸ, ಅವರ ಸಾಮಾಜಿಕ ಆರ್ಥಿಕ ಸ್ಥಿತಿಗತಿಗಳು, ಸಮಕಾಲೀನ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ ಸವಾಲುಗಳು, ಅವರ ಬದುಕಿನಲ್ಲಿ ಒಟ್ಟಾರೆ ಅನುಭವಿಸುತ್ತಿರುವ ಸ್ಥಿತ್ಯಂತರಗಳು, ಮೊದಲಾದ ವಿವರಗಳನ್ನು ಸಾಧ್ಯವಾದಷ್ಟು ವಯಸ್ಸಾದವರ ಜೊತೆ ಚರ್ಚೆ, ಸಂವಾದ, ಪ್ರಶ್ನಾವಳಿ ನಡೆಸುವ ಮೂಲಕ ತಿಳಿದುಕೊಳ್ಳಲು ಯತ್ನಿಸುವುದು.

ಜನನ, ಮದುವೆ, ಸೀಮಂತ, ಹೆರಿಗೆ, ನಾಮಕರಣದಿಂದ ಹಿಡಿದು ಸಾವಿನವರೆಗಿನ ಜೀವನಾವರ್ತನಗಳ ಸಂದರ್ಭದಲ್ಲೆಲ್ಲಾ ಹಾಜರಾಗಿ ಆ ವಿವರಗಳನ್ನು ತಿಳಿಯುವ ಟಿಪ್ಪಣಿ ಮಾಡಿಕೊಳ್ಳುವ ಮೂಲಕ ಗಾಣಿಗ ಸಮುದಾಯದ ಸಾಂಸ್ಕೃತಿಕ ಬದುಕಿನ ಸ್ವರೂಪವನ್ನು ಅಧ್ಯಯನ ಮಾಡಲಾಗಿದೆ. ಕೆಲವು ಹಬ್ಬ, ಆಚರಣೆಗಳ ಸಂದರ್ಭದಲ್ಲಿ ಕೂಡ ಗಾಣಿಗರ ಜೊತೆಗಿದ್ದುಕೊಂಡು ವಿವರಗಳನ್ನು ಸಂಗ್ರಹಿಸಿಟ್ಟುಕೊಳ್ಳಲಾಗಿದೆ ಮತ್ತು ಅಗತ್ಯವಿದ್ದ ಕಡೆ ಛಾಯಾಚಿತ್ರಗಳನ್ನು ತೆಗೆದಿಟ್ಟುಕೊಳ್ಳಲಾಗಿದೆ.

ಈ ವಿಧಾನದಿಂದಾಗಿ ಗಾಣಿಗರ ಭಾಷೆ, ಆಚರಣೆಗಳ ಹಿಂದಿನ ಪ್ರಭಾವಗಳು ಮತ್ತು ನಂಬಿಕೆಗಳು ಪರಂಪರಾಗತ ಬದುಕಿಗೆ ಅನೇಕ ಹೊಸ ರೂಪ ಸ್ಪರ್ಶಗಳನ್ನುಂಟು ಮಾಡಿರುವ ಆಧುನಿಕ ಪ್ರೇರಣೆಗಳು, ಬದಲಾಗುತ್ತಿರುವ ಸಮಾಜಿಕ ಪರಿಸರದಲ್ಲಿ ಇಂಥ ಸಮುದಾಯಗಳು ಹೇಗೆ ತಮ್ಮ ಸಂಸ್ಕೃತಿಯ ನಿಜನೆಲೆಗಳನ್ನು ಉಳಿಸಿಕೊಳ್ಳುತ್ತವೆ? ಅದಕ್ಕಾಗಿ ಎಂಥ ಪ್ರತಿ ಸಂಸ್ಕೃತಿಯನ್ನು ಕಟ್ಟಿಕೊಳ್ಳುತ್ತವೆ? ಎಂಬ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳುವುದು ಸಾಧ್ಯವಾಗಿದೆ.

೨. ಗಾಣಿಗ ಸಮುದಾಯದಲ್ಲಿನ ಸಾಹಿತ್ಯಿಕ ವಿವರಗಳ ಮೂಲಕ ಅವರ ಸಂವೇದನಗಳ ಮೂಲವನ್ನು ಸಂಗ್ರಹಿಸುವುದು ಎರಡನೆಯ ವಿಧಾನ.

ಸಮುದಾಯದ ಅಧ್ಯಯನದಲ್ಲಿ ಈ ವಿಧಾನ ಹೆಚ್ಚು ಪರಿಣಾಮಕಾರಿಯಾದುದು. ಗಾಣಿಗರಲ್ಲಿರುವ ಕಥೆ, ಗಾದೆ, ಒಗಟು, ಮೊದಲಾದ ಪ್ರಕಾರಗಳಲ್ಲಿ ಅವರ ಆಳದ ಸಂವೇದನೆಗಳನ್ನು ಗುರುತಿಸುವುದು ಸಾಧ್ಯ. ಅವರ ಬಡತನ, ದೈವದ ಕುರಿತಾದ ಗ್ರಹಿಕೆಗಳು, ಆಧುನಿಕತೆ ಉಂಟು ಮಾಡಿದ ಅನೇಕ ರೀತಿಯ ಪಲ್ಲಟಗಳನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಬಹುದು.

ಈ ವಿಧಾನದಲ್ಲಿ ಸಾಹಿತ್ಯ ಸಂಗ್ರಹಣೆಯ ಜೊತೆಗೆ ಗಾಣಿಗರನ್ನು ಪ್ರತಿನಿಧಿಸಬಲ್ಲವಂತಹ ಅನೇಕರ ಸಂದರ್ಶನವನ್ನು ನಡೆಸಲಾಗಿದೆ. ಇವರಲ್ಲಿ ಪ್ರಜ್ಞಾವಂತರೆನಿಸಿಕೊಂಡವರನ್ನು ಆಯ್ಕೆ ಮಾಡಿ ಗಾಣಿಗರ ಸ್ಥಿತಿಗತಿಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಹಾಗೆಯೇ ಗಾಣಿಗರನ್ನು ಕುರಿತಂತೆ ಇತರ ಸಮುದಾಯದವರ ಅಭಿಪ್ರಾಯವನ್ನು ಸಂಗ್ರಹಿಸುವ ಕೆಲಸವನ್ನು ಈ ವಿಧಾನದಲ್ಲಿ ಅಳವಡಿಸಲಾಗಿದೆ.

ಹೀಗೆ ವ್ಯಾಪಕ ಕ್ಷೇತ್ರ ಕಾರ್ಯ ಮತ್ತು ಸಾಹಿತ್ಯ ಸಂಗ್ರಹಣೆಯ ಮೂಲಕ ಗಾಣಿಗರ ಸಾಂಸ್ಕೃತಿಕ ಬದುಕಿನ ವಿಶ್ಲೇಷಣೆಗೆ ಸಹಾಯಕವಾಗಬಲ್ಲ ವಿವರಗಳನ್ನು ಪಡೆದುಕೊಳ್ಳಲಾಗಿದೆ.

## ೧.೪. ಅಧ್ಯಯನದ ರೂಪು-ರೇಷೆಗಳು

'ಬಳ್ಳಾರಿ ಜಿಲ್ಲೆಯ ಗಾಣಿಗರು: ಒಂದು ಅಧ್ಯಯನ' ಎಂಬ ಶೀರ್ಷಿಕೆಯಡಿ ಕೈಗೆತ್ತಿಕೊಂಡಿರುವ ಈ ಅಧ್ಯಯನದ ರೂಪು-ರೇಷೆಗಳನ್ನು ಕುರಿತು ಹೇಳುವುದು ಇಲ್ಲಿನ ಉದ್ದೇಶವಾಗಿದೆ.

ಲಿಂಗಾಯತ ಗಾಣಿಗ ಸಮುದಾಯದ ಅಧ್ಯಯನಕ್ಕೆ ಇರುವ ಮೂಲಭೂತವಾದ ಉದ್ದೇಶ ಬಳ್ಳಾರಿ ಜಿಲ್ಲಾ ಹಾಗೂ ಉಳಿದಂತೆ ಕರ್ನಾಟಕ ಸಂದರ್ಭದಲ್ಲಿ ಹುಸಿ ಸಂಸ್ಕೃತಿಗಳ ಆಡಂಬರ, ವೈಭವೀಕರಣಗಳ ನಡುವೆ ನಿಜಸಂಸ್ಕೃತಿಗಳ ಹುಡುಕಾಟ ಅನಿವಾರ್ಯವಾಗಿರುವುದು ಮತ್ತು ಶತಮಾನಗಳಿಂದ ಈ ಬಗೆಯ ಶ್ರಮಮೂಲ ಸಂಸ್ಕೃತಿ ವಿಶ್ಲೇಷಣೆಯನ್ನು ಜಾಣತನದಿಂದ ನಿರ್ಲಕ್ಷಿಸಿರುವುದು. ಕರ್ನಾಟಕದಂತಹ ಸಾಮಾಜಿಕ ವಾತಾವರಣದಲ್ಲಿ 'ಶ್ರಮ' ಎನ್ನುವುದು ಕನಿಷ್ಠ ಮೌಲ್ಯದ ಸರಕಾಗಿ 'ಬುದ್ಧಿ' ಶ್ರೇಷ್ಠತೆಯ ಸಂಕೇತವಾಗಿ ಬಿಂಬಿತವಾಗಿರುವುದರಿಂದ ಈ ಬಗೆಯ ಒಣ ತಾತ್ವಿಕತೆಗೆ ಜಾತಿ ವ್ಯವಸ್ಥೆಯ ಅಂಗೀಕಾರ ಕೂಡ ಸಿಕ್ಕು ಬಿಟ್ಟಿದೆ. ಇಂತಹ ನೂರಾರು ಸಂಸ್ಕೃತಿಗಳ ನಿಜನೆಲೆಗಳನ್ನು ಗುರುತಿಸುವುದಕ್ಕೆ ಅಗತ್ಯವಾದ ತಾತ್ವಿಕತೆಯನ್ನು ರೂಪಿಸುವುದು ಕೂಡ ಇಂದಿನ ಜರೂರಾಗಿದೆ.

ಹೀಗೆ ನಿರ್ಲಕ್ಷಿತ ಸಂಸ್ಕೃತಿಗಳ ಶೋಧನೆಯ ಜೊತೆಗೆ ಬಹುರೂಪೀ ಸಂಸ್ಕೃತಿಗಳ ನೆಲದಲ್ಲಿ ಏಕರೂಪೀ ಸಂಸ್ಕೃತಿಯನ್ನು ಪಟ್ಟಭದ್ರರು ರಾಜಕೀಯ ಅಧಿಕಾರದಿಂದ ಹೇರುತ್ತಿರುವ ಅನಪೇಕ್ಷಿತ ಬಲಾತ್ಕಾರವನ್ನು ಪ್ರತಿರೂಪಿಸಬೇಕಾಗಿದೆ. ಈ ಪ್ರತಿರೋಧ ತಾತ್ವಿಕ ಮಟ್ಟದಲ್ಲಿ ಜಡವಾಗದಂತೆ ಸಾವಿರಾರು ವರ್ಷಗಳ ಅದರ ನಿರಂತರ ಗತಿ ಶೀಲತೆಯನ್ನು ಕಾಣಿಸುತ್ತಲೇ ಕಾಪಾಡಿಕೊಳ್ಳಬೇಕಾಗಿದೆ.

ಲಿಂಗಾಯಿತ ಗಾಣಿಗ ಸಮುದಾಯದ ಅಧ್ಯಯನ ಆಗಬೇಕಾದಷ್ಟು ಪ್ರಮಾಣದಲ್ಲಿ ನಡೆದಿಲ್ಲ ಎನ್ನುವುದು ಈ ಅಧ್ಯಯನಕ್ಕಿರುವ ಮತ್ತೊಂದು ಸಮರ್ಥನೆಯಾಗಿದೆ. ಶತಮಾನಗಳ ಕಾಲ ಈ ನೆಲದಲ್ಲಿ ಒಟ್ಟಿಗೆ ಜೀವಿಸಿರುವ ಗಾಣಿಗರು. ಇಂತಹ ಅಪರೂಪದ ಸಂಸ್ಕೃತಿಯ ಕುರಿತಾಗಿ ಈವರೆಗೆ ಸ್ವತಃ ಈ ಸಮುದಾಯದವರಾಗಲೀ, ಇತರರಾಗಲೀ ಅಷ್ಟಾಗಿ ಆಸ್ಥೆ ವಹಿಸದಿರುವುದು ಮಾತ್ರ ವಿಚಿತ್ರವಾಗಿದೆ.

ಈ ಸಮುದಾಯ ವಾಸಿಸುವ ಪ್ರದೇಶ ವಿಸ್ತಾರವಾಗಿರುವುದರಿಂದ ಇಡೀ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಚದುರಿದಂತೆ, ವಿಶೇಷವಾಗಿ ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಹೆಚ್ಚಾಗಿ ಅವರು ಕಂಡುಬರುವುದರಿಂದ ಅಧ್ಯಯನದ ಅನುಕೂಲಕ್ಕೆ ತಕ್ಕಂತೆ ಬಳ್ಳಾರಿ ಜಿಲ್ಲೆಯನ್ನು ಮಾತ್ರ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನದ ಸ್ವಯಂ ಪರಿಪೂರ್ಣವೆಂದೂ, ಇಲ್ಲಿನ ವಿಶ್ಲೇಷಣೆಯೇ ಆತ್ಯಂತಿಕವೆಂದೂ ಖಂಡಿತಾ ಭಾವಿಸಬೇಕಾಗಿಲ್ಲ. ಒಂದು ಸಮುದಾಯದ ಸಾಂಸ್ಕೃತಿಕ ಪರಿವೇಷವನ್ನು ಪ್ರವೇಶಿಸಲು ಅಗತ್ಯವಾದ ಪ್ರಾಥಮಿಕ ನೆಲೆಗಳನ್ನು, ವಿವರಗಳನ್ನು ಸಾಧ್ಯವಾದಷ್ಟು ಪ್ರಮಾಣಿಕವಾಗಿ ಈ ಅಧ್ಯಯನ ಒದಗಿಸಬಲ್ಲದು ಎಂದು ಮಾತ್ರ ವಿಶ್ವಾಸದಿಂದ ಹೇಳಬಹುದಾಗಿದೆ.

### ಟಿಪ್ಪಣಿಗಳು

೧. ಎಸ್.ಯು. ಕಾಮತ್, ಗೆಜೆಟಿಯರ್ ಬೆಂಗಳೂರು ರೂರಲ್ ಡಿಸ್ಟ್ರಿಕ್ಟ್, ೧೯೮೯, ಪುಟ ೧೫೩

೨. ಕೆ.ಎಸ್. ಸಿಂಗ್, ಪೀಪಲ್ ಆಫ್ ಇಂಡಿಯಾ ಕರ್ನಾಟಕ, ವಾಲ್ಯೂಂ-xxvi, ಪಾರ್ಟ್-೨, ೨೦೦೩, ಪುಟ ೪೮೭

೩. ಎಡ್ಗರ್ ಥರ್‌ಸ್ಟನ್ ಮತ್ತು ಕೆ. ರಂಗಾಚಾರಿ, ಕ್ಯಾಸ್ಟ್ ಆಂಡ್ ಟ್ರೈಬ್ಸ್ ಆಫ್ ಸೌತೇರನ್ ಇಂಡಿಯಾ, ಸಂಪುಟ ೨, ೧೯೮೩, ಪುಟ ೨೬೩

೪. ಸೈಯದ್ ಸಿರಾಜ ಉಲ್ ಹಸನ್, ದೀ ಕಾಸ್ಟ್ ಆಂಡ್ ಟ್ರೈಬ್ಸ್ ಆಫ್ ಹೆಚ್.ಇ. ಹೆಚ್. ದೀ ನಿಜಾಂಸ್ ಡೋಮಿನಿ ಮಾನ್ಸ್, ಸಂಪುಟ ೧, ೧೯೨೦, ಪುಟ ೬೧೧

೫. ಕರೀಗೌಡ ಬೀಚನಹಳ್ಳಿ (ಸಂ), ಕರಕುಶಲ ಕಲೆಗಳು, ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ-೨, ೨೦೦೦, ಪುಟ ೩೫೭

೬. ಡಾ. ಹೆಚ್.ಡಿ. ಪ್ರಶಾಂತ್ (ಸಂ), ಜನ ಸಮುದಾಯ ಸಂಪುಟ, ಕರ್ನಾಟಕ ರಾಜ್ಯಕೋಶ-೪, ೨೦೦೦, ಪುಟ ೩೭

೭. ದೇವೇಂದ್ರಕುಮಾರ ಹಕಾರಿ (ಸಂ), ಜಾನಪದೀಯ, ಪುಟ ೯೪

೮. ಡಾ. ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ೨೦೦೫, ಪುಟ ೧೧೮

# ಅಧ್ಯಾಯ ೨

# ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟ

೨.೧. ಬಳ್ಳಾರಿ: ನಾಮ ವಿವೇಚನೆ

೨.೨. ಶಾಸನಗಳು

೨.೩. ಐತಿಹ್ಯ ಮತ್ತು ದಂತಕಥೆ

೨.೪. ಪೌರಾಣಿಕ

೨.೫. ಭೌಗೋಳಿಕ ಲಕ್ಷಣಗಳು

ಜೀವಿಯು ಈ ವಿಶ್ವದಲ್ಲಿ ಸೃಷ್ಟಿಯಾಗಿ ಅದು ಸಂಪೂರ್ಣವಾಗಿ ಬೆಳವಣಿಗೆ ಹೊಂದಿ ಒಂದು ಹಂತ ತಲುಪಿದಾಗಿ ಮಾನವ ನಾಗರೀಕತೆ ಪ್ರಾರಂಭವಾಯಿತು. ನಾಗರೀಕತೆ ಕ್ರಮೇಣವಾಗಿ ಪ್ರಗತಿಯನ್ನು ಹೊಂದಿದಂತೆಲ್ಲಾ ಮನುಷ್ಯನ ಬುದ್ಧಿ ಪ್ರಜ್ವಲವಾಗಿ ಆ ಮುಖಾಂತರ ಹೊಸ ಹೊಸ ಆವಿಷ್ಕಾರಗಳನ್ನು ಮಾಡತೊಡಗಿದೆ. ನಂತರದ ದಿನಗಳಲ್ಲಿ ಆವಿಷ್ಕಾರಗಳು ಹೆಚ್ಚಾದಂತೆ ಮಾನವರಿಗೆ ಅನುಕೂಲತೆಗಳು ಅತಿಯಾದ ಪ್ರಗತಿಗೆ ದಾರಿಯಾಗಿ ಜಾಗತೀಕರಣ ಹಾಗೂ ಉದಾರೀಕರಣ, ವೈಜ್ಞಾನಿಕ ಬೆಳವಣಿಗೆ, ಖಾಸಗೀಕರಣ ಉಂಟಾಗಿ ಪ್ರತಿಯೊಂದು ಕ್ಷೇತ್ರದಲ್ಲೂ ಆಸಕ್ತಿ ಉಲ್ಬಣಗೊಂಡು ಮಾನವ ತನ್ನದೇ ಆದ ಧೀಮಂತ ವಿಶ್ವ ಕಲ್ಪನೆಗೆ ತಕ್ಕಂತಹ ಜೀವನದ ಹಲವು ಮಗ್ಗುಲುಗಳಲ್ಲಿ ನವೀನಾ ಶೋಧನಾ ಹಾದಿಯನ್ನು ತನ್ನಲ್ಲೇ ತಾನು ಕಂಡುಕೊಂಡು ಪ್ರಗತಿಯ ಪಥವನ್ನು ಉತ್ತುಂಗಕ್ಕೇರಿಸಿದ್ದಾರೆ.

ಸಹಜ ಜೀವನದಿಂದ ಭಾಷೆ, ಕುಟುಂಬ, ಸಮಾಜ, ಸಂಸ್ಕೃತಿ, ಧರ್ಮ ಇವುಗಳು ಮಾನವೀಯತೆಯ ನೆಲೆಯಲ್ಲಿ ಎಲ್ಲೆಲ್ಲೂ ವಿಶ್ವವ್ಯಾಪ್ತಿಯಾಗಿ ಮನೆಮಾಡಿದೆ. ಸಂಸ್ಕೃತಿಯ ಬೆಳವಣಿಗೆಯ ಬಗ್ಗೆ ಹಲವಾರು ಜಿಜ್ಞಾಸಿಗರು ತಮ್ಮದೇ ಆದ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಒಂದೇ ಮಾತಿನಲ್ಲಿ ಹೇಳುವುದಾದರೆ 'way of life'ನ್ನು ಸಂಸ್ಕೃತಿ ಎಂದು ಕರೆಯಬಹುದು. ಸಂಸ್ಕೃತಿಯು ಯಾವಾಗ ಹುಟ್ಟಿತು? ಎಲ್ಲಿ? ಹೇಗೆ? ಯಾವ ರೀತಿಯಲ್ಲಿ? ಎಂದು ಪ್ರಶ್ನಿಸಿಕೊಂಡಾಗ, ನಿಖರ ಹಾಗೂ ನಿರ್ಧಿಷ್ಟತೆಯಿಲ್ಲ.ಸಂಸ್ಕೃತಿಯು ತಾನಾಗಿಯೇ ಕ್ರಮವಾಗಿ ನಮಗೆ ಗೊತ್ತಿಲ್ಲದ ಹಾಗೆನೇ ಅದು ತನ್ನ ಅಸ್ತಿತ್ವವನ್ನು ಪಡೆದುಕೊಂಡಿತು. ಸಂಸ್ಕೃತಿಗೆ ತನ್ನದೇ ಆದ ಮಹತ್ವ, ವ್ಯಾಪ್ತಿ ಇರುವುದು ಸ್ಪಷ್ಟ. ಜನಪದರ ಸಂಸ್ಕೃತಿಯ ಮೂಲವನ್ನು ತಿಳಿಯಬೇಕಾದರೆ ಜನಪದರ ಸೊಗಡಿಗೆ ಮೊರೆ ಹೋಗಬೇಕಾದ ಅನಿವಾರ್ಯತೆ ಇದೆ. ಜನಪದರಲ್ಲಿ ಹುದುಗಿರುವ ಸಾಹಿತ್ಯವು ಹೊರಹೊಮ್ಮಲು ಇಂಥದೇ ಸ್ಥಳ ಸಮಯವಿರಬೇಕೆಂಬ ನಿಯಮವಿಲ್ಲ. ಅದರೊಂದಿಗೆ ಅವರು ಬಾಳಿದ ರೀತಿ-ನೀತಿಗಳು-ಆಳ ವಿಸ್ತಾರವು ಅವರ ಪರಂಪರೆ ಮತ್ತು ಆಚರಣೆ, ವಿಧಿ ವಿಧಾನಗಳಲ್ಲಿ ಅಡಗಿರುತ್ತದೆ. ಇವೆಲ್ಲ ಅಂಶಗಳನ್ನು ಅನುಲಕ್ಷಿಸಬೇಕಾದರೆ ಅವರ ಸಾಂಸ್ಕೃತಿಕ ನೆಲೆಗಳ ಅಧ್ಯಯನದ ಪ್ರಕ್ರಿಯೆ ಇಂದು ಅತ್ಯವಶ್ಯಕವಾಗಿದೆ.

ಭಾರತೀಯ ಇತಿಹಾಸ ಪರಂಪರೆಯಲ್ಲಿ, ಕರ್ನಾಟಕ ಸಂಸ್ಕೃತಿಗೆ ಅಗ್ರಸ್ಥಾನವಿದೆ. ಕರ್ನಾಟಕದ ಚಾರಿತ್ರಿಕ ನೋಟದಲ್ಲಿ ಬಳ್ಳಾರಿ ಜಿಲ್ಲೆಯೂ ವಿಶ್ವವ್ಯಾಪಿಯಾಗಿ ವಿಖ್ಯಾತವಾಗಿದೆ. ಕನ್ನಡ ಸಂಸ್ಕೃತಿಗೆ ಬಳ್ಳಾರಿ ಜಿಲ್ಲೆಯ ಕೊಡುಗೆ ಅಪಾರ. ವಿಜಯನಗರ ಸಾಮ್ರಾಜ್ಯವನ್ನು ವಿಶ್ವವೇ ಬೆರಗು ಗಣ್ಣಿನಿಂದ ನೋಡಿದೆ. ಇಲ್ಲಿ ವಿಜಯನಗರ ಸಾಮ್ರಾಜ್ಯದಲ್ಲಿ ಜನಪದ ಸಾಹಿತ್ಯವು ಅತ್ಯಂತ ಮಹತ್ವ ಪಡೆದು ಬೆಳೆದಿತ್ತು. ಅಲ್ಲದೆ ಪುರಾಣ, ಪುಣ್ಯಕತೆಗಳ ನೆಲೆವೀಡಾಗಿತ್ತು. ಪ್ರದೇಶ ಚರಿತ್ರೆಯಲ್ಲಿ ಗಣನೀಯ ಪಾತ್ರ ನಿರ್ವಹಿಸಿದೆ.[೧]

## ೨.೧. ಬಳ್ಳಾರಿ: ನಾಮ ವಿವೇಚನೆ

'ಬಳ್ಳಾರಿ' ಎಂಬ ಹೆಸರು ಕುತೂಹಲಕರ ಹಾಗೂ ವಿಶಿಷ್ಟವಾದುದಾಗಿದೆ. ಇದು ಕರ್ನಾಟಕ ರಾಜ್ಯದ ಜಿಲ್ಲಾ ಕೇಂದ್ರವಾಗಿ ಉತ್ತರ ಕರ್ನಾಟಕ ರಾಜ್ಯಗಳಲ್ಲಿ ವಿಲೀನವಾಗಿದೆ. ಈ ಭಾಗವನ್ನು 'ಗಂಡು ಮೆಟ್ಟಿನ ನಾಡು' ಎಂದು ಕರೆಯಲ್ಪಡುತ್ತದೆ. ಅದಕ್ಕಾಗಿಯೇ ವಿದ್ಯಾರಣ್ಯರು ಇಲ್ಲಿ ವಿಜಯನಗರ ಸಾಮ್ರಾಜ್ಯ ಸ್ಥಾಪನೆ ಮಾಡಿದರು ಎಂಬ ಪ್ರತೀತಿ ಇದೆ. ಇದಕ್ಕೆ ಮೂಲವೇ ನಾಯಿಯನ್ನು ಎದುರಿಸಿ ತಿರುಗಿನಿಂತು ಓಡಿಸಿಕೊಂಡು ಹೋಗುವುದನ್ನು ಕಂಡೇ ಇದು ಪುಣ್ಯ ಭೂಮಿ, 'ಗಂಡು ಮೆಟ್ಟಿನ ನಾಡು' ಎಂಬುದನ್ನರಿತು ವಿಜಯನಗರ ಸಾಮ್ರಾಜ್ಯವನ್ನು ಇಲ್ಲಿ ಕಟ್ಟಿದರು ಎಂಬ ಐತಿಹ್ಯ ಇದೆ. ಆದ್ದರಿಂದ ಈ ನಾಡಿನ ಜನತೆ ವೀರರು, ಧೀರರು, ಪರಾಕ್ರಮಶಾಲಿಗಳಾಗಿ, ಎದುರಾಳಿಗಳಿಗೆ ಸಿಂಹಸ್ವಪ್ನವಾಗಿದ್ದರು. ಇದರೊಂದಿಗೆ ಸದ್ಗುಣಗಳು, ಸರಳ ಸ್ವಭಾವದ ಸಜ್ಜನ ವ್ಯಕ್ತಿಗಳಾಗಿದ್ದರೆಂದೂ ಹೇಳುತ್ತಾರೆ. ಇದಕ್ಕೆ ಪ್ರತೀಕವೆಂಬಂತೆ ಕ್ರಿ.ಶ. ೧೪೧೧ರ ಪ್ರೌಢರಾಯನ ಕಾಲದ ಲಕ್ಷ್ಮೀಧರ ಅಮಾತ್ಯನ ಶಾಸನವು ದೊರೆಯುತ್ತದೆ.

ಬಳ್ಳಾರಿ ಪದನಿಷ್ಪತ್ತಿ ಬೆಳವಣಿಗೆಯನ್ನು ಗಮನಿಸುವುದಾದರೆ ಲಭ್ಯವಿದ್ದ ಗೆಜೆಟಿಯರ್ ಉಲ್ಲೇಖದಂತೆ The name Bellary city godess Durugamma whose temple in Gandhinagar Bellary in poet Jann's Yashodhar charita the word Balary 'ಬಳ್ಳಾರಿ' is used Men a goddess and men a goddess and town is said hall derived its name from this word because Durugamma had manifested her self in this town the old district Gazzatter (ಗೆಜೆಟೀಯರ್ ೧೯೯೪).

ಈ ಮೇಲೆ ಹೇಳಿದಂತೆ ಬಳ್ಳಾರಿ ಎಂಬ ಪದವು ಜನ್ನನ 'ಯಶೋಧರ ಚರಿತೆ' ಕೃತಿಯಲ್ಲಿ ಬಳಕೆಯಾಗಿದೆ. ಇದಕ್ಕಿಂತಲೂ ಪೂರ್ವದ ಜನಪದ ಗೀತೆ ಕಾವ್ಯ ಶಾಸನಗಳಲ್ಲೂ 'ಬಳ್ಳಾರಿ' ಎಂಬುದು ಪ್ರಸ್ತಾಪವಾಗಿದೆ. ಇದನ್ನು ಗಮನಿಸುವುದಕ್ಕಿಂತ ಮುಂಚೆ ಕಿಟಲ್ ಕೋಶದಲ್ಲಿ ಬಳರಿ, ಬಳಾರಿ ಪದದ ಅರ್ಥವು ಬಳಹರಿ ಬಳಾರಿ ಎಂಬುದು the demon Balari or Mahakali ಎಂದಿದೆ. ಇಲ್ಲಿ ವಿವರಿಸಿದ ಮಹಾಕಾಳಿ ಕುರಿತು ಹೆನ್ರಿ ವೈಟ್ ಹೆಡ್‌ರವರು 'the south Indian Villege god's Durga is one of the many names of kali, the wife of siva ಎಂದು ತಿಳಿಸಿದ್ದಾರೆ. ಇದರಿಂದಲೇ ಶಿವನ ಪತ್ನಿಯಾದ ಪಾರ್ವತಿಯ ಹಲವು ಅವತಾರಗಳಲ್ಲಿ ಈ ಬಳರಿ ಒಂದಾಗಿದೆ. ಬಳರಿ, ಬಳಾರಿಯು ಸಂಸ್ಕೃತ ಪದ ಎನ್ನುವುದಾದರೆ, ಪದವನ್ನು ವಿಭಜಿಸಿದಾಗ ಬಲ+ಅರಿ ಅಥವಾ Bala+Ari = enemy of demon[೨] ಎಂದು ಅರ್ಥೈಸುವುದಾದರೆ ಹೆಣ್ಣು ದೇವತೆ ಎಂಬ ಅರ್ಥವನ್ನು ನೀಡಲಾರದು. ಇಲ್ಲಿ ಬಲ ಎಂಬ ರಾಕ್ಷಸವನ್ನು ಇಂದ್ರನು ಕೊಂದ, ಇಲ್ಲವೆ ರಾಕ್ಷಸನ ವೈರಿ ಎಂದು ಸೂಚಿಸುತ್ತದೆ. ಆದರೆ 'ಬಳರಿ' ಪದವು ತುಂಬಾ ಪ್ರಾಚೀನ ಎಂಬುದಂತೂ ಸ್ಪಷ್ಟ. ಇದು ಸಂಸ್ಕೃತಕ್ಕಿಂತಲೂ ಕನ್ನಡದ ಸಹಜನಾಮವೇ ಆಗಿರಬೇಕು.

'ಬಳರಿ' ಪದವು ಭಟಾರಿ ಭಡಾರಿ ಭಳಾರಿ ಬಳರಿ ಬಳ್ಳಾರಿ ಎಂದು ಬದಲಾವಣೆಯಾಗಿರಬೇಕು. ಮೇಲೆ ಸೂಚಿಸಿದಂತೆ ಕೇಶಿರಾಜನ ಶಬ್ದಮಣಿ ದರ್ಪಣ ಕೃತಿಯಲ್ಲಿಯ ಸೂತ್ರದಲ್ಲಿ 'ಟ' ಕಾರವು 'ಡ'ಕಾರವು ಆದೇಶವಾಗಿ ಬಳಸಲ್ಪಟ್ಟಿರಬೇಕು. ನಂತರ ಡ್>ಳ ಅಂದರೆ ಡಕಾರಂ ಬೆಟ್ಟಿತ್ತಾಗಿ ಉಚ್ಚರಿಸಿದೊಡೆಳ ಕಾರಂ ಬರೆಗುಂ" ಎಂದಂತೆ ಡ>ಳ ಆಗಿರಬೇಕು. ಗ್ರಾಮೀಣ ಜನರಲ್ಲಿ ಭಡಾರಿ ಶಬ್ದವು ಸರ್ವೇಸಾಮಾನ್ಯವಾಗಿದೆ. ಭಡಾರಿಯಂತಿರುವವಳು, ಭಡಾಯಿ ಕೊಚ್ಚಿಕೊಳ್ಳುವಳು, ಸ್ವ ಸಾಮರ್ಥ್ಯದಂತೆ ನಿಲುವು ಕೈಗೊಳ್ಳುವವಳು ಎಂದಾಗುತ್ತದೆ. ಇದಲ್ಲದೆ ಊರಿನ ಹೆಸರು ದೇವತೆಗಳ ಹೆಸರಿನಿಂದ ಆರಂಭವಾದಂತೆ ಉದಾಹರಣೆಗೆ ಬಸವನದುರ್ಗ, ಅನಂತಶಯನಗುಡಿ ಆದಂತೆ ಇಲ್ಲಿ ಬಳರಿ ದೇವತೆಗೆ ಸಂಬಂಧಿಸಿದಂತೆ "ಬಳ್ಳಾರಿ ದುರ್ಗಮ್ಮ" ಎಂದು ಈಚೆಗೆ ಬಳಸಲಾಗುತ್ತದೆ. ಬಹುಶಃ ಬಳರಿಯು ಉಗ್ರ ಸ್ವರೂಪದವಳು ಆದಂತೆ ದುರ್ಗಿಯ ಉಗ್ರ ಸ್ವರೂಪದವಳು ಎಂಬ ಸಾಮ್ಯತೆಯಂತೆಯೇ ಹೆಸರು ಬಂದಿರಬೇಕು.

'ಬಳ್ಳಾರಿ' ಪದ ಉಲ್ಲೇಖವು ತುಂಬಾ ಸ್ವಾರಸ್ಯ ಪೂರ್ಣವಾದುದು. ಇದರ ಉತ್ಪತ್ತಿ ಕಾವ್ಯಗಳಲ್ಲಿ ಶಾಸನಗಳಲ್ಲಿ ಜನಪದ ಗೀತೆ ಹಾಗೂ ದಂತಕತೆಗಳಲ್ಲಿ ಉಲ್ಲೇಖಗೊಂಡಿದೆ. ಸ್ಕಂದ ಪುರಾಣದಲ್ಲಿ ಬಳ್ಳಾರಿ ಪ್ರದೇಶವನ್ನು 'ಲೋಹಾಚಲ' ಎಂದು ಕರೆಯಲಾಗಿದೆ. ಇತರೆ ಪ್ರಾಚೀನ ಕಾವ್ಯಗಳಲ್ಲಿ 'ಜಂಬೂದ್ವೀಪ' ಎಂದು ಕರೆಯುತ್ತಿದ್ದರು. ಬಳ್ಳಾರಿ ಪದವು ಉಗ್ರ ಸ್ತ್ರೀ ಸೂಚಕ, ವ್ಯಕ್ತಿ ಸೂಚಕ, ರಾಕ್ಷಸ ಸೂಚಕ, ಶಿವಶರಣರ ಸೂಚಕವಾಗಿ ಬಳಕೆಯಲ್ಲಿ ಬಂದಿದೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಬಳರಿ ಬಳಾರಿ ಪದದ ಬಳಕೆಯಾಗಿದೆ. ಅವುಗಳಲ್ಲಿ ಕ್ರಿ.ಶ.೧೦೪೦ರ ಚಂದ್ರರಾಜನ ಮದನತಿಲಕವೆಂಬ ಕಾಮಶಾಸ್ತ್ರ ಗ್ರಂಥದಲ್ಲಿ ಈ ರೀತಿ ನಿರೂಪಿತವಾಗಿದೆ.

ಬಳರಿಯ ನೋಂಪಿಗೆ ಬೀದಿಗೆ
ಮುಳಿವರ ಮನೆಗಳ್ಗೆ ಮಧ್ಯಪೀಗಳಲ್ಲಿಗೆ
ಕೋಮಳಯಂ ಪೋಗಲಿತ್ತೆಡೆ
ಬಳರಿಗೆ ಪುಯ್ಯಲಿಡವೋದ ಕುರಿಯಂತಕ್ಕುಂ (ಮದನ ತಿಲಕ)

ಗೌರವಾನ್ವಿತ ಸ್ತ್ರೀಯರು ಉಗ್ರರೂಪದ ಬಳರಿಯ ಕಂಡು ಭೀತಿಗೊಳಗಾಗಬಹುದೆಂದು ಬಳರಿ ನೋಂಪಿಗೆ ಹೋಗಕೂಡದೆಂದು ಮೇಲಿನ ಪದ್ಯದಿಂದ ಬಳಾರಿಯ ಬಗ್ಗೆ ಆಗಲೇ ಜನಸಾಮಾನ್ಯರು ದೇವತೆಯಾಗಿ ಪರಿಚಿತಳಿದ್ದಳು. ಹಾಗೂ ಅಲ್ಲಿ ನಡೆಯುತ್ತಿದ್ದ ಕುರಿಬಲಿಯನ್ನು ಕವಿಯು ಗಮನಿಸಿರಬೇಕೆಂದು ತಿಳಿಯುತ್ತದೆ. ಆದ್ದರಿಂದಲೇ ಕುಲವಧುವನ್ನು ಬಳರಿ ನೋಂಪಿಗೆ ಹೋಗಕೂಡದೆಂದು ನಿಷೇದಿಸಿರುವುದು ವ್ಯಕ್ತವಾಗುತ್ತದೆ. ಕ್ರಿ.ಶ.೧೧೦೦ರಲ್ಲಿ ಬ್ರಹ್ಮ ಶಿವನ ಸಮಯ ಪರೀಕ್ಷೆ ಎಂಬ ಕೃತಿಯಲ್ಲಿ 'ಬಳರಿ' ಎಂಬುದು ಅನೇಕ ಬಾರಿ ಬಳಕೆಯಾಗಿದೆ. ಈ ಪದ್ಯದಲ್ಲಿ ಬನದ ಬಳಾರಿ ಎಂತಲೂ ಬಳಸಲಾಗಿದೆ.

ಉಕ್ಕಲ ದೇವಿಗ ಮಮಾ
ಲಕ್ಕನಿಗಂ ಬನದ ಬಳರಿಗಂ ಮೈಲಾರಂ

ಗಳ್ಕದೆ ಜಾತ್ರೆಯ ನಾಳ್ವಂ

ಮಕ್ಕಳಗಂ ಜೈನನಲ್ಲನೆಂತು ಕಾಳಂ

ಈ ಪದ್ಯದಲ್ಲಿ ಬಳಸಿದ ಎಕ್ಕಲದೇವಿಗೆ ಮಾಲಕ್ಕನಿಗೆ, ಬನದ ಬಳರಿಗೆ, ಮೈಲಾರಿಗೆ ಅಳುಕದೆ ಜಾತ್ರೆಯನ್ನು ಮಾಡುವವರಿಗೆ ಬ್ರಹ್ಮಶಿವನು ಕಂಡಿಸಿದ್ದಾನೆ. ಬ್ರಹ್ಮಶಿವನ ಇದೇ ಕೃತಿಯಲ್ಲಿ ಬಂಧುವರ್ಮನನ್ನು ಸ್ತುತಿಸಿದ್ದರಿಂದ ಆತನ ಜೀವ ಸಂಭೋದನೆಯಲ್ಲಿ 'ಗಿರಿವಾಸಿ'ನಿ ಎಂಬ ಭಕ್ತಿ ಕಂಡುಬರುತ್ತದೆ. ಇದರಿಂದ ಪ್ರೇರಣೆಗೊಂಡ ಬ್ರಹ್ಮಶಿವನು ಗಿರಿವಾಸಿನಿಯು ಗಿರಿವಾಸದಲ್ಲಿರುವಳು ಎಂಬಂತೆ ಅರ್ಥೈಸಿ ಬನದ ಬಳಾರಿಯಾಗಿ ಬಳಸಿರಬೇಕೆನಿಸುತ್ತದೆ.

ನಂತರದಲ್ಲಿ ಕ್ರಿ.ಶ.೧೨೩೦ರ ಜನ್ನನ ಯಶೋಧರ ಚರಿತೆಯಲ್ಲಿ ಪ್ರಸ್ತಾಪಿತವಾದಂತೆ ರಾಜಪುರ ಪಟ್ಟಣದ ದಕ್ಷಿಣ ದಿಕ್ಕಿನಲ್ಲಿ ಜೀವ ಹಲೆಯಿಂದ ಸುಖಪಡುವ ಪಾಪಕುಳಾ ಪಂಡಿತೆ ಚಂಡಮಾರಿ ದೇವತೆ ಇದ್ದಳು. ಅಶ್ವಯುಜ ಚೈತ್ರಮಾಸದಲ್ಲಿ ಜಾತ್ರೆ ಮಾಡದಿದ್ದರೆ ಊರ ಜನರನ್ನೇ ನಾಶಮಾಡುತ್ತಿದ್ದಳು. (ಎಸ್.ಎಸ್. ಹಿರೇಮಠ ಸಾಧನೆ- ತ್ರೈಮಾಸಿಕ, ೧೯೭೮) ಈ ಕಾವ್ಯದಲ್ಲಿಯೇ ಮುಂದುವರೆದು ಹೇಳುವ ಜನ್ನನು ಚಂಡಕರ್ಮನೆಂಬ ತಳಾರನ್ನು ರಾಜನ ಅಪ್ಪಣೆಯಂತೆ ಉತ್ತಮ ಲಕ್ಷಣದ ಮಾನವ ಜೋಡಿಯನ್ನು ಬಲಿನೀಡಲು 'ಬಳರಿಯ ಬನದಿಂ ಪೊಟ್ಟಿಮಟ್ಟನು' ಎಂದಿದೆ. ಇದಲ್ಲದೆ ಬಲಿ ನೀಡದೇ ಇದ್ದದ್ದಕ್ಕೆ ಹಿಟ್ಟಿನ ಕೋಳಿಯನ್ನು ಬಲಿ ನೀಡಿದ ಪ್ರಸಂಗವು ಕಂಡು ಬರುತ್ತದೆ.

ಕ್ರಿ.ಶ.೧೯೬೯ರ ಭೀಮಕವಿಯ ಬಸವ ಪುರಾಣದಲ್ಲಿ 'ದಿಟ್ಟ ಬಳಹರಿ ಮಾರಿಗೆ' ಎಂದಿದ್ದಾರೆ. ಕ್ರಿ.ಶ.೧೪೫೦ರ ಚತುರಾಸ್ಯ ನಿಘಂಟುವಿನಲ್ಲಿ ಬಳಾರಿ ಮಹಾಕಾಳಿ ಎಂದು ಬಳಸಲಾಗಿದೆ. ಕ್ರಿ.ಶ.೧೬೫೦ರ ರಾಜಶೇಖರ ವಿಳಾಸ ಕೃತಿಯಲ್ಲಿ ಒಬ್ಬ ಸೂಳೆಯು ಮೋಸ ಮಾಡಿದ ವ್ಯಕ್ತಿಯೊಬ್ಬನಿಗೆ ಬಲಿ ಕಟ್ಟಿ ಮನ್ಮಥ ಬಳಾರಿಗೆ ದೊಡ್ಡ ಕುರಿ ಮಾಡಿ ಕಡಿಯುತ್ತೇನೆ. ಇಲ್ಲಿ ಬಳರಿಗೆ ಕುರಿ ಬಲಿಕೊಟ್ಟಂತೆ ಕಡಿಯಬೇಕಾಗುತ್ತದೆ ಎಂಬುದರ ಜೊತೆಗೆ 'ಮನ್ಮಥ ಬಳರಿ' ಎಂಬ ವಿಶಿಷ್ಟ ಪದದ ಬಳಕೆ ಕಂಡುಬರುತ್ತದೆ.

**೨.೨. ಶಾಸನಗಳು**

ಶಾಸನಗಳ ಆಧಾರದಿಂದಲೂ ಬಳಾರಿಯ ಬಳಕೆಯನ್ನು ಗಮನಿಸಬಹುದು, ಬಳ್ಳಾರಿ ಜಿಲ್ಲೆಯ ಕುರುಗೋಡಿನಲ್ಲಿ ದೊರೆತ ಕ್ರಿ.ಶ.೯೭೧ರ ಶಾಸನದಲ್ಲಿ ರಾಷ್ಟ್ರಕೂಟರ ಆಳ್ವಿಕೆ ಇತ್ತು ಎಂದು ತಿಳಿಯುತ್ತದೆ. ಆದರೆ ಬಳ್ಳಾರಿಯ ಪ್ರಸ್ತಾಪವಿಲ್ಲ. ಆದರೆ ಸಿರಿವಾರದ ಕ್ರಿ.ಶ.೧೦೪೪ರ ಈಶ್ವರ ದೇವಾಲಯದ ಮುಂಭಾಗದ ಶಾಸನದಲ್ಲಿ ಈ ರೀತಿಯಾಗಿ ಉಲ್ಲೇಖವಿದೆ. ಚಾಳುಕ್ಯ ದೊರೆಯ ಸಾಮಂತ ಪಲ್ಲವರಸನು ಕಪ್ಪಗಲ್ಲು ಗ್ರಾಮದಲ್ಲಿ ಮಹಾದೇವರಿಗೆ ಎಂಟು ಮತ್ತರು, ಮಠಕ್ಕೆ ಎಂಟು ಮತ್ತರು ಭೂಮಿಯನ್ನು ಜೇಷ್ಠರಾಶಿ ಭಳಾರಿಗೆ ದಾರಪೂರ್ವಕವಾಗಿ ಕೊಟ್ಟರು ಎಂದಿದೆ. ಇದು ಮೊಟ್ಟಮೊದಲು ಭಳಾರಿ ಪದ ಬಳಕೆಯಾದ ಶಾಸನವಾಗಿದೆ. ಕ್ರಿ.ಶ.೧೧೦೦-೪೧ರ ವಳೆಗೆ ಆಳಿದ ವಿಷ್ಣುವರ್ಧನ ವಶದಲ್ಲಿದ್ದ ಹೊಯ್ಸಳರ ಮಾರ್ಗಗಳಲ್ಲಿ

ಬಳ್ಳಾರಿ ದುರ್ಗಮ್ಮ ಒಂದಾಗಿತ್ತು ಎಂದು ತಿಳಿಯುತ್ತದೆ. ಇದರೊಂದಿಗೆ ಕ್ರಿ.ಶ.೧೧೩೧ರ ಚಾಳುಕ್ಯ ದೊರೆ ತ್ರಿಭುವನ ಮಲ್ಲದೇವನೆ ಕಾಲದ ಶಾಸನದಲ್ಲಿ ಬಳಾರಿಯ ಬೀವರಸನಿಗೆ ಭೂದಾನ ನೀಡಲಾಗಿದೆ ಎಂದು ಇದೆ. ನಂತರ ಕ್ರಿ.ಶ.೧೧೪೭ರ ಕೋಳೂರು ಸೂರ್ಯನಾರಾಯಣದ ಗುಡಿಯಲ್ಲಿರುವ ಶಾಸನದ ಉಲ್ಲೇಖದಂತೆ ಬಳ್ಳಾರಿ ३೦ರ ಪೊಲೆವಾರಿಗೆ ತೆರಿಗೆ ಬಿಟ್ಟಿದ್ದನ್ನು ತಿಳಿಸುತ್ತದೆ. ನಂತರ 'ಬಳ್ಳಾರಿಯ ದಾರಿ' (ಪಂಚಮುಖಿ, ೧೯೫೭) ಎಂಬ ವಿವರಗಳು ಕಾಣ ಸಿಗುತ್ತದೆ. ಕಾಕುಬಾಳು ಗ್ರಾಮ ರಸ್ತೆಯ ಕಂಪಲೆಪ್ಪಿನ ಗುಡ್ಡದಲ್ಲಿ ಅಪ್ರಕಟಿತ ಶಾಸನವೊಂದರಲ್ಲಿ 'ಬಳಾರಿ ಸೀಮೆ' ಎಂದಿದೆ. ಇದು ಸುಮಾರು ೧೨-೧೩ನೇ ಶತಮಾನದ್ದಿರಬೇಕೆಂದು ತಿಳಿದು ಬರುತ್ತದೆ. ಈ ಎಲ್ಲಾ ಶಾಸನಗಳಿಂದ ಬಳಾರಿ-ಬಳರಿ, ಬಳ್ಳಾರಿ-ಬಳಾರಿ ಎಂದು ಇದೆ. ಆದರೆ ಬನದ ಬಳ್ಳಾರಿ ಎಂಬ ಉಲ್ಲೇಖವು ಎಲ್ಲಿಯೂ ಕಂಡು ಬರುವುದಿಲ್ಲ.

### ೨.೩.೧. ಐತಿಹ್ಯ

ತುಂಗಭದ್ರಾ ತೀರದ ದಕ್ಷಿಣ ದಿಕ್ಕಿನ ಕುಂತಳವೆಂಬ ನಗರದಲ್ಲಿ ಚಂದ್ರ ಹಾಸನೆಂಬ ರಾಜನು ಆಳುತ್ತಿದ್ದು, ಆಗ ಈ ಪ್ರದೇಶವೆಲ್ಲವೂ ಅರಣ್ಯವಾಗಿತ್ತು. ಆ ತರುವಾಯ ಈ ಸ್ಥಳದ ಗುಡ್ಡದ ಮೇಲೆ ಬಳಸುರನೆಂಬ ಒಬ್ಬ ರಾಕ್ಷಸನು ಆಶ್ರಯ ಮಾಡಿಕೊಂಡು ಜೀವ ಕೋಟಿಗಳಿಗೆ ಉಪಟಳ ನೀಡುತ್ತಿದ್ದನು. ಸ್ವರ್ಗದ ದೇವ ಕನ್ನೆಯರಿಗೂ ಉಪದ್ರವ ನೀಡತೊಡಗಿದನು. ಇದರಿಂದ ಬೇಸತ್ತ ದೇವಕನ್ನಿಕೆಯರು ದೇವೇಂದ್ರನಿಗೆ ಮೊರೆ ಹೋದರು. ಆಗ ಇಂದ್ರನು ಬಳಾಸುರನನ್ನು ವಧೆ ಮಾಡುವ ನಿಮಿತ್ತದಿಂದ ಭೂಲೋಕಕ್ಕೆ ಬಂದು ಬಳಾಸುರನ ಸಂಗಡ ಯುದ್ಧ ಮಾಡಿ, ವಜ್ರಾಯುಧದಿಂದ ಆತನನ್ನು ಸಂಹರಿಸಿದನು. ಅಂದಿನಿಂದ ಈ ಗುಡ್ಡಕ್ಕೆ 'ಬಳ್ಳಾರಿ' ಎಂಬ ಹೆಸರು ಬಂದಿತು ಎಂದು ತಿಳಿಯುತ್ತದೆ.

### ೨.೩.೨. ದಂತಕಥೆ

ಗುಪ್ತರಿಗೂ ಶಕದೊರೆಗೂ ಯುದ್ಧ ನಡೆಯಿತು. ಈ ಯುದ್ಧದಲ್ಲಿ ಗುಪ್ತರಿಗೆ ಜಯವಾಯಿತು. ಈ ಘಟನೆಯು 'ಅರಿಪುರ ಬೀಡಿನಲ್ಲಿ' ಜರುಗಿತ್ತು ಎಂದು ವಿಶಾಖದತ್ತನ ದೇವಿ ಚಂದ್ರಗುಪ್ತ ನಾಟಕದಿಂದ ತಿಳಿದು ಬರುತ್ತದೆ. ಈ ಪ್ರಸಂಗವು ಬಾಣನ ಹಾಗೂ ಭೋಜನ ಕಾವ್ಯಗಳಲ್ಲಿ ಬಳಕೆಯಾಗಿದೆ. ಇದರಿಂದ ಬಾಣನ ಅರಿಪುರವೇ ಈಗಿರುವ ಬಳ್ಳಾರಿಯ ಜೈಲು ಇರುವ ಭಾಗವಾದ 'ಅಲಿಪುರ'ವಾಗಿದೆ. ಈ ಘಟನೆಯು ಕ್ರಿ.ಶ.೩೮೮ರಲ್ಲಿ ಜರುಗಿರಬೇಕೆಂದು ಈ ದಂತ ಕಥೆಯಿಂದ ತಿಳಿಯುತ್ತದೆ. ಇಲ್ಲಿ ಬಳ್ಳಾ+ಅರಿಪುರ = ಬಳ್ಳಾರಿಪುರ- ಬಳ್ಳಾರಿಪುರವು ಬಳಕೆಯಲ್ಲಿ ಪುರ ಮಾಯವಾಗಿ ಬಳ್ಳಾರಿಯಷ್ಟೇ ಉಳಿದುಕೊಂಡಂತೆ ಭಾಸವಾಗುತ್ತದೆ.

ಇದೇ ರೀತಿಯಲ್ಲಿ ಇನ್ನೊಂದು ಕಥೆಯ ಪ್ರಕಾರ ಹೇಳುವುದಾದರೆ ಬಲ್ಲಾಳನೆಂಬ ಪ್ರಸಿದ್ಧ ಶಿವಶರಣನಿದ್ದನು. ಅವನು ಸರ್ವ ಧರ್ಮ ಸಮನ್ವಯ ವ್ಯಕ್ತಿಯಾಗಿದ್ದು, ಒಮ್ಮೆ ಬೇಟೆಯಾಡುತ್ತಾ ದುಷ್ಟ ಮೃಗಗಳನ್ನು ಕೊಂದು ಬಾಯಾರಿ ನೀರಿಗಾಗಿ ಅಲೆದಾಡುತ್ತಿರುವಾಗ ಬೆಟ್ಟದ ದೇವ ನಿರ್ಮಿತವಾದ ನಿರ್ಮಲೋಕದ ಸರಸ್ಸನ್ನು ಕಂಡು ನೀರಿನ ತೃಷೆಯನ್ನು ನಿವಾರಿಸಿಕೊಂಡನು. ಸುಂದರವಾದ ತಾಣ ಕಂಡು

ಬಲಗುಡ್ಡದವರೆಗೂ ಪಟ್ಟಣ ನಿರ್ಮಿಸಿ ಯೋಗ್ಯ ಸ್ಥಳವೆಂದು ಭಾವಿಸಿ ವಿಷ್ಣು ದೇವಾಲಯ, ಶಿವದೇವಾಲಯ ಹಾಗೂ ಬಸದಿಯನ್ನು ಕಟ್ಟಿಸಿದನು (ಆರ್.ಎಸ್. ಪಂಚಮುಖಿ, ೧೯೬೭) ಎಂದು ತಿಳಿಯುತ್ತದೆ.

ಇದೇ ಪ್ರಕಾರ ಇನ್ನೊಂದು ಕಥೆ ಇದೆ. ಅದೆಂದರೆ ಕೋಳೂರು ಅಗ್ರಹಾರದಲ್ಲಿ ಬಳ್ಳೇಶಮಲ್ಲಯ್ಯನೆಂಬ ಶಿವಶರಣನಿದ್ದನು. ಅವನು ಹುಟ್ಟು ಕುರುಡನಾಗಿದ್ದನು. ಭಕ್ತಿಯಿಂದ ಇಷ್ಟ ಲಿಂಗವಾದ ಮಲ್ಲೇಶನನ್ನು ಧ್ಯಾನಿಸುತ್ತಿದ್ದನು. ಈಶನನ್ನು ಕಣ್ಣಿನಿಂದ ನೋಡಬೇಕೆಂಬ ಆಸೆಯಾಯಿತು. ಶಿವನು ಈತನ ಬಕ್ತಿಗೆ ಮೆಚ್ಚಿ ಬಳ್ಳದಲ್ಲಿ ತನ್ನ ನಿಜರೂಪ ತೋರಿಸಿದನಂತೆ. ಅಂದಿನಿಂದ ಮಲ್ಲೇಶ್ವರ ಎಂಬ ಅಭಿದಾನದಿಂದ ನೆಲೆಯೂರಿದನು. ಆದ್ದರಿಂದ ಈಗಲೂ ಬಳ್ಳಾರಿಯ ಕೋಟೆಯಿರುವ ಸ್ಥಳದಲ್ಲಿ ಮಲ್ಲೇಶ್ವರ ದೇವಾಲಯವಿದೆ. ಇದು ತುಂಬಾ ಪುರಾತನವಾದುದಾಗಿದೆ. ಇದಕ್ಕೆ ಸಾಮ್ಯತೆಯಿರುವ ಬಳ್ಳೇಶನೆಂಬ ಶರಣನಿದ್ದನು. ಆತನು ಶಿವ ಪೂಜೆ ಮಾಡಿದ ನಂತರವೇ ಊಟ ಮಾಡುತ್ತಿದ್ದನು. ಒಮ್ಮೆ ಪೂಜೆ ಮಾಡಲು ಹೊರಟಾಗ ಕಿಡಿಗೇಡಿಗಳು ಶಿವಲಿಂಗವನ್ನು ಒಯ್ದು ಆ ಸ್ಥಳದಲ್ಲಿ ಬಳ್ಳವನ್ನು ಇರಿಸುವರು. ಬಳ್ಳವನ್ನೇ ಶಿವಲಿಂಗವೆಂದು ಭಾವಿಸಿ ಪೂಜೆ ಮಾಡಿದ ಭಕ್ತಿಗೆ ಶಿವನು ಪ್ರತ್ಯಕ್ಷನಾದನಂತೆ. ಅಂದಿನಿಂದಲೇ ಈ ಬಳ್ಳೇಶನಿಂದಲೇ 'ಬಳ್ಳಾರಿ' ಎಂಬ ಪದ ಬಳಕೆಯಗಿ ರೂಢಿಗೆ ಬಂದಿರಬೇಕೆಂದು ತಿಳಿಯುತ್ತದೆ.

ಬಳ್ಳಾರಿಯ ದುರ್ಗಮ್ಮ ದೇವಾಲಯದ ಅರ್ಚಕರು ಗಾಣಿಗ ಮನೆತನದವರೇ ಆಗಿದ್ದಾರೆ. ಅವರ ಪ್ರಕಾರ ತಮ್ಮ ಪೂರ್ವಜರಲ್ಲಿ ಒಬ್ಬ ವ್ಯಕ್ತಿ ಕನಸಿನಲ್ಲಿ 'ಬಳರಿದೇವತೆ' ಎಂದು ತಾನು ಊರ ಹೊರಗಿನ ಬನದಲ್ಲಿ ನೆಲೆ ನಿಂತಿರುವೆ ಎಂದು ತಿಳಿಸಿದಳಂತೆ. ಒಮ್ಮೆ ಆ ಮೂಲ ಪುರುಷನಿಗೆ ದರ್ಶನ ನೀಡಿ ಆ ಗುಡ್ಡದಿಂದ ಜಿಗಿದು ಈಗಿರುವ ಸ್ಥಳದಲ್ಲಿ ಮಾಯವಾದಳಂತೆ. ಇದರಂತೆ ಒಬ್ಬ ಮುದುಕಿಯು ಅಸಹ್ಯವಾಗಿದ್ದು ತಲೆಕೂದಲು ಕೆದರಿಕೊಂಡು ಮರದ ಕೆಳಗೆ ಕುಳಿತಿರುತ್ತಾಳೆ. ಇದನ್ನು ಗಮನಿಸಿದ ಜನತೆ ತುಚ್ಚವಾಗಿ ಬಯ್ಯುತ್ತಾರೆ. ಅರ್ಚಕರಿಗೆ ಸಂಬಂಧಿಸಿದ ವ್ಯಕ್ತಿ ಸೂಚಿಸಿದಳಂತೆ. ಆಗ ಆ ವ್ಯಕ್ತಿ ಎಂದು ತಲೆಗೆ ಕೈ ಹಾಕಿ ಕೂದಲನ್ನು ಬಗೆದು ನೋಡುವಾಗ ತಲೆ ತುಂಬ ರತ್ನಗಳು ಕಂಡವು. ಆಗ ದಿಗಿಲುಗೊಂಡ ಅರ್ಚಕ ವ್ಯಕ್ತಿಗೆ ತನ್ನ ನಿಜರೂಪ ತೋರಿಸಿ ತನಗೆ ಗುಡಿ ಕಟ್ಟಿ ಪ್ರತಿದಿನ ಪೂಜೆ ಮಾಡಬೇಕೆಂದು ಹೇಳಿ ಮಾಯವಾದಳಂತೆ (ಸ.ಚಿ. ರಮೇಶ, ಪುಟ ೩೮೧, ೧೯೯೩-೯೪). ಅಂತೆಯೇ ಆ ಗಾಣಿಗ ಮನೆತನದವರೇ ಈಗಲೂ ಪೂಜೆ ಸೇವೆಯಲ್ಲಿ ತೊಡಗಿದ್ದಾರೆ.

ಜನಪದರ ಗೀತೆಗಳಲ್ಲಿ ಬಳರಿ ದೇವತೆ ಬಳ್ಳಾರಿಯ ಪ್ರಸ್ತಾಪ ಕಂಡುಬರುತ್ತದೆ. ಬಳ್ಳಾರಿ ದೊಡ್ಡನರಸಮ್ಮ ಹೇಳಿದ ಜನಪದ ಗೀತೆಯಲ್ಲಿ 'ಬನದ ದೇವತೆ' ಎಂಬ ವಿಚಾರ ಬರುತ್ತದೆ. ಆ ಒಂದು ಪ್ರಸಂಗ ಹೀಗಿದೆ. ಒಬ್ಬ ಮಾದಿಗರ ಹುಡುಗನೂ ಬನಕ್ಕೆ ತಂಗಡಿ ಕಟ್ಟಿಗೆ ತರಲು ತೆರಳುತ್ತಾನೆ. ಅಲ್ಲಿದ್ದ ಬಳರಿಯು ಇವನ ಸೌಂದರ್ಯಕ್ಕೆ ಮಾರು ಹೋಗಿ ತನ್ನ ಸಂಗಡ ಕರೆದೊಯ್ಯಲು ತಿಳಿಸುತ್ತಾಳೆ. ಇತ್ತ ಮನೆಗೆ ಬಂದ ಸೊಸೆ ಮಗನಿಗೆ ಅತ್ತೆ ನೀ ನೀಡಿ ಒಳಗಡೆ ಕರೆಯುತ್ತಾಳೆ.

"ಬಳರಿ"ಯು ಅತ್ತಿಗೆ ತಲೆಯಲ್ಲಿದ್ದ ಹೇನು ತೆಗೆಯಲು ಹೇಳಿದಾಗ ಅತ್ತೆಯು ತಲೆಗೆ ಕೈ ಹಾಕಿ ಬಗಿಯುವಾಗ ಕೂದಲಲ್ಲಿ ಕಣ್ಣು ಕಂಕಣ ನೋಡಿ ಬೆಚ್ಚಿ ಬೀಳುವಳು. ಅನಂತರ ರಾತ್ರಿ ವೇಳೆಯಲ್ಲಿ ಮಾದಿಗನ ಜೊತೆಯಲ್ಲಿ ಮಲಗಿ ಅವನ ಹೊಟ್ಟೆ ಬಗಿದು ರಕ್ತ ಕುಡಿದು ಅಲ್ಲಿಂದ ಹೊರಬರುತ್ತಾಳೆ. ಪೂರ್ವಕ್ಕೆ ಮುಖಮಾಡಿ ಹೊರಟಿರುವ ಬಳರಿಗೆ ಬಳೆ ಮಾರುವವನು ಎದುರಾಗುತ್ತಾನೆ. ಆತನಿಂದ ಬಳೆ ಹಾಕಿಸಿಕೊಂಡು ಪೂರ್ವ ದಿಕ್ಕಿಗೆ ಮುಖ ಮಾಡಿ ಹೊರಟು ಹೋದಳು. ಇದರಿಂದಲೇ ಬಳ್ಳಾರಿ ದುರ್ಗಮ್ಮನ ಗುಡಿಯಲ್ಲಿ ಬಳರಿ ದೇವತೆಯ ಬೆನ್ನಿಗೆ ಪೂಜೆ ಮಾಡಲಾಗುತ್ತದೆ ಎಂದು ತಿಳಿಸಿದ್ದಾರೆ. ಇಲ್ಲಿ ಮಾದಿಗನನ್ನು ಕೊಂದ ಸಂಕೇತದಿಂದಲೇ ದುರ್ಗಿಯ ಶಿಲ್ಪದಲ್ಲಿ ಆಕೆಯ ಪಾದದ ಕೆಳಗೆ ಒಬ್ಬ ವ್ಯಕ್ತಿ ಬಿದ್ದಿರುವುದನ್ನು ಡಾ.ಎಂ.ಎಂ. ಕಲಬುರ್ಗಿ ಸೂಚಿಸಿದ್ದಾರೆ. ಇದಲ್ಲದೆ ಬಳರಿಯ ಶಿಲ್ಪದ ಸಾಲಿನ ಬಿಳಿ ಗೂಬೆಯ ಚಿತ್ರದ ಬಗ್ಗೆ ಸೋಧನೆ ಆಗಬೇಕೆಂದಿದ್ದಾರೆ. ಗೂಬೆಯ ಸಾವಿನ ಸುದ್ದಿಯನ್ನು ತರುವ ಪಕ್ಷಿ ಎಂಬ ನಂಬಿಕೆ ಜನರಲ್ಲಿದೆ. ಅದು ಬಂದು ನಾಡೊಳಗೆ ಅರಚಿಕೊಂಡ ಕೆಲವು ದಿನಗಳಲ್ಲೇ ಸಾಯುವರೆಂಬ ಅಚಲವಾದ ನಂಬಿಕೆ ಇದೆ. ಅಲ್ಲದೆ ಇಲ್ಲಿ ದುರ್ಗೆ (ಬಳರಿಯು) ಸಾವನ್ನು ತರುವ ದೇವತೆಯಾಗಿದ್ದರಿಂದಲೂ ಅವಳ ಪಕ್ಕದಲ್ಲಿ ಗೂಬೆ ಇದೆ ಎನಿಸುತ್ತದೆ. ಈ ಕಥೆಗೆ ಹೊಂದಿಕೊಂಡಿರುವಂತೆ ತಿಂದಪ್ಪ ಎಂಬುವರು ಹೇಳುವಂತೆ 'ಬಳರಿ' (ಬಳ್ಳಾರಿ ದುರ್ಗಮ್ಮ) ಗುಡಿಯಲ್ಲಿ ಪೂಜೆಗಾಗಿ ಬಂದ ಭಕ್ತರಲ್ಲಿ ಒಬ್ಬ ಬಾಲಕನು ಆಹಾರವಾಗಿ ಸೇವಿಸುತ್ತಿರುವುದನ್ನು ಎದುರಿಗಿರುವ ಮಲ್ಲೇಶದೇವನು ಗಮನಿಸಿ ನೀನು ಹೀಗೆ ದಿನಾಲು ಬಂದ ಭಕ್ತರನ್ನು ಕೊಲ್ಲುತ್ತಾ ಹೋದರೆ ಜನಸಂಖ್ಯೆ ಬೆಳೆಯಲಾರದು ಎಂದು ಕೇಳಿದ್ದಕ್ಕೆ ಮಲ್ಲೇಶನಿಗೆ ಕಾಣಿಸಿದಂತೆ ಪೂರ್ವಕ್ಕೆ ಮುಖಮಾಡಿ ಬಾಲಕನನ್ನು ತಿನ್ನಲು ತೊಡಗಿದಳಂತೆ. ಅಂದಿನಿಂದಲೇ ದುರ್ಗೆಯ (ಬಳರಿ ದೇವತೆಗೆ) ಬೆನ್ನಿಗೆ, ಹುತ್ತಿಗೆ ಪೂಜೆ ಮಾಡುತ್ತಿರುವುದನ್ನು ಗಮನಿಸಬಹುದು. ಅಲ್ಲದೆ ಬಳರಿಯು ಉಗ್ರಸ್ವರೂಪದವಳೆಂದು ಅವಳನ್ನು ಮಾನವರು ನೋಡಿದರೆ ಭೀತಿಗೊಳಗಾಗುವರೆಂದು ಅರ್ಚಕರು ಮೊದಲು ಪೂಜೆಯನ್ನು ಪರದೆ ಮುಚ್ಚಿಕೊಂಡು ಪೂಜಿಸುವರು. (ಅರ್ಚಕರು ಇಲ್ಲಿ ಇಂದಿಗೂ ಪ್ರತಿದಿನ ಹೀಗೆ ಆಚರಿಸುತ್ತಾರೆ). ಇವೆಲ್ಲಾ ಆಧಾರಗಳನ್ನು ನಾವು ಅವಲೋಕಿಸುವುದಾದರೆ 'ಬನದ ಬಳಾರಿ' ಎಂಬುವುದು ಕಾವ್ಯದಲ್ಲಿ ಹಾಗೂ ಜನಪದ ಗೀತೆಗಳಲ್ಲಿ ಬಳಕೆಯಾಗಿದ್ದು, ಹುಲಿಗೆಮ್ಮ ಎಂಬ ಜನಪದ ವ್ಯಕ್ತಿ ಹೇಳಿರುವ ಗೀತೆಯಲ್ಲಿ ಬಳ್ಳಾರಿ ದುರ್ಗಮ್ಮ ಬನದ ಮಾತೆಯಾಗಿರಬಹುದು. ಈ ರೀತಿಯ ಮೌಖಿಕ ಪರಂಪರೆಯ ಕತನಗಳಿವೆ. ಈ ಅಂಶಗಳನ್ನು ಪ್ರತಿಪಾದಿಸುವ ಕೆಲವು ಶಾಸನಗಳು 'ಬನದ ಬಳಾರಿ' ಎಂಬ ದೇವತಾ ಸೂಚಕ ಪದ ಉಲ್ಲೇಖಿಸುವುದು ಗಮನಿಸಬೇಕಾಗುತ್ತದೆ.

ಈ ಎಲ್ಲ ರೀತಿಯಿಂದ ನಾವು ನೋಡಿದಾಗ ಬಳ್ಳಾರಿ ಜಿಲ್ಲೆಯು ಭೌಗೋಳಿಕವಾಗಿ, ಪೌರಾಣಿಕವಾಗಿ, ಸಂಸ್ಕೃತಿ, ಐತಿಹಾಸಿಕವಾಗಿ, ರಾಜಕೀಯ, ಸಾಮಾಜಿಕವಾಗಿ, ನೈಸರ್ಗಿಕವಾಗಿ ಆರ್ಥಿಕವಾಗಿ ಬಹು ಅನನ್ಯತೆಯಿಂದ ಕೂಡಿದ್ದು, ಕರ್ನಾಟಕದ ಸಾಂಸ್ಕೃತಿಕತೆಗೆ ಪೂರಕವಾಗಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಉಷ್ಣತೆ ಅಧಿಕವಾಗಿದೆ. ಸಂಡೂರು ತಾಲ್ಲೂಕಿನ ಅರಣ್ಯ ಪ್ರದೇಶಗಳನ್ನು ಬಿಟ್ಟರೆ ಉಳಿದಂತೆ ಹೆಚ್ಚು ಮಳೆ ಬೀಳುವ ಸಂಭವ ಕಡಿಮೆ. ಏಕೆಂದರೆ ಇಲ್ಲಿ ಮರಗಿಡಗಳು ತುಂಬ ವಿರಳವಾಗಿವೆ.

ಈ ಜಿಲ್ಲೆಯಲ್ಲಿರುವ ಅರಣ್ಯ ಪ್ರದೇಶವು ೧೬೧೮ ೨೪ ಕಿ.ಮೀ.ಗಳು. ಇಲ್ಲಿರುವ ಕುರುಚಲ ಕಾಡಿನಲ್ಲಿಯ ಮರಗಳ ಎಲೆ ಉದುರುವ ಸ್ಥಿತಿ ಕಾಣುತ್ತದೆ. ಸಂಡೂರು ಬೆಟ್ಟ ಶ್ರೇಣಿಗಳಲ್ಲಿ ಶ್ರೀಗಂಧ ಮತ್ತು ಬೀಟೆ ಮರಗಳು ಅಧಿಕವಾಗಿವೆ. ಕೂಡ್ಲಿಗಿ ತಲೂಕಿನಲ್ಲಿ ಈಚಲು ಮರಗಳಿವೆ. ಈ ಅರಣ್ಯಗಳಲ್ಲಿ ಕಡವೆ, ಚಿರತೆಗಳಿವೆ. ಜಿಂಕೆ, ಕಾಡು ಹಂದಿ, ಅಡವಿ ಪ್ರದೇಶಗಳಲ್ಲಿ ಕರಡಿ, ನವಿಲು, ತೋಳ, ಜಿಂಕೆ. ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕಾಣಸಿಗುತ್ತದೆ. ಈ ಪ್ರದೇಶದ ಆಸುಪಾಸಿನಲ್ಲಿ ಪಾರಿವಾಳ, ಗಿಡುಗ, ಹದ್ದು, ಚಿಟ್ಟಿ, ಬೆಳುವ, ಗುಬ್ಬಿ, ಕೆರೆಹಾವು, ಹೆಬ್ಬಾವು, ನಾಗರಹಾವು, ಬಳಿ ಹೊಡಕ ಹಾವುಗಳು ಕಂಡುಬರುತ್ತದೆ.

## ೨.೪. ಪೌರಾಣಿಕ

ಬಳ್ಳಾರಿ ಜಿಲ್ಲೆಯು ಸಾಕಷ್ಟು ಪೌರಾಣಿಕ ಘಟನಾವಳಿಗಳನ್ನು ಹೊಂದಿದೆ. ಇಲ್ಲಿ ದೇವಿ ಪುರಾಣದ ಚಿತ್ರಣ, ರಾಮಾಯಣ-ಮಹಾಭಾರತದ ಪ್ರಸಂಗವು ಕಂಡುಬರುತ್ತದೆ. ದೇವಿಪುರಾಣಕ್ಕೆ ಸಂಬಂಧಿಸಿದಂತೆ ಬಳ್ಳಾರಿಯ ದುರ್ಗೆ (ದುರುಗಮ್ಮ) ದೇವಿಯು ಒಂದು ಅವತಾರವಾಗಿ ನೆಲೆಸಿದ್ದಾಳೆ. ಇದರಿಂದಲೇ ಬಳರಿಯು ಒಂದು ಗ್ರಾಮದೇವತೆಯಂತೆ ಕಂಡುಬರುತ್ತದೆ. ಇದಲ್ಲದೆ ಬನದ ದೇವತೆ ಎಂಬ ಉಲ್ಲೇಖದಂತೆ ಈಗಿರುವ ದುರ್ಗದೇವಾಲಯದ ಸ್ಥಳವು ಬನದ ಸ್ಥಳವಾಗಿತ್ತೆಂದು ದೃಢಪಡುತ್ತದೆ. ರಾಮಾಯಣದ ಚಿತ್ರಣಕ್ಕೆ ಸಂಬಂಧಿಸಿದಂತೆ ಇಡೀ ಹಂಪೆಯು ಅಂದರೆ ಇಲ್ಲಿರುವ ಕಿಷ್ಕಿಂದಾ ಸ್ಥಳವು ಪ್ರಮುಖವಾಗಿದೆ. Sugreeva later deiveen out by his brother vali, was the vanara king at the time and kishkindha which has been generally acknowledged to have been near the present Hampi in Hospet Taluk (ಗೆಜೆಟಿಯರ್). ಈ ಪ್ರದೇಶವು ರಾಮಾಯಣ ಮಹಾಕಾವ್ಯದಲ್ಲಿ ಕಂಡುಬರುವ ಕಿಷ್ಕಿಂಧೆಯಾಗಿದೆ ಎಂದು ನಂಬಲಾಗಿದೆ. ಈ ಕಿಷ್ಕಿಂದೆಯಲ್ಲಿ ರಾಮ ಇಲ್ಲಿಗೆ ಬರುವುದಕ್ಕೆ ಮುಂಚಿತವಾಗಿ ಇಲ್ಲಿ ವಾಲಿ, ಸುಗ್ರೀವ, ಹನುಮಂತ, ಮಾತಂಗ, ಜಾಂಬವಂತ ಮುಂತಾದ ವಾನರ ವೀರರು ಈ ಸ್ಥಳದ ಸುತ್ತಮುತ್ತಲೂ ಜೀವಿಸಿದ್ದರೆಂದು ತಿಳಿದುಬರುತ್ತದೆ.

ಹಂಪೆಯಲ್ಲಿ ಶಿವ ಪಾರ್ವತಿಯರು ತಪಸ್ಸು ಮಾಡಿದ್ದು ಅಲ್ಲದೆ ಇಲ್ಲಿಯೇ ಶಿವ ಪಾರ್ವತಿಯರ ವಿವಾಹ ಹಾಗೂ ಮನ್ಮಥನನ್ನು ಶಿವನು ತನ್ನ ಹಣೆಗಣ್ಣಿನಿಂದ ಸುಟ್ಟು ಭಸ್ಮ ಮಾಡಿದ ಸ್ಥಳ ಇದಾಗಿದೆ. ಈಗಿರುವ ಶಿವನ ದೇವಾಲಯಕ್ಕಿಂತ ಬೆಟ್ಟದ ತುದಿಯಲ್ಲಿ ಮೂಲ ವಿರೂಪಾಕ್ಷ ಗುಡಿ ಇತ್ತೆಂದು ಅಲ್ಲದೆ ಗುಡಿಯ ಎದುರಿಗೆ ಮನ್ಮಥ ಕುಂಡ ಇದೆ ಎಂದು ತಿಳಿದು ಬರುತ್ತದೆ. ಇಲ್ಲಿ ಪ್ರಸ್ತಾಪವಾಗಿರುವ ಪಂಪಾ ವಿಷ್ಣುವಿನ ಮೊಮ್ಮಗಳು, ಬ್ರಹ್ಮನ ಮಗಳು ಸತ್ಯ ಗೋತ್ರೋದ್ಭವಳು ಪಂಪಾ ಹೆಸರಿನ ಕನ್ಯೆಯನ್ನು ಸದಾಶಿವನ ಮೊಮ್ಮಗನೂ ಮಹೇಶ್ವರನೂ ಆದ ವಿರೂಪಾಕ್ಷನಿಗೆ ಕೊಟ್ಟು ವಿವಾಹ ನೆರವೇರಿಸಿದನೆಂದು ಇಲ್ಲಿನ ಸ್ಥಳ ಪುರಾಣದಿಂದ ತಿಳಿದು ಬರುತ್ತದೆ. ಅಲ್ಲದೆ ಹಂಪೆಯ ಖ್ಯಾತಿಯ ವಿರೂಪಾಕ್ಷನೆಂಬುದಕ್ಕೆ ಜನಪದ ಐತಿಹ್ಯವಲ್ಲದ ಅನೇಕ ಕೃತಿಗಳಲ್ಲಿ ಹೇಮಕೂಟ, ಕಿಷ್ಕಿಂದ, ಪಂಪಾ ವಿರೂಪಾಕ್ಷ, ಪಂಪಾ ಸರೋವರ ಎಂಬ ಹೆಸರುಗಳು ಪ್ರಸ್ತಾವಗೊಂಡಿವೆ. ಪಂಪಾಂಬಿಕೆಯ ತವರೂರು.

ನಂತರದಲ್ಲಿ ರಾಮಾಯಣದ ಘಟನೆ ಅಂದರೆ ರಾಮನು ೧೪ ವರ್ಷದ ವನವಾಸ ಸಮಯದಲ್ಲಿ ರಾವಣನು ಸೀತೆಯನ್ನು ಕದ್ದೊಯ್ದ ಮೇಲೆ ಆಕೆಯನ್ನು ಹುಡುಕುತ್ತಾ ಹಂಪೆಯ ಕಿಷ್ಕಿಂದಾ ಸ್ಥಳಕ್ಕೆ ಬಂದಿದ್ದನೆಂದು ಸ್ಥಳ ಪುರಾಣಗಳು ತಿಳಿಸುತ್ತವೆ. ಆಗ ಕಿಷ್ಕಿಂದೆಯಲ್ಲಿ ವಾಲಿ ಸುಗ್ರೀವ ಹನುಮಂತ ಎಂಬ ವಾನರು ಹಾಗೂ ಜಾಂಬುವಂತರ ನೆಲೆವೀಡಾಗಿತ್ತು. ಅವರ ಸ್ನೇಹವಾದ ಬಳಿಕವೇ ವಾಲಿ ಸುಗ್ರೀವರ ಯುದ್ಧಕ್ಕೆ ರಾಮನೆ ಅಣಿಗೊಳಿಸಿ ವಾಲಿಯನ್ನು ಕೊಲ್ಲುವ ಘಟನೆ ಇಲ್ಲಿ ಜರುಗಿತ್ತೆಂದು ತಿಳಿದು ಬರುತ್ತದೆ. ನಂತರ ಅವರೆಲ್ಲರ ನೆರವಿನಿಂದ ರಾವಣನನ್ನು ಕೊಂದು ಸೀತೆಯನ್ನು ಕರೆತರುತ್ತಾರೆ. ಆನಂತರ ಸೀತೆಗೆ ಕಿಷ್ಕಿಂಧ ಸ್ಥಳದ ಮಹತ್ವದ ಬಗ್ಗೆ ತಿಳಿಸುತ್ತಾ ಕೋದಂಡರಾಮನ ದೇವಸ್ಥಾನದಲ್ಲಿ ಕೆಲವು ದಿನ ತಂಗಿದ್ದರೆಂದು ತಿಳಿದು ಬರುತ್ತದೆ. ಆನಂತರ ಸಂಡೂರಿನ ರಾಮಘಡಕ್ಕೂ ಹೋಗಿದ್ದರೆಂದು ತಿಳಿದು ಬರುತ್ತದೆ. ಈ ಕಿಷ್ಕಿಂದ ಪ್ರದೇಶದಲ್ಲಿ ವಾಲಿ ವಾಸವಾಗಿದ್ದರಿಂದ ವಾಲಿಭಂಡಾರವೆಂಬ ಗುಹೆಗಳು ಈಗಲೂ ಇರುವುದರ ಬಗ್ಗೆ ಆಧಾರಗಳು ಸಿಗುತ್ತದೆ. ಜೊತೆಗೆ ಸೀತೆಯನ್ನು ರಾವಣನು ಕದ್ದೊಯ್ದ ಬಗ್ಗೆ ಕೆಲವು ಸಂಗತಿಗಳನ್ನು ತಿಳಿಸುತ್ತಾರೆ. ಅವೆಂದರೆ ಕಿಷ್ಕಿಂದ ಮಾರ್ಗದಲ್ಲಿ ರಾವಣ ಸೀತೆಯನ್ನು ಕರೆದೊಯ್ಯುವಾಗ ಆಕೆ ಧರಿಸಿದ ಆಭರಣಗಳು ಪಂಪಾ ಸರೋವರದಲ್ಲಿ ಬಿದ್ದಿರುವುದು ಹಾಗೂ ಈಗಲೂ ಗಮನಿಸುವ ಬಂಡೆಯ ಮೇಲೆ ಗೋಚರವಾಗುವ ಪಟ್ಟೆಯಾಕಾರದ ಗುರುತು ಬಿದ್ದಿರುವ ಸೀತೆಯ/ಸೆರಗಿನ ಗುರುತು ನಿತ್ಯವೂ ರಾಮಾಯಣದ ಘಟನೆಯನ್ನು ತಿಳಿಸುತ್ತದೆ. ಆದರೆ ಇದು ಲಾವಾರಸದ ಕಲ್ಲಿನ ಪದರದ ಹೆಗ್ಗುರುತಾಗಿರಬೇಕೆಂದು ಭೂವಿಜ್ಞಾನಿಗಳ ಅಭಿಪ್ರಾಯವಾದೆ. ಅಲ್ಲದೆ ಇಲ್ಲಿಯೇ ಮಾತಂಗಿ ಮುನಿಯು ತಂಗಿದ್ದನೆಂಬ ನಂಬಿಕೆ ಇದೆ. ಆತನ ಬೃಹದ್ದೇಶಿ ಎಂಬ ಕೃತಿಯನ್ನು ಇಲ್ಲಿಯೇ ರಚಿಸಿರಬೇಕು. ಜೊತೆಗೆ ಮಾತಂಗಿ ಮುನಿಯ ಮಗಳಾದ ಮಾತಂಗಿ ಈ ಸ್ತ್ರೀ ದೇವತೆಯಾಗಿ ಪೂಜೆಗೊಳ್ಳುತ್ತಿರುವಳು. ಈ ಮುನಿಯಿಂದಲೇ ಮಾತಂಗ ಪರ್ವತ ಎಂದು ಈಗಲೂ ಕರೆಯುತ್ತಾರೆ. ಜಾಂಬವಂತನು ತನ್ನ ಅವಸಾನದ ಅಂಚಿನಲ್ಲಿ ರಾಮನಿಗೆ ತಿಳಿಸಿ ತನಗೆ ಯೋಗ್ಯವಾದ ಸ್ಥಳವನ್ನು ಸೂಚಿಸಿದರೆ ತಪಸ್ಸು ಮಾಡಲು ತೆರಳುವೆನು ಎಂದು ಕೇಳಿದಾಗ ರಾಮನು ಜಾಂಬವಂತನಿಗೆ ಹಂಪೆಯ ದಕ್ಷಿಣ ದೆಸೆಯೊಳು ಜಂಬೂದ್ವೀಪವೆಂಬ ಸ್ಥಳವಿದೆ. ಅಲ್ಲಿಗೆ ಹೋಗಿ ತಪಸ್ಸು ಮಾಡಲು ತಿಳಿಸುವನು. ಅಂತೆಯೇ ಜಾಂಬವಂತನು ಜಂಬುದ್ವೀಪ ಅಂದರೆ ಈಗಿರುವ ಜಂಬುನಾಥ ಬೆಟ್ಟವೆ ಜಾಂಬವಂತನು ತಪಸ್ಸು ಮಾಡಿದ ಸ್ಥಳವೆಂದು ಐತಿಹ್ಯಗಳಿಂದ ತಿಳಿಯುತ್ತದೆ.

ಮಹಾಭಾರತಕ್ಕೆ ಸಂಬಂಧಿಸಿದಂತೆ ಹೆಚ್ಚು ಘಟನೆಗಳು ಇಲ್ಲಿ ಜರುಗಿಲ್ಲವೆನಿಸುತ್ತದೆ. ಆದರೂ ಪ್ರಾಸಂಗಿಕವಾಗಿ ಹೊಸಪೇಟೆ ತಾಲೂಕಿನ ನಾಗೇನಹಳ್ಳಿ ಹತ್ತಿರದ ಧರ್ಮ ಗುಡ್ಡದ ಗುಹೆಗಳಲ್ಲಿ ಧರ್ಮರು (ಪಾಂಡವರು) ವಾಸವಾಗಿದ್ದರೆಂದು ತಿಳಿಸುತ್ತದೆ. ಹಂಪೆಯ ಪಂಪಾ ಸರೋವರ ದಾಟಿ ಬಂದಾಗ ವಿರಾಟ ಪರ್ವದ ದಿನದಲ್ಲಿ ಅಲೆದಾಡಿಕೊಂಡು ಇಲ್ಲಿಗೆ ಬಂದಿರುತ್ತಾರಂತೆ. ಈ ಗುಡ್ಡದಲ್ಲಿ ತಂಗಿದ್ದಾಗ ಪೂಜಾರಿಗೂ, ಮೊಸರು ಮಾರುವ ಭಕ್ತನಿಗೂ ಕಾಣಿಸಿಕೊಂಡ ಬಗ್ಗೆ ಸ್ಥಳ ಐತಿಹ್ಯ ಮಾಹಿತಿ ನೀಡುತ್ತದೆ. ಈ ಧರ್ಮದ ಗುಡ್ಡದಲ್ಲಿ ಕೆಲವು ಪುರಾವೆಗಳು ಪಾಂಡವರು ಇದ್ದರೆಂಬುದರ ಬಹು ಸ್ಪಷ್ಟ ದಾಖಲೆಗಳಾಗಿವೆ. ಅವೆಂದರೆ

ಅರ್ಜುನನು ಈ ಭಾಗದಲ್ಲಿ ನೀರು ಸಿಗದೇ ಇದ್ದಾಗ ತನ್ನ ಬಾಣದಿಂದ ಕಲ್ಲಿನಲ್ಲಿ ನೀರನ್ನು ತರಿಸಿದನಂತೆ. ಅದು ಈಗಲೂ ಬತ್ತದ ಬಾವಿ ಕೃಷಿ ಮಾಡಿದ ಗೆರೆಗಳು ವಿಸ್ಮಯಕಾರಿ ಸಂಗತಿಗಳಾಗಿವೆ. ಇದರಿಂದಲೇ ಪ್ರತಿ ವರ್ಷವೂ ದಸರಾ ಹಬ್ಬದ ಊರ ಬನ್ನಿಗಿಂತ ಹಿಂದಿನ ದಿನ ಇಲ್ಲಿ ಗುಡ್ಡದ ಬನ್ನಿ ಎಂಬ ಆಚರಣೆ ಮಾಡುತ್ತಾರೆ. ಆ ದಿನ ಅಕ್ಕ ಪಕ್ಕದ ಊರಿನ ಜನರು ಗ್ರಾಮ ದೇವತೆಗಳನ್ನು ಪಲ್ಲಕ್ಕಿಯಲ್ಲಿಟ್ಟುಕೊಂಡು ಬಂದು ಬನ್ನಿ ಮುಡಿದು ಹೋಗುತ್ತಾರೆ. ಈ ಗುಹೆಯಲ್ಲಿ ತುಂಬ ಸುಂದರವಾದ ಕಪ್ಪು ಕಲ್ಲಿನ ಬಸವ, ಗಣಪ, ವೀರಭದ್ರ, ಲಿಂಗ ಹಾಗೂ ಸರ್ಪ, ಕಾಳಿಂಗ ರುಂಡ ಎನ್ನುವ ಗುಂಡು ಕಲ್ಲುಗಳು ಕಾಣಸಿಗುತ್ತದೆ. ಇದಲ್ಲದೆ ಈ ಭಾಗದಲ್ಲಿ ಯಾವುದೇ ಹಳ್ಳಿಯಲ್ಲಿ ಕರೆಕಲ್ಲು (ಕಪ್ಪುಕಲ್ಲು) ಸಮೂಹದ ಬೆಟ್ಟ ಇದ್ದರೆ ಅಲ್ಲಿ ಪಾಂಡವರು ನಡೆದು ಬಂದುದಕ್ಕೆ ಅವರ ಸ್ಪರ್ಶದಿಂದ ಕಪ್ಪು ಕಲ್ಲಾಗಿದೆ ಎಂದು ತಿಳಿಸುತ್ತಾರೆ. ಇದೇನೇ ಇರಲಿ ಈ ಭಾಗದಲ್ಲಿ ಪೌರಾಣಿಕ ಅಂಶಗಳ ಮಾಹಿತಿಯಿಂದ ತನ್ನದೇ ಆದ ಪ್ರಾಮುಖ್ಯತೆ ಪಡೆದಿದೆ ಎಂದು ತಿಳಿದು ಬರುತ್ತದೆ.

### ೨.೫. ಭೌಗೋಳಿಕ ಲಕ್ಷಣಗಳು

ಕರ್ನಾಟಕದ ನಕ್ಷೆಯ ಪ್ರಕಾರ ಈ ಜಿಲ್ಲೆಯು ಪೂರ್ವ ಭಾಗದ ಮಧ್ಯದಲ್ಲಿ ನಂದಿ ಆಕಾರದಲ್ಲಿರುವಂತೆ ಗೋಚರಿಸುತ್ತದೆ. ಈ ಜಿಲ್ಲೆಯ ಪಶ್ಚಿಮಕ್ಕೆ ಹಾವೇರಿ, ದಕ್ಷಿಣಕ್ಕೆ ದಾವಣಗೇರಿ, ಉತ್ತರಕ್ಕೆ ರಾಯಚೂರು, ಪೂರ್ವಕ್ಕೆ ಆಂದ್ರಪ್ರದೇಶಗಳಿವೆ. ಪೂರ್ವ-ಪಶ್ಚಿಮ ಭಾಗವು ೧೬೧.೮ ಕಿ.ಮೀ. ಉದ್ದ, ಉತ್ತರ-ದಕ್ಷಿಣ ೮೩.೭೮ ಕಿ.ಮೀ. ಅಗಲವಾಗಿದೆ. ನೈರುತ್ಯ-ಈಶಾನ್ಯ ೧೮೭೮ ಕಿ.ಮೀ. ಉದ್ದವಾಗಿದ್ದು ಪೂರ್ವರೇಖಾಂಶ ೭೫ ಡಿಗ್ರಿ, ೪೦'೭೦'೧೧ ಹಾಗೂ ಉತ್ತರ ರೇಖಾಂಶ ೧೪ ಡಿಗ್ರಿ ೩೦'೧೫ರ ನಡುವೆ ಇದೆ. (ಕರ್ನಾಟಕ ಗೆಜೆಟಿಯರ್) ಪ್ರಮುಖವಾಗಿ ಬಳ್ಳಾರಿ ಹೊಸಪೇಟೆ ಎಂಬ ಎರಡು ಉಪ ವಿಭಾಗಗಳಾಗಿ ವಿಂಗಡಿಸಲ್ಪಟ್ಟಿದೆ. ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಮದರಾಸು ಪ್ರಾಂತ್ಯಕ್ಕೆ ಸೇರಿದ ಬಳ್ಳಾರಿಯಲ್ಲಿ ಆಲೂರು, ರಾಮದುರ್ಗ ಮತ್ತು ಆಧೋನಿ ತಾಲೂಕುಗಳು ಸೇರ್ಪಡೆಯಾಗಿದ್ದವು. ೧೯೫೩ರಂದು ಆಂಧ್ರಪ್ರದೇಶ ಭಾಷಾವಾರು ಪ್ರಾಂತ್ಯದಿಂದ ವಿಭಜನೆಗೊಂಡಾಗ ಈ ಮೂರು ತಾಲ್ಲೂಕುಗಳು ಆಂಧ್ರಪ್ರದೇಶಕ್ಕೆ ಸೇರಿದವು. ಈಗಿರುವ ಏಳು ತಾಲೂಕುಗಳಲ್ಲಿ (ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ) ೧೧ ಪಟ್ಟಣಗಳು. ೬೭೨ ಗ್ರಾಮಗಳನ್ನೊಳಗೊಂಡ ಜಿಲ್ಲೆ ಇದಾಗಿದೆ. ಈ ಜಿಲ್ಲೆಯ ೯೮೯೮ ಕಿ.ಮೀ. ವಿಸ್ತೀರ್ಣದಲ್ಲಿ ೧೧.೨೨.೬೮೬ ಜನಸಂಖ್ಯೆಯನ್ನು ಹೊಂದಿದೆ.

ಈ ಜಿಲ್ಲೆಯ ಪಶ್ಚಿಮ, ವಾಯು, ಉತ್ತರ ಮತ್ತು ಈಶಾನ್ಯದ ಗಡಿ ಭಾಗದಿಂದ ತುಂಗಭದ್ರಾ ನದಿಯು ಹರಿಯುತ್ತಿದೆ. ಪಶ್ಚಿಮಕ್ಕೆ ಧಾರವಾಡ, ಉತ್ತರಕ್ಕೆ ರಾಯಚೂರು ಜಿಲ್ಲೆಯಲ್ಲಿ ಈ ನದಿಯು ಬೇರ್ಪಡುತ್ತದೆ. ಆದರೆ ವಾಯುವ್ಯದಿಂದ ಆಗ್ನೇಯದವರೆಗೂ ಹಬ್ಬಿರುವ ಸಂಡೂರು ಬೆಟ್ಟಗಳು ಜಿಲ್ಲೆಯನ್ನು ಪೂರ್ವ ಪಶ್ಚಿಮವಾಗಿ ಎರಡು ಪ್ರಮುಖ ಭೌಗೋಳಿಕವಾಗಿ ವಿಭಾಗಗಳಾಗಿ ವಿಂಗಡಿಸಿವೆ. ಬಳ್ಳಾರಿಯ ಪೂರ್ವ ಭಾಗವು ಸಿರುಗುಪ್ಪ ತಾಲೂಕನ್ನು ಒಳಗೊಂಡಿದೆ. ಸಮತಟ್ಟಾದ ಪ್ರದೇಶಗಳಲ್ಲಿ ಹತ್ತಿ ಬೆಳೆಯಲು ಯೋಗ್ಯವಾದ

ಕಪ್ಪು ಮಣ್ಣಿನ ಬಯಲಲ್ಲಿ ಮರಗಿಡಗಳ ಸಂಖ್ಯೆ ಕಡಿಮೆ ಇವೆ. ಅಲ್ಲಲ್ಲಿ ಕಲ್ಲು ಬೆಟ್ಟಗಳು ಯಥೇಚ್ಛವಾಗಿ ಕಾಣಸಿಗುತ್ತದೆ. ಪಶ್ಚಿಮ ಭಾಗದಲ್ಲಿ ಕಪ್ಪು ಮಣ್ಣಿನ ಬಯಲು ಮತ್ತು ಅಧಿಕ ಭಾಗದ ಕಪ್ಪು ಕೆಂಪು ಮಿಶ್ರಿತ ಮಣ್ಣು ಇಲ್ಲಿದೆ. ಈ ಪ್ರದೇಶದಲ್ಲಿ ಕೆಲ ಊರುಗಳನ್ನು ಬಿಟ್ಟರೆ ಉಳಿದೆಲ್ಲಾ ಕಾಡು ಬೆಟ್ಟಗುಡ್ಡಗಳಿಂದ ಆವೃತವಾಗಿದೆ.

ಬಳ್ಳಾರಿ ಜಿಲ್ಲೆಯ ಪಶ್ಚಿಮ ಭಾಗವು ಪೂರ್ವದ ಭಾಗಕ್ಕಿಂತಲೂ ಉತ್ತಮವಾಗಿದ್ದು, ಇಲ್ಲಿ ಮಳೆಯು ಹೆಚ್ಚಾಗಿ ಬೀಳುತ್ತದೆ. ತುಂಗಭದ್ರಾ ನದಿಯ ಮಲ್ಲಾಪುರಂ ಬಳಿಯವರೆಗ್ರೂ ಸಂಡೂರು ಬೆಟ್ಟದ ಸಾಲು ಹಬ್ಬಿದ್ದು, ಹಡಗಲಿ ತಾಲೂಕಿನ ಸೋಗಿ ಗ್ರಾಮದ ಬಳಿ ಬೆಟ್ಟದ ಮಲ್ಲಯ್ಯ ಗುಡ್ಡದ ಸಾಲು ಇದ್ದು, ಆ ಭಾಗದಲ್ಲಿ ಹೆಚ್ಚು ಮಳೆಯನ್ನು ತರುತ್ತದೆ. ಪ್ರತಿ ವರ್ಷ ಸಂಡೂರು ಹಾಗೂ ಹಡಗಲಿ ತಾಲೂಕಿನಲ್ಲಿಯೇ ಹೆಚ್ಚು ಮಳೆ ಬೀಳುತ್ತದೆ.ಸಂಡೂರು ಬೆಟ್ಟದ ಸಾಲು ಆಗ್ನೇಯದ ಕಡೆಗೆ ಸುಮಾರು ೪೮ ಕಿ.ಮೀ. ದೂರ ವಿಸ್ತಾರವಾಗಿದೆ. ಈ ಬೆಟ್ಟದ ಮಧ್ಯಭಾಗದಲ್ಲಿ ನಾರಿಹಳ್ಳದ ಎರಡು ಕಮರಿಗಳಿವೆ. ಸಂಡೂರಿಗೆ ಮುಕುಟ ಪ್ರಾಯವಾಗಿರುವ ಕುಮಾರ ಸ್ವಾಮಿ ದೇವಾಲಯ ಬೆಟ್ಟ ಸಮುದ್ರ ಮಟ್ಟದಿಂದ ೧೧೩೬ ಮೀಟರ್ ಎತ್ತರದಲ್ಲಿದೆ. ಇದರ ಮಧ್ಯದಲ್ಲಿರುವ ರಾಮನಮಲೈ ೯೯೨ ಮೀ ಹಾಗೂ ಜಂಬುನಾಥ ಬೆಟ್ಟವು ೯೦೮ ಮೀಟರ್ ಎತ್ತರದಲ್ಲಿದೆ.

ಸಂಡೂರು ಪೂರ್ವ ಭಾಗದಲ್ಲಿರುವ ವಾಯುವ್ಯದಿಂದ ಆಗ್ನೇಯದವರೆಗೆ ಹೆಚ್ಚಿರುವ ಸುಗ್ಗ ಮಹದೇವ ಬೆಟ್ಟ ಅಥವಾ ತಾಮ್ರ ಪರ್ವತಶ್ರೇಣಿಯು ದರೋಜಿ ಕೆರೆಯವರೆಗೂ ೪೨ ಕಿ.ಮೀ.ಗಳಷ್ಟು ಉದ್ದವಿದೆ. ಇದರ ಉತ್ತರವು ೧೦,೦೦೨ ಮೀ. ಇದೆ. ಈ ಭಾಗದ ನೈರುತ್ಯಕ್ಕೆ ೪೮ ಕಿ.ಮೀ. ದೂರದಲ್ಲಿರುವ ಮಲ್ಲಯ್ಯನ ಗುಡ್ಡದ ಶ್ರೇಣಿಯು ಹಡಗಲಿ ಹರಪನಹಳ್ಳಿಯವರೆಗೂ ವ್ಯಾಪಿಸಿದೆ. ತುಂಗಭದ್ರ ಬಳಿ ಹೊನ್ನೂರಿನ ಹತ್ತಿರ ಆರಂಭವಾಗಿ ಆಗ್ನೇಯದವರೆಗೂ ಹಬ್ಬಿ ಸುಮಾರು ೪೦ ಕಿ.ಮೀ. ದೂರವನ್ನು ಹೊಂದಿದೆ. ಇದು ಮುಂದೆ ಚಿಕ್ಕ ಹಗರಿ ಕಣಿವೆ ಬಳಿ ಕಡಿದು ಹೋಗಿ ಮುಂದೆ ೧೧ ಕಿ.ಮೀ. ದೂರದಲ್ಲಿ ಕಾಣಿಸಿಕೊಂಡು ಚಿತ್ರದುರ್ಗದವರೆಗೂ ಹಬ್ಬಿದೆ.

ಮಲ್ಲಯ್ಯ ಗುಡ್ಡದ ಶ್ರೇಣಿಯ ಎತ್ತರವು ೯೭೮ ಕಿ.ಮೀ. ವರೆಗೂ ನೈರುತ್ಯಕ್ಕೆ ೧೩ ೧೬ ಕಿ.ಮೀ. ಅನತಿ ದೂರದಲ್ಲಿ ವಾಯುವ್ಯದಿಂದ ಆಗ್ನೇಯಕ್ಕೆ ಕಲ್ಲಹಳ್ಳಿ ಗುಡ್ಡದವರೆಗೂ ಈ ಶ್ರೇಣಿ ಇದೆ. ಇಲ್ಲಿರುವ ಅತಿ ದೊಡ್ಡದಾದ ಕಲ್ಲಹಳ್ಳಿ ಗುಡ್ಡವು ೮೫೩ ಮೀ. ಎತ್ತರವಿದೆ. ೧೪ ಕಿ.ಮೀ. ದೂರದಲ್ಲಿ ಕವಲೊಡೆದು ತೆಲಗಿ ಗುಡ್ಡದವರೆಗೂ ಮಾರ್ಪಟ್ಟು, ಮುಂದೆ ಹರಪನಹಳ್ಳಿಯ ದಕ್ಷಿಣ ಗುಡ್ಡದವರೆಗೂ ಹಬ್ಬಿದೆ. ಈ ಗುಡ್ಡಗಳಲ್ಲಿ ನರಸಿಂಹದೇವರ ಗುಡ್ಡವು ೭೭೫ಮೀ. ಎತ್ತರವಿದೆ. ಈ ಶ್ರೇಣಿ ದಕ್ಷಿಣ ಭಾಗದ ಉಚ್ಚಂಗಿದುರ್ಗದ (೮೧೫ಮೀ.) ವರೆಗೂ ತಲುಪುತ್ತದೆ. ಕೂಡ್ಲಿಗಿ ಬೆಟ್ಟದ ಶ್ರೇಣಿಯು ಉತ್ತರ ಮತ್ತು ಪೂರ್ವ ಭಾಗದಲ್ಲಿ ಹಾದು ಹೋಗುತ್ತದೆ. ಸಂಡೂರಿನ ಚೋರುನೂರು ಸಮೀಪದ ಗುಡೇಕೋಟೆ ಶ್ರೇಣಿಯಿಂದ ಆರಂಭವಾಗಿ ಕೂಡ್ಲಿಗಿ ತಾಲೂಕಿನ ಗುಡೇಕೋಟೆ ದುರ್ಗದ ಉತ್ತರದವರೆಗೂ ಹಬ್ಬಿ ಚನ್ನಗಿರಿ ಕಣಿವೆ ದಾಟಿ ಚಿತ್ರದುರ್ಗ

ಸೆರಗಿನಲ್ಲಿ ಹಾಯುತ್ತಿದೆ. ಇದರ ದಕ್ಷಿಣ ಭಾಗದಲ್ಲಿರುವ ಕೈಲಾಸಕೊಂಡ ಶಿಖರವು ೯೧೭ ಕಿ.ಮೀ. ಉತ್ತರವಿದೆ. ಈ ಭಾಗವು ಹೆಚ್ಚಾಗಿ ಅರಣ್ಯ ಭರಿತವಾಗಿದೆ. ಈ ಜಿಲ್ಲೆಯ ಉತ್ತರ ಭಾಗದಲ್ಲಿ ಆಲೂರು ಗುಡ್ಡವಿದೆ. ಮತ್ತೊಂದು ಶ್ರೇಣಿ ಸುತ್ತಮುತ್ತ ಗುಡ್ಡ ಸಮೂಹಗಳಾಗಿ ಮಾರ್ಪಟ್ಟಿದೆ. ಈ ಭಾಗದ ಇನ್ನಿತರೆ ಗುಡ್ಡಗಳಲ್ಲಿ ಕುರುಗೋಡು ಮತ್ತು ದರೋಜಿ ಬಳಿಯ ಗುಡ್ಡಗಳು ಪ್ರಮುಖವಾದವುಗಳಾಗಿವೆ.

ಈ ಜಿಲ್ಲೆಗೆ ತುಂಗಭದ್ರ ನದಿ ವರದಿ ಪ್ರತಿರೂಪವಾಗಿದೆ. ಹಗರಿ ಅಥವಾ ವೇದಾವತಿ ಮತ್ತು ಚಿಕ್ಕಹಗರಿಗಳು ತುಂಗಭದ್ರ ನದಿಯ ಉಪನದಿಗಳಾಗಿವೆ. ಪಶ್ಚಿಮ ಮತ್ತು ಉತ್ತರ ದಂಡೆಗೆ ಗಡಿರೇಖೆಯಾಗಿ ಈ ನದಿಯು ಹರಿಯುತ್ತದೆ. ಇದು ಹರಪನಹಳ್ಳಿಯ ಕಡತಿ ಗ್ರಾಮದಿಂದ ಪ್ರವೇಶಿಸಿ ಹರಪನಹಳ್ಳಿ, ಹಡಗಲಿ, ಹೊಸಪೇಟೆ ಮತ್ತು ಸಿರುಗುಪ್ಪ ತಾಲ್ಲೂಕುಗಳ ಎತ್ತರದ ಎಲ್ಲೆಯಾಗಿ ೩೨೨ ಕಿ.ಮೀ. ದೂರ ಹರಿಯುತ್ತದೆ. ಮಲ್ಲಾಪುರ ಎಂಬ ಊರಿನಲ್ಲಿ ತುಂಗಭದ್ರ ಆಣೆಕಟ್ಟು ನಿರ್ಮಿತವಾಗಿದೆ. ಇದು ಮೊದಲು ಉಪ ತಾಲ್ಲೂಕು ಆಗಿತ್ತು. ದೇಶನೂರು ದ್ವೀಪವು ೯.೫ ಕಿ.ಮೀ. ಉದ್ದ ಇದ್ದು, ಇದು ನದಿಯ ಮಧ್ಯ ಭಾಗದಲ್ಲಿದೆ. ಹಗರಿ ಹೊಳೆಯ ತುಂಗಭದ್ರಾ ನದಿಯ ಉಪನದಿಯಾಗಿದೆ. ಚಿಕ್ಕಮಗಳೂರು ಜಿಲ್ಲೆ ಮುಳ್ಳನ ಗಿರಿಯಲ್ಲಿ ಹುಟ್ಟಿ ನಂತರ ಚಿತ್ರದುರ್ಗ ಜಿಲ್ಲೆ ಮತ್ತು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ, ಕೂಡ್ಲಿಗಿ, ಹಡಗಲಿ ತಾಲ್ಲೂಕುಗಳಲ್ಲಿ ಹರಿದು ತುಂಗಭದ್ರ ನದಿಯನ್ನು ಕೂಡುತ್ತದೆ. ಚಿನ್ನ ಹಗರಿಯು ಕೂಡ್ಲಿಗಿ ತಾಲೂಕಿನಿಂದ ಹರಿದು ಹಗರಿ ಸೇರುತ್ತದೆ. ಇದಲ್ಲದೆ ಸಣ್ಣ ಪುಟ್ಟ ತೊರೆಗಳಿಂದ ನೀರಾವರಿಗೆ ತುಂಬ ಉಪಯುಕ್ತವಾಗಿದೆ. ಇಲ್ಲಿರುವ ತೊರೆಗಳಲ್ಲಿ ಹಗ್ಗನೂರು ತಂಬ್ರಹಳ್ಳಿ ಹೊಳೆ, ಹಂಪಸಾಗರ ಹೊಳೆ, ಚೆಲ್ಲಹುಣಿಸೆ ಹೊಳೆ, ಗೌರಿಪುರ ಹೊಳೆ, ನಾರಿಹಳ್ಳಗಳಿವೆ. ಇದರೊಂದಿಗೆ ೨೨ ದೊಡ್ಡ ಕೆರೆಗಳು, ೧೭೦ ಸಣ್ಣ ಕೆರೆಗಳು ಈ ಜಿಲ್ಲೆಯಲ್ಲಿವೆ.

ಬಳ್ಳಾರಿ ಜಿಲ್ಲೆಯ ಉಷ್ಣತೆ ಅಧಿಕವಾಗಿದೆ. ಸಂಡೂರು ತಾಲ್ಲೂಕಿನ ಅರಣ್ಯ ಪ್ರದೇಶಗಳನ್ನು ಬಿಟ್ಟರೆ ಉಳಿದಂತೆ ಹೆಚ್ಚು ಮಳೆ ಬೀಳುವ ಸಂಭವ ಕಡಿಮೆ. ಏಕೆಂದರೆ ಇಲ್ಲಿ ಮರಗಿಡಗಳು ತುಂಬ ವಿರಳವಾಗಿವೆ. ಈ ಜಿಲ್ಲೆಯಲ್ಲಿರುವ ಅರಣ್ಯ ಪ್ರದೇಶವು ೧೬೧೮. ೨೪ ಕಿ.ಮೀ.ಗಳು. ಇಲ್ಲಿರುವ ಕುರುಚಲ ಕಾಡಿನಲ್ಲಿರುವ ಮರಗಳ ಎಲೆ ಉದುರುವ ಸ್ಥಿತಿ ಕಾಣುತ್ತದೆ. ಸಂಡೂರು ಬೆಟ್ಟ ಶ್ರೇಣಿಗಳಲ್ಲಿ ಶ್ರೀಗಂಧ ಮತ್ತು ಬೀಟೆ ಮರಗಳು ಅಧಿಕವಾಗಿವೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ಈಚಲು ಮರಗಳಿವೆ. ಈ ಅರಣ್ಯಗಳಲ್ಲಿ ಕಡವೆ, ಚಿರತೆಗಳಿವೆ, ಜಿಂಕೆ, ಕಾಡು ಹಂದಿ ಇಲ್ಲಿವೆ. ಸಂಡೂರು ಸುತ್ತಮುತ್ತಲಿನ ಬೆಟ್ಟಗಳಲ್ಲಿ ಹುಲಿಗಳಿದ್ದರೆ ಕೂಡ್ಲಿಗಿ ಮತ್ತು ದರೋಜಿಯ ಅಡವಿ ಪ್ರದೇಶಗಳಲ್ಲಿ ಕರಡಿ, ನವಿಲು, ತೋಳ, ಜಿಂಕೆ, ಈ ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಕಾಣಿಸುತ್ತವೆ. ಈ ಪ್ರದೇಶದ ಆಸು ಪಾಸಿನಲ್ಲಿ ಪಾರಿವಳ, ಗಿಡುಗ, ಹದ್ದು, ಚಿಟ್ಟೆ, ಬೆಳುವ, ಗುಬ್ಬಿ, ಕಾಗೆ, ಗಿಣಿ, ಕೆರೆಹಾವು, ಹೆಬ್ಬಾವು, ನಾಗರಹಾವು, ಬಳಿ ಹೊಡಕ ಇತ್ಯಾದಿ ಹಾವುಗಳು ಕಂಡುಬರುತ್ತವೆ.

**ಸರಿಹದ್ದು:** ಬಳ್ಳಾರಿ ಜಿಲ್ಲೆಯು ಕರ್ನಾಟಕ ರಾಜ್ಯದ ಪೂರ್ವಭಾಗದ ದಕ್ಷಿಣೋತ್ತರದವರೆಗೆ ಹಬ್ಬಿದೆ. ೧೪'-೧೩' ಮತ್ತು ೧೫'-೫೦' ಉತ್ತರ ಅಕ್ಷಾಂಶ ಹಾಗೂ ೭೫'-೪೦' ಮತ್ತು ೭೭'-೧೧' ಪೂರ್ವ ರೇಖಾಂಶ ಇವುಗಳ ಮಧ್ಯದಲ್ಲಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು ಜಿಲ್ಲೆ, ಪಶ್ಚಿಮದಲ್ಲಿ ಧಾರವಾಡ ಜಿಲ್ಲೆ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆ ಹಾಗೂ ಪೂರ್ವದಲ್ಲಿ ಆಂಧ್ರಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಸುತ್ತುವರೆದಿದೆ. ತುಂಗಭದ್ರಾ ನದಿಯ ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ಮೇರೆಯಾಗಿ ಹರಿಯುತ್ತದೆ.

**ಪ್ರಕೃತಿ ಲಕ್ಷಣಗಳು:** ತುಂಗಭದ್ರ ನದಿಯು ಜಿಲ್ಲೆಯ ನೈಸರ್ಗಿಕ ಮೇರೆಯಾಗಿದ್ದು, ಪಶ್ಚಿಮದಲ್ಲಿ ಧಾರವಾಡ ಜಿಲ್ಲೆಯನ್ನು ಹಾಗೂ ಉತ್ತರದಲ್ಲಿ ರಾಯಚೂರು ಜಿಲ್ಲೆಯಲ್ಲೂ ಪ್ರತ್ಯೇಕಿಸುತ್ತದೆ. ಪೂರ್ವದಲ್ಲಿ ಹಗರಿ ನದಿಯು ಹರಿಯುತ್ತದೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಸಾಮಾನ್ಯವಾಗಿ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿರುತ್ತದೆ. ಸಂಡೂರು ತಾಲೂಕಿನಲ್ಲಿ ಎತ್ತರವಾದ ಗುಡ್ಡಗಳಿದ್ದು ಅವುಗಳ ಎತ್ತರವು ಸಮುದ್ರದ ಮಟ್ಟಕ್ಕೆ ೩೪೦೦ ಅಡಿ ಎತ್ತರದಲ್ಲಿದೆ.

**ಭೂವಿಜ್ಞಾನ:** ಜಿಲ್ಲೆಯ ಕರ್ನಾಟಕ ಪ್ರಿಕೇಂಬ್ರಿಮ್ ಭೂಬಾಗವಾಗಿದ್ದು, ಕಲ್ಲು ಮತ್ತು ಬೆಂಚು ಕಲ್ಲುಗಳಿಂದ ಕೂಡಿದೆ. ಪ್ರಮುಖ ಖನಿಜಗಳಾದ ಮ್ಯಾಂಗನೀಸ್ ಮತ್ತು ಕಬ್ಬಿಣ ಅದಿರುಗಳು ಹೇರಳವಾಗಿ ದೊರೆಯುತ್ತವೆ. ಅತಿ ಹೆಚ್ಚು ಅದಿರು ದೊರೆಯುವ ಪ್ರದೇಶಗಳು ಸೇಕಡಾ ೭೩.೭೫ ಸಂಡೂರು ತಾಲೂಕಿನಲ್ಲಿದ್ದು, ಹೊಸಪೇಟೆ ದ್ವಿತೀಯ ಸ್ಥಾನದಲ್ಲಿದೆ.

**ಮಣ್ಣಿನ ನಮೂನೆ:** ಈ ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ನಮೂನೆಗಳಿವೆ. ಬಳ್ಳಾರಿ ತಾಲೂಕು ಒಂದರಲ್ಲೇ ಕಪ್ಪು ಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪು ಮಣ್ಣು ಮೂಲದಲ್ಲಿ ಫಲವತ್ತಾಗಿದ್ದು, ಹೆಚ್ಚಿನ ನೀರಿನ ಅಂಶವನ್ನು ಹಿಡಿದುಕೊಳ್ಳುವ ಗುಣವನ್ನು ಹೊಂದಿದೆ. ಈ ಕಪ್ಪುಮಣ್ಣು ಶೇಕಡ ೬೦ರಷ್ಟು ಜೇಡಿಮಣ್ಣಿನಿಂದ ಕೂಡಿರುತ್ತದೆ. ಹಡಗಲಿ, ಹೊಸಪೇಟೆ, ಕೂಡ್ಲಿಗಿ ಮತ್ತು ಸಂಡೂರು ತಾಲೂಕುಗಳಲ್ಲಿ ಉಸುಕು ಮಿಶ್ರಿತ ಕೆಂಪು ಮಣ್ಣು ಮತ್ತು ಜಿಗುಟು ಮಣ್ಣುಗಳು ದೊರೆಯುತ್ತವೆ. ತುಂಗಭದ್ರ ಜಲಾಶಯದಲ್ಲಿನ ಕಪ್ಪು ಮಣ್ಣಿನಲ್ಲಿ ೩ ರಿಂದ ೪ ಅಡಿಗಳವರೆಗೆ ಆಳವಾಗಿಯೂ ಮತ್ತು ಮಣ್ಣಿನ ರಚನೆಯಲ್ಲಿ ಭಾರವಾಗಿಯೂ ಹಾಗೂ ಶೇಕಡಾ ೪೫ ರಿಂದ ೫೫ ರಷ್ಟು ಜಿಗುಟು ಮಣ್ಣಿನಿಂದ ಕೂಡಿರುತ್ತದೆ. ಭೂಗರ್ಭದಲ್ಲಿ ನೀರು ೬.೫ ಮೀಟರ್‌ನಿಂದ ೩೫ ಮೀಟರ್‌ಗಳವರೆಗೆ ಇರುತ್ತದೆ.

**ನದಿಗಳು:** ಜಿಲ್ಲೆಯ ಮುಖ್ಯವಾದ ನದಿ ತುಂಗಭದ್ರಾ, ಇದರ ಉಪನದಿಗಳು ಹಗರಿ ಮತ್ತು ಚಿಕ್ಕಹಗರಿ, ತುಂಗಭದ್ರಾ ನದಿಯು ಜಿಲ್ಲೆಯ ಪಶ್ಚಿಮ ಮತ್ತು ಉತ್ತರ ದಿಕ್ಕಿನಲ್ಲಿ ಹರಿಯುತ್ತಿದ್ದು, ವರ್ಷದಲ್ಲಿ ಸದಾಕಾಲ ನೀರಿನಿಂದ ಕೂಡಿರುತ್ತದೆ. ಈ ನದಿಯು ಹೂವಿನ ಹಡಗಲಿ ತಾಲೂಕಿನ ಕುರುವತ್ತಿ ಗ್ರಾಮದಲ್ಲಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ಇದರ ನೀರು ಕುಡಿಯಲು ಬಹಳ ರುಚಿಕರವಾಗಿದ್ದು, ಗಂಗಸ್ಥಾನ

ತುಂಗಪಾನ ಎಂಬ ನಾಣ್ಣುಡಿಯನ್ನು ಸ್ಮರಣೆಗೆ ತಂದುಕೊಡುತ್ತದೆ. ಆದರೆ ಚಿಕ್ಕ ಹಗರಿ ಮತ್ತು ದೊಡ್ಡ ಹಗರಿ ನದಿಗಳಲ್ಲಿ ನೀರು ವರ್ಷದಲ್ಲಿ ಕೇವಲ ಕೆಲವು ಕಾಲ ಮಾತ್ರ ಇರುತ್ತದೆ. ನಾರಿಹಳ್ಳಿ ಜಲಾಶಯವು ಸಂಡೂರು ತಾಲೂಕಿನಲ್ಲಿದ್ದು, ತಾರಾನಗರ ಗ್ರಾಮದ ಹತ್ತಿರ ಹಳ್ಳಕ್ಕೆ ಒಡ್ಡುಹಾಕಿ ನೀರಾವರಿ ಸೌಲಭ್ಯ ಮಾಡಲಾಗಿದೆ. ಇದೇ ರೀತಿ ಹಗರಿಬೊಮ್ಮನಹಳ್ಳಿ ತಾಲೂಕಿನ ಮಾಲ್ವಿ ಎಂಬ ಗ್ರಾಮದ ಹತ್ತಿರ ಚಿಕ್ಕಹಗರಿ ನದಿಗೆ ಆಣೆಕಟ್ಟು ಕಟ್ಟಿ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿದೆ.

**ಹವಮಾನ:** ಜಿಲ್ಲೆಯ ಹವಮಾನವು ವರ್ಷದಲ್ಲಿ ಹೆಚ್ಚಿನ ಭಾಗ ಶುಷ್ಕವಾಗಿದ್ದು ವಾತಾವರಣ ತಂಪಾಗಿರುತ್ತದೆ. ಚಳಿಗಾಲದಲ್ಲಿ ಕನಿಷ್ಟ ಉಷ್ಣಾಂಶವು ೯.೧೦ ಸೆಲ್ಸಿಯಸ್ ಇದ್ದು ಗರಿಷ್ಠ ಉಷ್ಣಾಂಶವು ೩೫ರ ವರೆಗೆ ಇರುತ್ತದೆ. ಬೇಸಿಗೆ ಕಾಲವು ಮಾರ್ಚ್‌ನಿಂದ ಮೇ ವರೆಗೆ ಇದ್ದು ರಾಜ್ಯದಲ್ಲಿಯೇ ಹೆಚ್ಚು ಉಷ್ಣಾಂಶತೆಯಿಂದ ಕೂಡಿರುತ್ತದೆ. ಬೇಸಿಗೆಯಲ್ಲಿ ಕನಿಷ್ಠ ೧೫ ಸೆಲ್ಸಿಯಸ್‌ನಿಂದ ಗರಿಷ್ಠ ೪೪ ಸೆಲ್ಸಿಯಸ್ ವರೆಗೆ ಉಷ್ಣಾಂಶ ಇರುತ್ತದೆ.

**ವಿಸ್ತೀರ್ಣ ಮತ್ತು ಆಡಳಿತ ವಿಭಾಗಗಳು:** ಜಿಲ್ಲೆಯ ೮೪೨೦ ಚ.ಕಿ.ಮೀ. ವಿಸ್ತೀರ್ಣ ಹೊಂದಿದ್ದು, ರಾಜ್ಯದ ಒಟ್ಟು ಶೇಕಡ ೭ರಷ್ಟು ವಿಸ್ತೀರ್ಣವನ್ನು ಹೊಂದಿದ್ದು, ೧೧ನೇ ಸ್ಥಾನದಲ್ಲಿದೆ. ಜಿಲ್ಲೆಯು ವಿಸ್ತೀರ್ಣದಲ್ಲಿ ಬಳ್ಳಾರಿ ತಾಲೂಕು ಹೆಚ್ಚಿನ ವಿಸ್ತೀರ್ಣ ಅಂದರೆ ೧೬೮೬ ಚ.ಕಿ.ಮೀ. (ಶೇ.೩೦) ಹೊಂದಿದ್ದು, ಅತೀ ಕಡಿಮೆ ಎಂದರೆ ೯೩೪ ಚ.ಕಿ.ಮೀ. (ಶೇ.೧೧)ರ ವಿಸ್ತೀರ್ಣವನ್ನು ಹೊಸಪೇಟೆ ತಾಲೂಕು ಹೊಂದಿರುತ್ತದೆ. ಜಿಲ್ಲೆಯ ಬಳ್ಳಾರಿ, ಹೂವಿನಹಡಗಲಿ, ಹಗರಿಬೊಮ್ಮನಹಳ್ಳಿ, ಹೊಸಪೇಟೆ, ಕೂಡ್ಲಿಗಿ, ಸಂಡೂರು ಹಾಗೂ ಸಿರುಗುಪ್ಪ ತಾಲೂಕುಗಳನ್ನು ಹೊಂದಿರುತ್ತದೆ. ಜಿಲ್ಲೆಯ ಕೇಂದ್ರಸ್ಥಾನ ಬಳ್ಳಾರಿ. ಅದು ರಾಜ್ಯದ ರಾಜಧಾನಿಯಾದ ಬೆಂಗಳೂರಿನಿಂದ ೩೦೪ ಕಿ.ಮೀ. ದೂರದಲ್ಲಿದೆ.

ಎರಡು ನಗರ ಸಭೆಗಳು ಬಳ್ಳಾರಿ ಮತ್ತು ಹೊಸಪೇಟೆ ತಾಲೂಕುಗಳಲ್ಲೂ ಹಾಗೂ ಒಂದು ಪುರಸಭೆ, ಕಂಪ್ಲಿ ಸಿರುಗುಪ್ಪ ಹೊಸಪೇಟೆ ಕೂಡ್ಲಿಗಿ ಹೂವಿನ ಹಡಗಲಿ ಸಂಡೂರು ಮತ್ತು ಕೂಡ್ಲಿಗಿ ಒಟ್ಟು ೭ ಪಟ್ಟಣ ಪಂಚಾಯತಿಗಳು ಇರುತ್ತವೆ. ಒಟ್ಟು ೧೧೮ ನಿಯಂತ್ರಿತ ಮುಖ್ಯ ಮಾರುಕಟ್ಟೆಗಳಿವೆ. ಅವುಗಳಲ್ಲಿ ಬಳ್ಳಾರಿ ೪, ಸಿರುಗುಪ್ಪ ೨, ಹೊಸಪೇಟೆ ೩, ಕೂಡ್ಲಿಗಿ ೨, ಹಡಗಲಿ ೨, ಹಗರಿಬೊಮ್ಮನಹಳ್ಳಿ ೧ ಮತ್ತು ಸಂಡೂರು ೨. ಜಿಲ್ಲೆಯಲ್ಲಿ ೫೪೨ ಗ್ರಾಮಗಳಿದ್ದು, ಅವುಗಳಲ್ಲಿ ೫೧೭ ಜನವಸತಿ ಇರುವ (ಚರಾಕ್) ಗ್ರಾಮಗಳಿದ್ದು, ೨೫ ಗ್ರಾಮಗಳು ಜನವಸತಿ ಇದರ (ಬೇಚರಕ್) ಗ್ರಾಮಗಳಿವೆ.[3]

**ಟಿಪ್ಪಣಿಗಳು**

೧. ಸುಜಾತ ಅಕ್ಕಿ, ಬಳ್ಳಾರಿ ಜಿಲ್ಲೆಯ ರಂಗನಟಿಯರ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೯

೨. ಬಳ್ಳಾರಿ ಗೆಜೆಟಿಯರ್, ೧೯೩೨, ಪು.೩

೩. ಉದ್ರೃತ ನಾಗಯ್ಯ ಜೆ.ಎಂ., ೧೯೯೧, ಪು.೩

೪. ಎಂ.ಎಂ. ಕಲಬುರ್ಗಿ, ೧೯೫೪, ಪು.೫೨೪

೫. ಡಾ. ಕೆ. ರವೀಂದ್ರನಾಥ (ಸಂ), ಬಳ್ಳಾರಿ ಜಿಲ್ಲಾ ದರ್ಶನ, ೨೦೦೫, ಪ್ರಸಾರಾಂಗ ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ

೬. ಬಳ್ಳಾರಿ ಜಿಲ್ಲೆಯ ಬೇಡ ಸಮುದಾಯದ ಕ್ರೀಡೆಗಳು, ೨೦೦೪

# ಅಧ್ಯಾಯ ೩

# ಗಾಣಿಗರ ಮೂಲ ಇತಿಹಾಸ

೩.೧. ಪದನಿಷ್ಪತ್ತಿ ಮತ್ತು ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು

೩.೨. ಪೌರಾಣಿಕ ಹಿನ್ನೆಲೆ

೩.೩. ಶಾಸನಗಳ ಉಲ್ಲೇಖ

## ಹಿನ್ನೆಲೆ

ಭಾರತದ ಇತಿಹಾಸ ಬಿತ್ತಿಯಲ್ಲಿ ಹಲವು ಜನಾಂಗಗಳು ತಮ್ಮದೇ ಆದ ಪ್ರಭಾವ ಮುದ್ರೆ ಒತ್ತಿವೆ. ಈ ಮಣ್ಣಿನಲ್ಲಿಯೇ ಹುಟ್ಟಿ ಬೆಳೆದ ಮೂಲ ನಿವಾಸಿಗಳಿದ್ದಾರೆ. ಹೊರದೇಶದಿಂದ ಆಗಮಿಸಿ ದೇಶ ಸಂಸ್ಕೃತಿಯಲ್ಲಿ ಲೀನವಾಗಿದ್ದಾರೆ. ಆದುದರಿಂದ ಭಾರತದಂಥ ದೇಶದಲ್ಲಿ ಯಾವುದೇ ಜನಾಂಗದ ಅಧ್ಯಯನವೂ ಸಂಕೀರ್ಣ ಸ್ವರೂಪದ್ದಾಗಿರುತ್ತದೆ. ವೈಜ್ಞಾನಿಕವಾಗಿ ಅಮಿಬಾದಿಂದ ಮಾನವನಾಗಿ ರೂಪಗೊಂಡ ಕ್ರಿಯೆಯನ್ನು ಡಾರ್ವಿನ್ನನ ವಿಕಾಸವಾದ ಸ್ಪಷ್ಟಪಡಿಸುತ್ತದೆ. ಅದೇ ಮಾನವನ ಸಾಂಸ್ಕೃತಿಕ ಚರಿತ್ರೆಯಲ್ಲಿ ಜಾತಿಯ ಉಗಮವನ್ನು ತಿಳಿಸುವ ಖಚಿತ ಆಧಾರಗಳು ದೊರೆಯುವುದಿಲ್ಲ. ಆರ್ಯರ ಆಗಮನದಿಂದ ಮೂಲನಿವಾಸಿಗಳಿಗೂ ವಿದೇಶೀಯರಿಗೂ ಉಂಟಾದ ಜನಾಂಗಿಕ ವ್ಯತ್ಯಾಸವು ಜಾತಿ ಪದ್ಧತಿಗೆ ಬೀಜಾಂಕುರವಾಯಿತೆಂಬ ಅಂಶವನ್ನು ವಿದ್ವಾಂಸರು ಗುರುತಿಸಿದ್ದಾರೆ. ಈ ಅಂಶ ವೇದಗಳ ಕಾಲದಲ್ಲಿ ಮತ್ತಷ್ಟು ನಿಚ್ಚಳವಾಗಿ ಗೋಚರಿಸಿತು. ಋಗ್ವೇದದ ಕಾಲಕ್ಕೆ ಬ್ರಾಹ್ಮಣ ಮತ್ತು ಕ್ಷತ್ರಿಯ ಎಂಬ ಎರಡು ಶ್ರೇಣಿಗಳು ಕಂಡುಬಂದಿದ್ದು, ಪುರುಷ ಸೂಕ್ತದಲ್ಲಿ ವೈಶ್ಯ ಶೂದ್ರ ಎಂಬ ಇನ್ನೆರಡು ಶ್ರೇಣಿ ಸೇರ್ಪಡೆಯಾಯಿತೆಂಬುದು ವಿಧಿತ. ಸೃಷ್ಟಿಕರ್ತನ ಒಂದೊಂದು ಅಂಗದಿಂದ ಒಂದೊಂದು ವರ್ಣಗಳು ಜನಿಸಿದವೆಂಬ ತೈತ್ತಿರೀಯದ ಕಲ್ಪನೆ ಚಾತುರ್ವರ್ಣದಲ್ಲಿ ಅಸಮಾನತೆಯನ್ನು ಹುಟ್ಟಿ ಹಾಕಿತೆಂದು ತೋರುತ್ತದೆ. ಇದರಲ್ಲಿ ಸೃಷ್ಟಿಕರ್ತನ ಮುಖದಿಂದ ಬ್ರಾಹ್ಮಣ, ಭುಜದಿಂದ ಕ್ಷತ್ರಿಯ, ಹೊಟ್ಟೆಯಿಂದ ವೈಶ್ಯ, ಕಾಲಿನಿಂದ ಶೂದ್ರ ಜನಿಸಿದನೆಂಬ ವಿವರಣೆ ಇದೆ. ಕಾಲಿನಲ್ಲಿ ಹುಟ್ಟಿದ ಶೂದ್ರನಿಗೆ ಸಾಮಾಜಿಕವಾಗಿ ಕಡಿಮೆ ಸ್ಥಾನವೆಂಬುದು ತಿಳಿದಿದೆ.

ಕ್ರಿ.ಪೂ. ೩೦೦ ಚಂದ್ರಗುಪ್ತನ ಆಸ್ಥಾನಕ್ಕೆ ರಾಯಭಾರಿಯಾಗಿ ಬಂದಿದ್ದ ಮೆಗಾಸ್ತನೀಸ್ ಭಾರತದಲ್ಲಿ ಏಳು ಜಾತಿಗಳಿವೆಯೆಂಬುದನ್ನು ಹೇಳಿ ಈ ಜಾತಿಗಳಲ್ಲಿ ಪರಸ್ಪರ ಸಹಭೋಜನ ಕೊಡುಕೊಳ್ಳುವಿಕೆಗಳು ನಿಷಿದ್ಧವೆಂಬ ಸಂಗತಿಯನ್ನು ದಾಖಲಿಸಿದ್ದಾನೆ. ಪ್ರಾಚೀನ ಸಮಾಜದಲ್ಲಿ ಕುಲ ಹದಿನೆಂಟು ಜಾತಿ ಎನ್ನುವ ಒಂದು ವಿಂಗಡಣೆ ಕಂಡುಬರುತ್ತದೆ. ಇಲ್ಲಿಯೂ ಶೂದ್ರನದು ಕಡೆಯ ಸ್ಥಾನ. ಶೂದ್ರ ಶಬ್ದವನ್ನು 'ಶ್ರದ್ಧಾವನ್ ಶೂದ್ರಃ' ಎಂದು ಅರ್ಥೈಸಲಾಗುವುದು. ಮೇಲಿನ ಮೂರು ವರ್ಗದವರು ನಿಯಮಿಸಿದ ಕೆಲಸಗಳನ್ನು ಶೂದ್ರವರ್ಗದವರು ನೆರವೇರಿಸುತ್ತಿದ್ದರು.

ಶೂದ್ರ ವರ್ಗದಲ್ಲಿ ಗಾಣಿಗ, ಒಕ್ಕಲಿಗ, ಕುಂಬಾರ, ಬಣಜಿಗ, ಕ್ಷೌರಿಕ, ಅಕ್ಕಸಾಲಿಗ, ಬಡಗಿ, ಚಮ್ಮಾರ ಮೊದಲಾದ ವೃತ್ತಿನಿರತರನ್ನು ಅಳವಡಿಸಲಾಗಿತ್ತು. ಕಾಲ ಸರಿದಂತೆ ಮುಂದೆ ಒಂದೊಂದು ವೃತ್ತಿಯಲ್ಲಿ ನಿರತರಾದವರೆ ಒಂದೊಂದು ಪ್ರತ್ಯೇಕ ಗುಂಪಾಯಿತು. ಒಂದೊಂದು ವೃತ್ತಿಯವರು ಮನೆಯಲ್ಲಿಯೇ

ಅವರದೇ ಸಮುದಾಯದಲ್ಲಿ ಮದುವೆಯಾಗತೊಡಗಿದರು. ಜೀವನೋಪಾಯಕ್ಕಾಗಿ ಗಂಡು ಹೆಣ್ಣುಗಳಿಬ್ಬರೂ ದುಡಿಯಬೇಕಾದ್ದುದರಿಂದ ಒಕ್ಕಲಿಗ ಹುಡುಗನೊಬ್ಬ ಒಕ್ಕಲಿಗರ ಹುಡುಗಿಯನ್ನು, ಕುಂಬಾರ ಹುಡುಗನೊಬ್ಬ ಕುಂಬಾರ ಹುಡುಗಿಯನ್ನು, ಗಾಣಿಗ ಹುಡುಗನೊಬ್ಬ ಗಾಣಿಗ ಮನೆಯ ಹುಡುಗಿಯನ್ನು ವಿವಾಹವಾಗುವುದು ಸಾಮಾಜಿಕವಾಗಿ ಆರ್ಥಿಕವಾಗಿ ಕೂಡ ಲಾಭದಾಯಕವಾಗುವಂತಿತ್ತು. ಏಕೆಂದರೆ ಸಮಾನ ವೃತ್ತಿಯವರ ಮನೆಯಿಂದ ಸೊಸೆಯಾಗಿ ಬಂದ ಹುಡುಗಿಗೆ ತನ್ನ ವೃತ್ತಿಯನ್ನು ಕಲಿಸಿಕೊಡಬೇಕಾಗಿರಲಿಲ್ಲ. ಕಲಿವಿಕೆಯಲ್ಲಿ ವ್ಯಯವಾಗುತ್ತಿದ್ದ ಸಮಯ ಶ್ರಮ ಶಕ್ತಿ ಚೈತನ್ಯವನ್ನೆಲ್ಲ ಸ್ವಂತ ವೃತ್ತಿಯ ಅಭಿವೃದ್ಧಿಯಲ್ಲಿ ಬಳಸಲು ಅನುಕೂಲವಾಯಿತು. ಇದು ಜಾತಿಯಾಗಿ ವೃತ್ತಿ ಮಾರ್ಪಾಡಲು ಭೂಮಿಕೆಯಾಯಿತೆನ್ನಬಹುದು.

ಪ್ರಸ್ತುತ ಸಂಶೋಧನೆಯು ಬಳ್ಳಾರಿ ಜಿಲ್ಲಾ ಲಿಂಗಾಯತ ಗಾಣಿಗರು ಕುರಿತದ್ದಾಗಿದೆ. ಗಾಣಿಗ ಸಮುದಾಯದವರು ಬಳ್ಳಾರಿ ಜಿಲ್ಲೆಯಲ್ಲಿನ ಅನೇಕ ತಾಲೂಕುಗಳಲ್ಲಿ ನೆಲೆನಿಂತಿದ್ದಾರೆ. ಆ ಸ್ಥಳಗಳೆಂದರೆ ಸಿರುಗುಪ್ಪ, ಹೊಸಪೇಟೆ, ಸಂಡೂರು, ಕೂಡ್ಲಿಗಿ, ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ ಹೀಗೆ ಬೇರೆ ಬೇರೆ ಸ್ಥಳಗಳಲ್ಲಿ ಬದುಕನ್ನು ಕಂಡುಕೊಂಡಿದ್ದಾರೆ. ಪ್ರಕೃತಿಯಲ್ಲಿ ಕಂಡುಬರುವ ಜೀವ ವೈವಿಧ್ಯವನ್ನು ಕುರಿತಂತೆ ವಿಜ್ಞಾನಿಗಳು "ಕಾಲದಿಂದ ಕಾಲಕ್ಕೆ ಸ್ಥಳದಿಂದ ಸ್ಥಳಕ್ಕೆ ಬೇರೆ ಬೇರೆ ಪರಿಸರಕ್ಕೆ ಹೊಂದಿಕೊಳ್ಳಲು ಬಾಳಿಬೆಳೆಯಲು ಒಂದೇ ಮೂಲದ ಜೀವಿಗಳು ಭಿನ್ನ ಭಿನ್ನ ಬಗೆಯಲ್ಲಿ ದೈಹಿಕವಾಗಿ ಮಾರ್ಪಾಡಾಗುತ್ತವೆ. ಹಾಗೆ ಪ್ರತಿ ಜೀವಿವಂಶವೂ ನಿಧಾನವಾಗಿ ಸಾವಿರಾರು ವರ್ಷಗಳ ಅವಧಿಯಲ್ಲಿ ಹಲವು ಕವಲುಗಳಾಗಿ ಅಗಾಥ ವೈವಿಧ್ಯಕ್ಕೆ ದಾರಿ ಮಾಡುತ್ತವೆ"[೨] ಎಂದಿದ್ದಾರೆ. ಒಂದೇ ಜನಾಂಗದಲ್ಲಿ ಕಂಡುಬರುವ ಸಾಂಸ್ಕೃತಿಕ ವ್ಯತ್ಯಾಸಗಳಿಗೂ ಇದೇ ತತ್ವವನ್ನು ಅಳವಡಿಸಬಹುದು. ಹಾಗೆ ಉತ್ತರ ಕರ್ನಾಟಕದ ಗಾಣಿಗರೂ ಇತರ ಗಾಣಿಗರಿಗಿಂತ ಭಿನ್ನ ಹಾಗೂ ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದಾರೆ. ಇಂದಿಗೂ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ.

**ಗಾಣಿಗರ ಮೂಲ ಇತಿಹಾಸ**

ಗಾಣಿಗರ ಪ್ರಾಚೀನತೆ ಕುರಿತು ಬೇರೆ ಬೇರೆ ವಿದ್ವಾಂಸರು ತಮ್ಮದೇ ವ್ಯಾಖ್ಯಾನವನ್ನು ನೀಡಿರುತ್ತಾರೆ. ಅವರುಗಳಲ್ಲಿ 'ಮಾರ್ಟಿನ್' ಎನ್ನುವ ವಿದ್ವಾಂಸರ ಪ್ರಕಾರ.

ಶಿವನಿಂದ ದೊರೆತ ಒನಕೆ ಒರಳುಗಳನ್ನು ಶಿವ ಪಾರ್ವತಿಯರ ಪ್ರತ್ಯಕ್ಷ ರೂಪ ಎಂದು ನಂಬಿದ ಗಾಣಿಗರು ಅವುಗಳನ್ನು ಪೂಜಿಸಿ ತನ್ನ ವೃತ್ತಿಯನ್ನು ಮುಂದುವರಿಸಿದರು. ಈ ವಂಶದವರು ಕಾಲಾನುಕ್ರಮದಲ್ಲಿ ತಮ್ಮ ಕುಟುಂಬದ ಮದುವೆ ಮುಂತಾದ ಮಂಗಲಕಾರ್ಯಗಳ ಕಾಲಕ್ಕೂ ಒನಕೆ ಒರಳುಗಳನ್ನು ಪೂಜಿಸುವ ಪರಂಪರೆ ಬೆಳೆದು ಬಂದಿರಬಹುದೆಂದು ವಿದ್ವಾಂಸರ ಅಭಿಮತವಾಗಿದೆ".

**ರಸೆಲ್:** ದಕ್ಷಿಣ ದಿಕ್ಕಿನಲ್ಲಿದ್ದ ವ್ಯಕ್ತಿ ಮೃತ್ಯ ದೇವತೆ ಯಮನ ಸಂಕೇತವಾಗಿರಬಹುದೆಂದೂ. ಹಿಮಾಲಯ ಕೈಲಾಸದಿಂದ ದಕ್ಷಿಣ ದಿಕ್ಕು ಇಡೀ ಭಾರತಕ್ಕೆ ಸಂಕೇತವಾಗಿದ್ದು ಗಾಣಿಗರು ಅಖಂಡ ಭಾರತದಲ್ಲಿ ಪಸರಿಸಿದರೆಂದು 'ರಸೆಲ್' ಹೇಳಿರುತ್ತಾರೆ.

'ಚಾರ್ಟರ್ ಆಫ ಬಿಲೀಫ್' ಎಂಬುವರು 'ವಿಶ್ವಾಸ' ಎನ್ನುವ ಅಭಿಪ್ರಾಯ ಹಿನ್ನೆಲೆಯಲ್ಲಿ ಗಾಣಿಗ ವೃಂದದ ಹುಟ್ಟನ್ನು ಕುರಿತು ವಿವೇಚಿಸಿದಾಗ ಒಂದು ಮಾತು ಸ್ಪಷ್ಟ: ಗಾಣಿಗರು ಅನಾದಿಕಾಲದಿಂದ ಬಂದ ಒಂದು ಪ್ರಮುಖ ವೃಂದವಾಗಿದ್ದು, ಭಾರತದ ಎಲ್ಲಾ ಪ್ರದೇಶಗಳಲ್ಲೂ ಇವರು ಪಸರಿಸಿ ನೆಲೆಸಿದರು'.[೬]

೧೯೦೯ ಥರ್‌ಸ್ಟನ್ ಪ್ರಕಾರ ಇವರ ಹೆಸರು ತೆಲುಗಿನ 'ಗಾನುಗ' ಎಂಬ ಶಬ್ದದಿಂದ ಹುಟ್ಟಿದೆ.

ನಂಜುಂಡಯ್ಯ ಮತ್ತು ಐಯ್ಯರ್ (೧೯೩೦) ಇವರ ಮೂಲದಲ್ಲಿ, ಈಶ್ವರನು ಜಗತ್ತಿನ ಕತ್ತಲನ್ನು ತೆಗೆದು ಹಾಕುವ ಅವಶ್ಯಕತೆ ಕಂಡವನು. ನಿರಂತರವಾದ ಬೆಳಕನ್ನು ಕಾಪಾಡಲು, ತನ್ನ ಬೆವರಿನಿಂದ ಒಬ್ಬ ಮನುಷ್ಯನನ್ನು ಸೃಷ್ಟಿಸಿ, ಅವನಿಗೆ ಎಣ್ಣೆ ತೆಗೆಯುವ ಉದ್ಯೋಗಕ್ಕೆ ನಿಯಮಿಸಿದನು ಎಂದು ದಂತಕಥೆಯನ್ನು ದಾಖಲಿಸಿದ್ದಾರೆ. ಆ ಮನುಷ್ಯನನ್ನು ಈ ಸಮುದಾಯದ ಮೂಲ ಜನಕ ಎಂದು ಹೇಳುತ್ತಾರೆ.[೭]

ನಿರ್ದಿಷ್ಟವಾಗಿ ಹೇಳಲಾಗದ ಅಜ್ಞಾತ ಕಾಲದಲ್ಲಿ ಸಾವಿರಾರು ವರ್ಷಪೂರ್ವದಲ್ಲಿಯೇ ಗಾಣಿಗರು ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಬಂದರು ಎಂದು ಕೆಲವರ ತಿಳುವಳಿಕೆ.

**ಗಾಣಿಗರ ಮೂಲ**

ಯಾವುದೇ ಜನಾಂಗವು ತಮ್ಮ ಮೂಲದ ಬಗ್ಗೆ ಹೇಳುವಾಗ ತಮ್ಮ ಮೂಲವು ಬ್ರಹ್ಮ, ವಿಷ್ಣು, ಶಿವ ಮತ್ತು ಶ್ರೇಷ್ಠ ಮಹಾಮುನಿಗಳಿಂದ ಅಥವಾ ಪ್ರಸಿದ್ಧ ರಾಜ ಮಹಾರಾಜರ ಮುಂತಾದ ಉನ್ನತ ಕುಲೋತ್ಪನ್ನರಿಂದ ಆಗಿದೆಯೆಂದು, ತಮ್ಮದೇ ಆದ ಪೌರಾಣಿಕ ಕಥೆಯನ್ನು ಅಭಿಮಾನ ಗೌರವದಿಂದ ಹೇಳುವುದು ಕಂಡುಬರುತ್ತದೆ.

ಈ ದೃಷ್ಟಿಯಿಂದ ನಾವು ಒಂದು ಸಮುದಾಯದ ಕುಲಗೋತ್ರ ಮುಂತಾದವುಗಳನ್ನು ತಿಳಿಯ ಬಯಸುವಾಗ, ಅದರಲ್ಲಿ ಪ್ರಚಲಿತವಿರುವ ಪುರಾಣ, ದಂತಕಥೆಗಳಿಗೆ ಮೊರೆ ಹೋಗಬೇಕಾಗುತ್ತದೆ. ಏಕೆಂದರೆ ಇವುಗಳ ಆಧಾರದಿಂದ ನಾವು ಅವರಲ್ಲಿ ಪ್ರಚಲಿತವಿರುವ ಕೆಲವು ವಾಸ್ತವಿಕಾಂಶಗಳನ್ನು ಕೂಡಾ ಗುರುತಿಸಬಹುದಾಗಿದೆ. ಗಾಣಿಗರ ಮೂಲವನ್ನು ಕುರಿತು ಅಧ್ಯಯನ ಮಾಡಿದಾಗ ಗಾಣಿಗರು "ಆ ಜನಾಂಗದ ಮೂಲ ಪುರುಷನೊಬ್ಬನಿಗೆ ಸಂಬಂಧಪಟ್ಟ 'ಪುರಾಣ' (Myth) ದತ್ತ ನಮ್ಮ ಗಮನ ಸೆಳೆಯುತ್ತಾರೆ".

**ಗಾಣಿಗರ ತಮ್ಮ ಮೂಲವನ್ನು ಕುರಿತು ಹೇಳುವ ಕತೆ ಹೀಗಿದೆ**

**ಕತೆ ೧:** ಈ ಸಮುದಾಯದ ಮೂಲವನ್ನು ಕುರಿತು ಕೆಲವು ಪಾರಂಪರಿಕ ತಿಳುವಳಿಕೆಗಳೂ ಕುತೂಹಲಕಾರಿಯಾಗಿದೆ. ಶಿವನಿಲ್ಲದಾಗ ಪಾರ್ವತಿಗೆ ತನ್ನ ಅರಮನೆಯಲ್ಲಿ ಯಾರೂ ಕಾವಲು ಇಲ್ಲದ್ದಕ್ಕಾಗಿ ಭಯವಾಯಿತು. ತನ್ನ ಬೆವರಿನಿಂದ ಗಣೇಶನನ್ನು ಸೃಷ್ಟಿಸಿ ದಕ್ಷಿಣ ದ್ವಾರ ಕಾಯಲು ನಿಯಮಿಸಿದಳು. ಶಿವ ಮರಳಿ ಒಳಗೆ ಹೋಗ ಬಯಸಿದಾಗ ಅವನನ್ನರಿಯದ ಗಣೇಶ ಆತಂಕವೊಡ್ಡಿದ. ಶಿವ ಕೋಪದಿಂದ ಅವನ ಶಿರ ಕತ್ತರಿಸಿ ಒಳಗೆ ಹೋದ. ನೆತ್ತರು ಮೆತ್ತಿದ ಕತ್ತಿ ನೋಡಿದ ಪಾರ್ವತಿ ವಿಷಯ ತಿಳಿದು ಕಂಗೆಟ್ಟು ಶಿವನನ್ನು ತೀವ್ರವಾಗಿ ಖಂಡಿಸಿ ತನ್ನ ಮಗನನ್ನು ಬದುಕಿಸಿಕೊಡಬೇಕೆಂದು ಕೇಳಿದಳು. ದುಃಖಿತನಾದ ಶಿವ

ಛೇದಿಸಿದ ಶಿರಸ್ಸು ಆಗಲೇ ಬೂದಿಯಾಗಿರುವುದರಿಂದ ದಕ್ಷಿಣ ದಿಕ್ಕಿಗೆ ಮುಖ ಮಾಡಿದ ಯಾವುದೇ ಜೀವಂತ ಪ್ರಾಣಿಯ ಶಿರ ದೊರೆತರೆ ಮಾತ್ರ ಅದನ್ನು ತಂದು ಜೋಡಿಸಿ ಸತ್ತವನನ್ನು ಜೀವಂತಗೊಳಿಸಬಹುದೆಂದು ಹೇಳಿದನು. ಅದೇ ಸಮಯಕ್ಕೆ ಅರಮನೆಯ ದಕ್ಷಿಣ ದಿಕ್ಕಿನ ಹೊರವಲಯದ ಒಬ್ಬ ವ್ಯಾಪಾರಿ ತನ್ನ ಆನೆಯೊಂದಿಗೆ ವಿರಮಿಸಿದ್ದ ಆ ಆನೆ ದಕ್ಷಿಣದತ್ತ ಮುಖ ಮಾಡಿ ಮಲಗಿತ್ತು. ಶಿವ ಆ ಕೂಡಲೇ ಅದರ ತಲೆ ಕತ್ತರಿಸಿ ತಂದು ಸತ್ತು ಬಿದ್ದ ಶರೀರಕ್ಕೆ ಜೋಡಿಸಿ ಗಣೇಶನನ್ನು ಸಜೀವಗೊಳಿಸಿದ. ತನ್ನ ಆನೆಯನ್ನು ಕಳೆದುಕೊಂಡ ವ್ಯಾಪಾರಿ ತನಗಾದ ಹಾನಿಗಾಗಿ ಇನ್ನೇನು ಗತಿ ಎಂದು ದುಃಖಿಸತೊಡಗಿದ. ಅವನನ್ನು ಸಂತಯಿಸಬಯಿಸಿದ ಶಿವ. ಅದುವರೆಗೂ ಯಾರಿಗೂ ಗೊತ್ತಿರದ ಒನಕೆ ಒರಳು ಸಲಕರಣೆಗಳನ್ನು ಸೃಷ್ಟಿಸಿ ಅದರಲ್ಲಿ ಎಣ್ಣೆಕಾಳು ಹಾಕಿ ರುಬ್ಬಿ, ಎಣ್ಣೆ ತೆಗೆಯುವ ವಿಧಾನವನ್ನು ತಿಳಿಸಿದ. ಅದರ ಮೂಲಕ ಮುಂದೆ ಜೀವಿಸುವ ಬಗೆಯನ್ನು ತೋರಿಸಿದ. ಅಂದಿನಿಂದ ಆ ವ್ಯಾಪಾರಿ ಮತ್ತು ಅವನ ವಂಶಜರು ಎಣ್ಣೆ ತೆಗೆದು ಮಾರುವ ಕಸಬು ಕೈಗೊಂಡರು. ಅವನೇ ಪ್ರಪಂಚದ ಮೊದಲನೆ ಗಾಣಿಗ.

**ಕತೆ ೨:** ರಾತ್ರಿ ಪ್ರಪಂಚವನ್ನೇ ಕವಿಯುತ್ತಿದ್ದ ಕತ್ತಲೆಯನ್ನು ಪರಿಹರಿಸುವುದು ಈ ಈಶ್ವರನಿಗೆ ಅತ್ಯಗತ್ಯ ಎಂದು ತೋರಿತು. ಅದಕ್ಕಾಗಿ ನಿರಂತರ ದೀಪ ಉರಿಸಿ ಬೆಳಕು ಮಾಡಬೇಕೆಂದು ಬಯಸಿದ ಶಿವ ತನ್ನ ಬೆವರಿನಿಂದ ಒಬ್ಬ ಮಾನವನನ್ನು ಸೃಷ್ಟಿಸಿ ಎಣ್ಣೆ ತೆಗೆದು ದೀಪ ಬೆಳಗಿಸುವ ವೃತ್ತಿಯಲ್ಲಿ ತೊಡಗಿಸಿದ. ಇವನೇ ಪ್ರಪಂಚದ ಪ್ರಥಮ ಗಾಣಿಗ.

**ಕತೆ ೩:** ಹಿಂದೊಮ್ಮೆ ಒಬ್ಬ ಗೃಹಸ್ಥನಿಗೆ ಮೂವರು ಮಕ್ಕಳು ಅವನು ಐವತ್ತೆರಡು ಮಹುವಾಮರಗಳ ಒಡೆಯ. ತನ್ನ ಕೊನೆಯ ಕಾಲದಲ್ಲಿ ಆತ ಮಕ್ಕಳನ್ನು ಕರೆದು ಮಹುವಾಮರಗಳನ್ನು ಹಂಚಿಕೊಳ್ಳುವಂತೆ ತಿಳಿಸಿದ. ಅದಕ್ಕೆ ಒಪ್ಪಿದ ಆ ಮೂವರು ತಮ್ಮ ತಮ್ಮಲ್ಲಿಯೇ ಚರ್ಚಿಸಿ, ಆ ಮರಗಳ ಉತ್ಪಾದಿತ ವಸ್ತುಗಳನ್ನು ಹಂಚಿಕೊಳ್ಳಬಯಸಿದರು. ಈ ನಿರ್ಣಯಕ್ಕೆ ಅನುಗುಣವಾಗಿ ಅವರಲ್ಲಿ ಒಬ್ಬ ಎಲೆಯನ್ನು ಮಾತ್ರ ಆಯ್ದುಕೊಂಡ. ಅವನು 'ಭರ್ಜುಂಜ'ನೆಂದು ಕರೆಯಲ್ಪಟ್ಟ. ಎರಡನೆಯವ ಹೂಗಳನ್ನು ಹಂಚಿಕೊಂಡು ಅವನನ್ನು 'ಕಲಾರ' ಎಂದು ಕರೆಯಲಾಯಿತು. ಮೂರನೆಯವ ಅವರ ಕಾಯಿ ಬೀಜಗಳನ್ನು ಆಯ್ದು ಅದನ್ನು ಅರೆದು ಎಣ್ಣೆ ಉತ್ಪಾದಿಸಿದ. ಅವನೇ 'ತೇಲಿ' ಅಥವಾ 'ಗಾಣಿಗ'[೫]

**ಕತೆ ೪:** ಕೃಷ್ಣಪ್ಪಯ್ಯನೆಂಬವನೊಬ್ಬ ಬಡ ಲಿಂಗವಂತನಿದ್ದನು. ಅವನು ರೇವಣ ಸಿದ್ದೇಶ್ವರನನ್ನು ಬಹು ಭಕ್ತಿಯಿಂದ ಆರಾಧಿಸಿ, ಆ ದೇವರ ಗುಡಿಯಲ್ಲಿ ಅಖಂಡ ನಂದಾದೀಪವಿಟ್ಟಿದ್ದನು. ಆ ದೀಪಕ್ಕೂ ತನ್ನ ಕುಟುಂಬ ಸಂರಕ್ಷಣೆಗೂ ಬೇಕಾಗುವಷ್ಟೇ ಎಣ್ಣೆಯನ್ನು ಅವನು ನಿತ್ಯದಲ್ಲಿ ತೆಗೆಯುವನು. ಶಿವನು ಅವನ ಭಕ್ತಿಯನ್ನು ಪರೀಕ್ಷಿಸುವುದಕ್ಕಾಗಿ ಅವನ ಗಾಣವನ್ನು ಮನೆಯೊಳಗಿನ ಯಾವತ್ತು ಒಡೆವೆಗಳನ್ನೂ ಇಲ್ಲದ ಹಾಗೆ ಮಾಡಿದನು. ಆಗ ಕಣ್ಣಪ್ಪಯ್ಯನು ದೇವರ ದೀಪಕ್ಕೆ ಎಣ್ಣೆ ಇಲ್ಲದ್ದರಿಂದ ತನ್ನ ತಲೆಯ ಮೇಲೆ ಬಹಳ ಉದ್ದವಾಗಿ ಬೆಳೆಸಿದ ಕೂದಲಿಗೆ ಉರಿ ಹಚ್ಚಿಕೊಂಡು ದೇವರ ಮುಂದೆ ನಿಂತನು. ಆಗ ಸಿದ್ಧೇಶ್ವರನು ಪ್ರಸನ್ನನಾಗಿ ಅವನಿಗೆ ಮುಕ್ತಿಕೊಟ್ಟು, ನಿನ್ನ ವಂಶದವರು ಗಾಣದ ಹೊರೆಯನ್ನೇ ಮಾಡಿ ಸುಖದಿಂದ ಬಾಳಲೆಂದು ವರಕೊಟ್ಟನು.[೬]

### ೩.೧.೧. ಗಾಣಿಗ ಪದನಿಷ್ಪತ್ತಿ

೧. 'ಗಾಣಿಗ' ಪದವು ಗಾಣ+ಇಗ ಎಂಬೆರಡು ಜೋಡಣೆಗಳಿಂದ ಕೂಡಿದೆ. 'ಗಾಣಿಗ' ಎಂಬ ನಾಮಪದಕ್ಕೆ 'ಇಗ' ಪ್ರತ್ಯಯ ಸೇರಿ 'ಗಾಣಿಗ' ಎಂದಾಗಿದೆ. ಒಂದೊಂದು ವೃತ್ತಿಯಲ್ಲಿ ತೊಡಗಿದವರನ್ನು ಒಂದೊಂದು ಹೆಸರಿನಿಂದ ಕರೆಯುವುದು ವಾಡಿಕೆ. ಉದಾ: ವಂಶ ಪಾರಂಪರಿಕವಾಗಿ ಕಬ್ಬಿಣದ ಕೆಲಸ ಮಾಡುವವನು 'ಕಮ್ಮಾರ', ಚಮ್ಮದ ಕೆಲಸವನ್ನು ಮಾಡುತ್ತಾ ಬಂದವನು ಚಮ್ಮಾರ, 'ಡಕ್ಕೆ' ಎಂಬ ವಾದ್ಯವನ್ನು ತಯಾರಿಸುವವನು 'ಡಕ್ಕಲಿಗ' ಎಂದಾಗಿರುವಂತೆ, ಗಾಣದಿಂದ ಎಣ್ಣೆ ತೆಗೆಯುವವನ್ನು 'ಗಾಣಿಗ'ನಾಗಿರುತ್ತಾನೆ. 'ಗಾಣಿಗರು' ತಾವು ಸೂರ್ಯವಂಶಸ್ಥರು ಎಂದು ಹೇಳಿಕೊಳ್ಳುತ್ತಾರೆ.[೬]

೨. ಗಾಣಿಗ ಎಂಬುದು 'ಗಾಣ' ಮತ್ತು 'ಇಗ' ಎಂಬೆರಡು ಶಬ್ದಗಳಿಂದ ರೂಪಿತವಾಗಿದೆ. ಕನ್ನಡ ಪದದ ಅರ್ಥ 'ಗಾಣ'ದ ಸ್ಥಳ ಎಂದಾಗುತ್ತದೆ. ಇದಕ್ಕೆ 'ಇಗ' ಎಂಬ ತದ್ಧಿತ ಪ್ರತ್ಯಯ ಸೇರಿ 'ಗಾಣಿಗ' ಎಂದಾಗಿದೆ. ಇವರನ್ನು ಗಾಣಿಗ, ಗಾಣಿಗರು, ತೈಲದವರು, ಎಣ್ಣಿ ತಾಯಾರು ಮಾಡುವವರು, ಎಂದು ಮುಂತಾದ ಹೆಸರುಗಳಿಂದ ಕರೆಯುವ ವಾಡಿಕೆ ಇದೆ. ತಮ್ಮ ವೃತ್ತಿಯಲ್ಲಿ ತಲ್ಲೀನರಾಗಿ ಎಣ್ಣೆ ತೆಗೆದು ಉಣ್ಣುವವರಿಗೆ ಎಣ್ಣೆ ಕೊಟ್ಟು, ಜ್ಯೋತಿಗೆ ಎಣ್ಣೆ ಹಾಕಿ ಕತ್ತಲು ಜಗತ್ತಿಗೆ ಬೆಳಕು ನೀಡಿದವರು ಇವರೇ ಗಾಣಿಗರು ಎಂಬರ್ಥದಲ್ಲಿ ಬಳಕೆಯಾಗಿದೆ.[೭]

### ೩.೧.೨. ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು

ಸರ್ವಜ್ಞನ ತ್ರಿಪದಿಗಳಲ್ಲಿ ಗಾಣಿಗರ ಬಗ್ಗೆ ಉಲ್ಲೇಖಗಳು ಇವೆ. ಅವುಗಳನ್ನು ಪೂರಕವಾಗಿ ಮಾಹಿತಿಯನ್ನು ಇಲ್ಲಿ ಕೊಡಲಾಗಿದೆ.

ಎಳ್ಳು, ಕುಸುಬಿ, ಶೇಂಗಾ ಮೊದಲಾದ ಧಾನ್ಯಗಳನ್ನು ಗಾಣಕ್ಕೆ ಹಾಕಿ, ಎಣ್ಣೆ ತೆಗೆಯುವ ಕಾಯಕದವರಿಗೆ ಗಾಣಿಗರು ಎಂದು ಕರೆಯಲಾಗಿದೆ. ಸಾಮಾನ್ಯವಾಗಿ ಎತ್ತಿನ ಗಾಣದಿಂದ ಎಣ್ಣೆ ತೆಗೆಯುವ ವಿಧಾನ ಇತ್ತು. ಗಾಣ ತಿರುಗಿಸಲು ಎತ್ತುಗಳನ್ನು ಬಳಸಿಕೊಳ್ಳುತ್ತಿದ್ದರು. ಇದನ್ನು 'ಗಾಣದ ಎತ್ತು' ಎಂದು ಶರಣರ ವಚನಗಳಲ್ಲಿ ಉಲ್ಲೇಖವಾಗಿದೆ. ಊರಿನ ರೈತರು ತಾವು ಬೆಳೆದ ಎಳ್ಳನ್ನು ಗಾಣಿಗನಿಗೆ ಕೊಟ್ಟು, ಅವನಿಂದ ಎಣ್ಣೆಯನ್ನು ಪಡೆದು ಮತ್ತೆ ಪ್ರತಿಯಾಗಿ ಎಳ್ಳನ್ನೇ ಹಣದ ರೂಪದಲ್ಲಿ ಕೊಡುತ್ತಿದ್ದರು. ಎತ್ತಿನಿಂದ ಗಾಣವಾಡಿಸಿ, ಎಣ್ಣೆ ಉತ್ಪಾದಿಸುವ ಕಸುಬಿನಲ್ಲಿ ಬಹಳ ನಿಪುಣರಾಗಿದ್ದ ಅಂಥವರನ್ನು ಕಂಡಿರುವ ಸರ್ವಜ್ಞ.

ಎಳ್ಳುಗಾಣಿಗ ಬಲ್ಲ, ಸುಳ್ಳು ಸಿಂಪಿಗ ಬಲ್ಲ
ಕಳ್ಳರನು ಬಲ್ಲ ತಳವಾರ ಬಣಜಿಗ
ಎಲ್ಲವನ್ನು ಬಲ್ಲ ಸರ್ವಜ್ಞ[೮]

ವ್ಯವಹಾರದಲ್ಲಿ ಬರುವ ಮೋಸ, ವಂಚನೆ, ನಯಗಾರಿಕೆ ಮೊದಲಾದ ಗುಣಗಳನ್ನು ಬಣಜಿಗನಾದವನಿಗೆ ತಿಳಿದಿರುತ್ತದೆ. ಇಡೀ ಗ್ರಾಮವನ್ನೇ ಕಾಯುವ ತಳವಾರನಿಗೆ ಕಳ್ಳನ ಸ್ವಭಾವಗಳು ಕರತಲಾಮಲಕವಾಗಿರುತ್ತವೆ.

ಇನ್ನು ಬಟ್ಟೆ ಹೊಲೆದು ಕೊಡುವ ಸಿಂಪಿಗನಂತೂ ಆಗ ಬಾ, ಹೋಗಿ ಬಾ ಎಂದು ಸುಳ್ಳು ಹೇಳಿ ಗಿರಾಕಿಗಳನ್ನು ಸತಾಯಿಸುವುದುಂಟು. ಅದೇ ರೀತಿ ಎಂಥ ಎಳ್ಳಿನಿಂದ ಉತ್ತಮವಾದ ಎಣ್ಣೆಯನ್ನು ಉತ್ಪಾದಿಸಬಹುದೆಂಬ ಚಮತ್ಕಾರದ ಸ್ವಭಾವ ಗಾಣಿಗನಿಗಷ್ಟೇ ಹೆಚ್ಚು ಗೊತ್ತಿರುತ್ತದೆಂಬ ವಿಷಯವನ್ನು ತಿಳಿಸುವ ಸಂದರ್ಭದಲ್ಲಿ ಸರ್ವಜ್ಞ ಇತರೇ ಉಪಮೇಯಗಳನ್ನು ನೀಡುತ್ತಾನೆ.

"ಗಾಣಿಗನ ಒಡನಾಟ ಕೋಣನಾ ಬೇಸಾಯ
ಕ್ಷೀಣಿಸುವ ಕುತ್ತ ಸಮರಕ್ಷಾಮಗಳಿಂದ
ಪ್ರಾಣವದು ಘಾಸಿ ಸರ್ವಜ್ಞ"[೧೦]

ಎಂದಿದ್ದಾನೆ. ಸರ್ವಜ್ಞನಿದ್ದ ಕಾಲ ಯುದ್ಧ, ಭಯಗಳಿಂದ ತುಂಬಿದುದಾಗಿತ್ತು. ಏಕೆಂದರೆ ಆತ ಗಾಣಿಗನ ಬಗೆಗೆ ಹೇಳುವಾಗ ಯುದ್ಧದ ವಿಷಯಕ್ಕೆ ಹೋಲಿಸಲೆತ್ನಿಸಿದ್ದಾನೆ. ಬರೀ ಯುದ್ಧಗಳೇ ನಡೆದರೆ, ಎಲ್ಲವೂ ಹಾನಿಯಾಗುತ್ತದೆಯಲ್ಲದೆ, ಪ್ರತಿಯೊಬ್ಬರಿಗೆ ರೋಗ ರುಜಿನಗಳು ಬರುವುದುಂಟು ಹಾಗೂ ಕೊನೆಗೆ ಪ್ರಾಣವೂ ಹಾರಿ ಹೋಗುವುದುಂಟು. ಯುದ್ದದಿಂದಾಗುವ ಲಾಭಗಳಿಗಿಂತ ಕೆಡಕುಗಳೇ ಹೆಚ್ಚಾಗುವಂತೆ ಹೊಲವನ್ನುಳುವ ಸಂದರ್ಭದಲ್ಲಿ ಕೋಣಕ್ಕೆ ನೇಗಿಲು ಹೋರಿಸಿದರೆ, ರಂಟೆ, ಕುಂಟೆ ಹೊಡೆಯಲು ಸಾಧ್ಯವಿಲ್ಲ. ಆ ರೀತಿ ಕೋಣನೊಡನೆ ಬೇಸಾಯ ಮಾಡುವುದು ಅಭಾಸಕಾರಿಯಾದಂತೆ ಗಾಣಿಗನಲ್ಲಿ ಒಡನಾಟದ ಕ್ರಿಯೆಯು ಎಂದಿಗೂ ಸರಿಯಲ್ಲವೆಂದು ತಿಳಿಸಿದ್ದಾನೆ.

ಅಂದು ಸರ್ವಜ್ಞನು ಗಾಣಿಗನೊಬ್ಬನಲ್ಲಿ ಎಣ್ಣೆ ಬೇಡಲು ಹೋಗಿರಲೂಬಹುದು. ಅವನು ಕೊಡುವುದಿಲ್ಲವೆಂದು ಕೋಪದಿಂದ ಬೈದು ಕಳುಹಿಸಿರಬಹುದು. ಇದಕ್ಕೆ ಪ್ರತಿಯಾಗಿ ಸರ್ವಜ್ಞ ಅವನ ಇಡೀ ಜನ್ಮವನ್ನೇ ಜಾಲಾಡಿದಂತೆ ಅವನ ಒಡನಾಟದಿಂದ ಏನೂ ಪ್ರಯೋಜನವಿಲ್ಲವೆಂದು ಹಿಂದಿನ ವಚನದಲ್ಲಿ ಉಲ್ಲೇಖಿಸಿದ್ದಾರೆ.

ಗಾಣಿಗನು ಈಶ್ವರನ ಕಾಣನೆಂಬುದು ಸಹಜ
ಏಣಾಂಕಧರನು ಧರೆಗಿಳಿಯಲವನಿಂದ
ಗಾಣವಾಡಿಸುವ ಸರ್ವಜ್ಞ[೧೧]

ಗಾಣಿಗನಾದವನು ಎಷ್ಟೊಂದು ಮೂಢನಾಗಿರಬಹುದು ಅಥವಾ ತನ್ನ ಕಾಯಕದಲ್ಲಿ ನಿರತನಾಗಿ ಇತರರ ವ್ಯಕ್ತಿತ್ವ, ರೀತಿ ನೀತಿಗಳನ್ನೇ ಮರೆಯುವ ಸ್ಥಿತಿ ಅವನಲ್ಲುಂಟಾಗಿರುವುದೆಂಬುದಕ್ಕೆ ಮೇಲಿನ ವಚನವೇ ಸಾಕ್ಷಿಯಾಗಿದೆ.

ತಲೆಯಲ್ಲಿ ಚಂದ್ರನನ್ನು ಧರಿಸಿದ ಶಿವನೇ ತನ್ನ ನದಿಯನ್ನೇರಿ ಧರೆಗಿಳಿದು ಗಾಣಿಗನ ಮುಂದೆ ನಿಂತಾಗಲೂ, ಆ ಬಡ ಗಾಣಿಗ ಏನುತಾನೆ ಮಾಡಿಯಾನು ಬಂದಿರುವಾತ ದೇವರೆಂಬ ನಂಬಿಕೆ ಬರುವುದಿಲ್ಲ. ಕಾರಣ ಗಾಣದಲ್ಲಿ ಸುತ್ತುವ ಆತನ ಎತ್ತು ಸತ್ತು ಹೋಗಿರಬಹುದು. ಇದರಿಂದ ತನ್ನ ಕಾಯಕ್ಕೆ

ಅಡ್ಡಿಯಾಯಿತಲ್ಲವೆಂಬ ಚಿಂತೆಯಲ್ಲಿ ಮುಳುಗಿರಬಹುದು. ಈ ಸಂದರ್ಭದಲ್ಲಿ ಪ್ರತ್ಯಕ್ಷನಾದ ಶಿವನನ್ನು ಹಾಗೂ ಅವನೊಂದಿಗಿರುವ ಗಟ್ಟಿ ಮುಟ್ಟಾದ ಎತ್ತನ್ನು ನೋಡಿ, ಬೆರಗಾಗಿ ಆ ವ್ಯಕ್ತಿಯಿಂದಲೇ ತನ್ನ ಗಾಣದಲ್ಲಿ ಎತ್ತನ್ನು ಹೂಡಿಸಿ, ಗಾಣ ಆಡಿಸಿಕೊಳ್ಳಬೇಕೆಂಬ ಆಲೋಚನೆ ಹೊಳೆದಿರಬೇಕು.

ಚಿತ್ತವಿಲ್ಲದ ಗುಡಿಯ ಸುತ್ತಿದೊಡೆ ಫಲವೇನು
ಎತ್ತು ಗಾಣವನು ಹೊತ್ತು ತಾ
ಸುತ್ತಿಬಂದಂತೆ ಸರ್ವಜ್ಞ[೧೨]

ಯಾವುದೇ ಕೆಲಸದಲ್ಲಿ ನಿರತನಾದರೆ ಅದರಲ್ಲಿ ಶ್ರದ್ಧೆ ಎಂಬುದು ಇರಲೇಬೇಕು. ಶ್ರದ್ಧೆ ಇಲ್ಲದಿರುವ ಕೆಲಸವೆಲ್ಲ 'ಹೊಳೆಯಲ್ಲಿ ಹುಣಿಸೇ ಹಣ್ಣು ತೊಳೆದಂತೆ ವ್ಯರ್ಥವಾಗುವಂತೆ' ಇದಕ್ಕೆ ಸರ್ವಜ್ಞನು 'ಎತ್ತು ಗಾಣವನು ತಾ ಹೊತ್ತು ಸುತ್ತಿದಂತೆ' ಎಂಬುದಾಗಿ ಹೇಳಿದ್ದಾನೆ. ಆ ಬಡಪಾಯಿ ಎತ್ತುಗಳಿಗಾದರೂ ಏನು ಗೊತ್ತಿರುತ್ತದೆ? ಇದು ಮಹತ್ವದ ಕೆಲಸವೆಂಬುದರಿವಿರುವುದಿಲ್ಲ. ಹೀಗೆ ಇಲ್ಲಿ ಗಾಣಿಗನನ್ನು ಟೀಕಿಸುತ್ತಾ ಆತನ ಎತ್ತುಗಳನ್ನು ಸಹ ಶ್ರದ್ಧೆ ಇಲ್ಲದ ಕೆಲಸಕ್ಕೆ ಹೋಲಿಸಿದ್ದಾನೆ.

ಜಾಣ ಜಾಣಗೆ ಲೇಸು, ಕೋಣ ಕೋಣಗೆ ಲೇಸು
ನಾಣ್ಯವದು ಲೇಸು ಲೋಕಕ್ಕೆ, ಊರಿಂಗೆ
ಗಾಣಿಗನು ಲೇಸು ಸರ್ವಜ್ಞ[೧೩]

ಈ ಮೇಲಿನ ತ್ರಿಪದಿಯನ್ನು ಗಮನಿಸಿದಾಗ ಅದು ಅವನ ಅವಶ್ಯಕತೆ ಎತ್ತಿ ತೋರಿಸುತ್ತದೆ. ಯಾವುದೇ ಸಮಾಜದಲ್ಲಿ ವ್ಯಕ್ತಿ ಬೇಕಾದವನಾಗಬೇಕಾದಲ್ಲಿ ಅವನ ಕಾಯಕ, ಪರಸ್ಪರ ನಂಬಿಕೆ, ನಿಷ್ಟೆ ಪ್ರಮುಖ ಪಾತ್ರವಹಿಸುತ್ತವೆ. ಅದಕ್ಕಾಗಿ ಊರಿನಲ್ಲಿ ಆತನು ಇದ್ದರೆ ಲೇಸು ಎಂದು ಅನಿಸಿಕೊಳ್ಳುತ್ತಾನೆ.

ಬತ್ತಿ ಎಣ್ಣೆಗಳೆರಡು ಹೊತ್ತಿ ಬೆಳಗುವ ತೆರದಿ
ಸತ್ಯ ನೀತಿಗಳು ಬೆಳಗಿಹವು ಜೋಡಗಲೆ
ಕತ್ತಲೇ ಜಗವು ಸರ್ವಜ್ಞ[೧೪]

ಈ ಮೇಲಿನ ಸಾಲುಗಳನ್ನು ಗಮನಿಸಿದಾಗ ಸತ್ಯ ನೀತಿಗಳು ಬತ್ತಿ ಎಣ್ಣೆಗಳಿದ್ದಂತೆ, ಅವೆರಡೂ ಇದ್ದರೆ ಮಾತ್ರ ಬೆಳಕು ಕಾಣುವುದು ಎರಡರಲ್ಲಿ ಒಂದು ಅಥವಾ ಎರಡು ಇಲ್ಲವಾದರೆ ಕತ್ತಲೆ ಆವರಿಸುವುದು ಅನುಭವ ವೇದ್ಯವಾದ ಸಂಗತಿಯೂ, ಹಾಗೆ ಸತ್ಯ ನೀತಿಗಳಲ್ಲಿ ಒಂದು ಅಥವಾ ಎರಡೂ ಇಲ್ಲವಾದರೆ ಜಗತ್ತೆ ಕತ್ತಲೆಯಲ್ಲಿ ಮುಳುಗುವುದು. ಅಂತಹ ಸತ್ಯ ನೀತಿಗಳ ಹಿನ್ನೆಲೆಯಿಟ್ಟುಕೊಂಡು ನಿಷ್ಕಾಮ ಸೇವೆಯಿಂದ ಗುರಿಮುಟ್ಟಬೇಕು.

ನೀನೆ ಗಾಣಿಗ
ಜಗವೇ ಗಾಣ

ಗ್ರಹಗಳೇ ಎತ್ತುಗಳು
ಕರ್ಮಗಳೇ ಕಾಳು
ಎಣ್ಣೆಯಾಗಿ ಸಣ್ಣಾಗುವುದೇ ಜೀವ
ಇನ್ನಾದರೂ ಈ ಗಾಣದಾಟದಿಂದ
ಬಿಡುಗಡೆ ಮಾಡಯ್ಯ ಚರಬಸವ[೧೫]

ಗಾಣಿಗರ ಧರ್ಮ ಶ್ರಮಧರ್ಮ. ಎಷ್ಟು ಕಷ್ಟದಲ್ಲಿದ್ದರೂ ಅವರು ರಟ್ಟೆ ಮುರಿದು ದುಡಿದೇ ತಮ್ಮ ರೊಟ್ಟಿಯನ್ನು ಸಂಪಾದಿಸಲು ಹವಣಿಸುವರೇ ಹೊರತು ತುಡುಗುತಣಕ್ಕೆ ಆಸೆ ಮಾಡಲಾರರು.

ಆನೆಗಂದಳವೇಕೆ ಸೋನಂಗೆ ಸೊಬಗೇಕೆ
ಗಾಣವಾಡುವಗೆ ಮಡಿಯೇಕೆ ಮರುಳಂಗೆ
ಆನಂದವೇಕೆ ಸರ್ವಜ್ಞ[೧೬]

ಪಲ್ಲಕ್ಕಿಯಲ್ಲಿ ದೇವರನ್ನಿಟ್ಟುಕೊಂಡು ಮೆರವಣಿಗೆ ಮಾಡುತ್ತಾರೆಯೇ ಹೊರತು, ಪಲ್ಲಕ್ಕಿಯನ್ನು ಹೊತ್ತ ಆನೆಯನ್ನಲ್ಲ. ಅದಕ್ಕಾಗಿ ಆನೆಗೆ ಪಲ್ಲಕ್ಕಿಯ ಅರಿವಿರುವುದಿಲ್ಲ. ಅದೇ ರೀತಿ 'ನಾಯಿ ಬಾಲ ಸದಾ ಡೊಂಕು' ಎಂಬಂತೆ ನಾಯಿಯನ್ನು ಬಹಳ ಪ್ರೀತಿಯಿಂದ ಎತ್ತಿಕೊಂಡು ಒಂದು ಸಿಂಹಾಸನದ ಮೇಲೆ ಕೂಡಿಸಿದರೂ ಅದು ಹೇಸಿಗೆ ಕಂಡ ತಕ್ಷಣ ಜಿಗಿಯುತ್ತದೆ. ಆದ್ದರಿಂದ ನಾಯಿಗೆ ಸೊಬಗುತನ ಬೇಡ, ಹಾಗೆಯೇ ಗಾಣಿಗನಾದವನಿಗೆ ತನ್ನದೇ ವೃತ್ತಿಯಲ್ಲಿ ನಿರತನಾಗಿರುವಾಗ ಹಗಲು ರಾತ್ರಿಗಳು ಗೊತ್ತಾಗುವುದಿಲ್ಲ ಹಾಗೂ ಗಾಣಿಗನಿಗೆ ಮಡಿ ಮೈಲಿಗೆಗಳ ಪರಿವೆಯೇ ಇರುವುದಿಲ್ಲ.

ಅಂದಿನ ಕಾಲದಲ್ಲಿದ್ದ ಗಾಣಿಗನಿಗೆ ಸಂಬಂಧಿಸಿದಂತೆ 'ಗಾಣಿಗನ ಮೇಲೆ ಸಿಟ್ಟಾಗಿ ಒಣಗಿದ ರೊಟ್ಟಿ ತಿಂದಂತೆ' ಎಂಬ ಗಾದೆ ನೆನಪಿಗೆ ಬರುತ್ತದೆ. ಅಂದರೆ ಸಮಯಕ್ಕೆ ಸರಿಯಾಗಿ ಅವನು ರೈತರಿಗೆ ಎಣ್ಣೆಯನ್ನು ಉತ್ಪಾದಿಸಿಕೊಡುತ್ತಿರಲಿಲ್ಲ ಎಂದೆನಿಸುತ್ತದೆ. ಎಣ್ಣೆ ಬರುವಾಗ ಗಾಣ ಮುರಿಯಿತು ಅಥವಾ ಎತ್ತಿಗೆ ಸುಸ್ತಾಯಿತು ಹೀಗೆ ಒಟ್ಟಾರೆ ತನ್ನ ಮಂದಗತಿಯ ಕೆಲಸದಿಂದ ಮತ್ತೊಬ್ಬರಿಗೆ ಆತ ಕೋಪ ತರಿಸಿರಲೂಬಹುದು.

ಕೆಲವೊಮ್ಮೆ ಎಳ್ಳುಕೊಟ್ಟವರು ಏನು ಮಾಡದೆ, ತಾಳ್ಮೆ ತಂದುಕೊಡುವ ಬಂದಿರುವ ಕೋಪವನ್ನು ಹತ್ತಿಟ್ಟುಕೊಳ್ಳದೆ ಬೇರೆ ಪ್ರಯೋಜನವಿರುತ್ತಿರಲಿಲ್ಲ. ಇಂತಹ ಸಂದರ್ಭದ ಫಲವತ್ತು ಗಾಣಿಗ 'ಗಾಳಿಬಿಟ್ಟಾಗ ತೂರಿಕೋ' ಎಂಬ ಗಾದೆಯಂತೆ ಅವಕಾಶ ಪಡೆದುಕೊಂಡಿರಬಹುದು. ಇಂತಹ ಗಾಣಿಗನನ್ನು ನೋಡಿರುವ ಸರ್ವಜ್ಞ ಬಹಳ ಕೋಪದಿಂದ;

### ೩.೨. ಪೌರಾಣಿಕ ಹಿನ್ನೆಲೆ

ಯಾವುದೇ ಒಂದು ಸಮುದಾಯವಿರಲಿ, ಅದು ತನ್ನದೇ ಆದ ಒಂದು ಪೌರಾಣಿಕ ಹಿನ್ನೆಲೆ ಕಟ್ಟಿಕೊಂಡಿರುತ್ತದೆ. ಅದರಲ್ಲೂ ತೀರಾ ಕೆಳಸ್ತರದಲ್ಲಿರುವ ಸಮುದಾಯಗಳಲ್ಲಿ ಇದರ ವಿಜೃಂಭಣೆ ಅತೀ

ಹೆಚ್ಚಾಗಿ ಕಂಡುಬರುತ್ತದೆ. ತಮ್ಮ ಸಮುದಾಯವು ದೇವತೆಗಳ ಸಮುದಾಯ, ತಾವು ದೇವರ ಮಕ್ಕಳು ಎನ್ನುವ ನಂಬುಗೆಯ ಆಧಾರದಲ್ಲಿಯೇ ಇಡೀ ಸಮುದಾಯ ಒಂದು ಅಲೌಕಿಕ ಶಿಸ್ತನ್ನು ಮೂಡಿಸಿಕೊಂಡಿರುತ್ತದೆ. ಅಂತಹ ದೈವಗಳನ್ನು ತಮ್ಮ ಕುಲದೈವವಾಗಿ ಆಯಾ ಸಮುದಾಯಗಳು ಆರಿಸಿಕೊಂಡಿರುತ್ತವೆ. ಬಹುಶಃ ಭಾರತದ ಅಷ್ಟು ಸಮುದಾಯ, ಬುಡಕಟ್ಟುಗಳಿಗೆ ಅವುಗಳದೇ ಆದ ದೈವಗಳು, ಅದರ ಕುರಿತ ನಂಬಿಕೆಗಳು ಇರುವುದನ್ನು ಕಾಣಬಹುದು. ಈ ರೀತಿಯಾದ ನಂಬಿಕೆಯ ಹಿನ್ನೆಲೆಯನ್ನು ಕಟ್ಟಿಕೊಂಡ ಸಮುದಾಯಗಳು ಅಷ್ಟೇ ವೈವಿಧ್ಯಪೂರ್ಣ ಸಾಂಸ್ಕೃತಿಕ ಸಂಪತ್ತನ್ನು ಹುಟ್ಟು ಹಾಕಿರುತ್ತದೆ. ಈ ದಿಸೆಯಲ್ಲಿ ಗಾಣಿಗ ಸಮುದಾಯವೂ ಹೊರತಾದುದಲ್ಲ.

"ಶಿವನಿಲ್ಲದಾಗ ಪಾರ್ವತಿಗೆ ತನ್ನ ಅರಮನೆಯಲ್ಲಿ ಯಾರೂ ಕಾವಲು ಇಲ್ಲದ್ದಕ್ಕಾಗಿ ಭಯವಾಯಿತು. ತನ್ನ ಬೆವರಿನಿಂದ ಗಣೇಶನನ್ನು ಸೃಷ್ಟಿಸಿ ದಕ್ಷಿಣ ದ್ವಾರಕಾಯಲು ನಿಯಮಿಸಿದಳು. ಶಿವ ಮರಳಿ ಒಳಗೆ ಹೋಗಬಯಸಿದಾಗ ಅವನನ್ನರಿಯದ ಗಣೇಶ ಅಡ್ಡಿಪಡಿಸಿದ. ಶಿವಕೋಪದಿಂದ ಅವನ ಶಿರಕತ್ತರಿಸಿ ಒಳಗೆ ಹೋದ. ನೆತ್ತರು ಮೆತ್ತಿದ ಕತ್ತಿ ನೋಡಿದ ಪಾರ್ವತಿ ವಿಷಯ ತಿಳಿದು ಕಂಗೆಟ್ಟು ಶಿವನನ್ನು ತೀವ್ರವಾಗಿ ಕಂಡಿಸಿ ತನ್ನ ಮಗನನ್ನು ಬದುಕಿಸಿಕೊಡಬೇಕೆಂದು ಕಾಡಿದಳು. ದುಃಖಿತನಾದ ಶಿವ ತಾನು ಛೇದಿಸಿದ ಶಿರಸ್ಸು ಆಗಲೇ ಬೂದಿಯಾಗಿರುವುದರಿಂದ ದಕ್ಷಿಣ ದಿಕ್ಕಿಗೆ ಮುಖ ಮಾಡಿದ ಯಾವುದೇ ಜೀವಂತ ಪ್ರಾಣಿಯ ಶಿರ ದೊರೆತರೆ ಮಾತ್ರ ಅದನ್ನು ತಂದು ಜೋಡಿಸಿ ಸತ್ತವನನ್ನು ಜೀವಂತಗೊಳಿಸಬಹುದು ಎಂದು ಹೇಳಿದನು. ಅದೇ ಸಮಯಕ್ಕೆ ಅರಮನೆಯ ದಕ್ಷಿಣ ದಿಕ್ಕಿನ ಹೊರವಲಯದಲ್ಲಿ ಒಬ್ಬ ವ್ಯಾಪಾರಿ ತನ್ನ ಆನೆಯೊಂದಿಗೆ ವಿರಮಿಸಿದ್ದ. ಆ ಆನೆ ದಕ್ಷಿಣ ದತ್ತ ಮುಖಮಾಡಿ ಮಲಗಿತ್ತು. ಶಿವ ಆ ಕೂಡಲೇ ಅದರ ತಲೆ ಕತ್ತರಿಸಿ ತಂದು ಸತ್ತು ಬಿದ್ದ ಶರೀರಕ್ಕೆ ಜೋಡಿಸಿ ಗಣೇಶನನ್ನು ಸಜೀವಗೊಳಿಸಿದ. ತನ್ನ ಆನೆಯನ್ನು ಕಳೆದುಕೊಂಡ ವ್ಯಾಪಾರಿ ತನಗಾದ ಹಾನಿಗಾಗಿ ಇನ್ನೇನು ಗತಿ ಎಂದು ದುಃಕಿಸತೊಡಗಿದ. ಅವನನ್ನು ಸಂತಯಿಸಬಯಿಸಿದ ಶಿವ. ಅದುವರೆಗೂ ಯಾರಿಗೂ ಗೊತ್ತಿರದ ಒನಕೆ ಒರಳು ಸಲಕರಣೆಗಳನ್ನು ಸೃಷ್ಟಿಸಿ ಅದರಲ್ಲಿ ಎಣ್ಣೆಕಾಳು ಹಾಕಿ ರುಬ್ಬಿ, ಎಣ್ಣೆ ತೆಗೆಯುವ ವಿಧಾನವನ್ನು ತಿಳಿಸಿ, ಅದರ ಮೂಲಕ ಮುಂದೆ ಜೀವಿಸುವ ಬಗೆಯನ್ನು ತೋರಿಸಿದ. ಅಂದಿನಿಂದ ಆ ವ್ಯಾಪಾರಿ ಮತ್ತು ಅವನ ವಂಶಜರು ಎಣ್ಣೆ ತೆಗೆದು ಮಾರುವ ಕಸಬು ಕೈಗೊಂಡರು"[೧೭] ಎನ್ನುವ ನಂಬುಗೆ ಗಾಣಿಗ ಸಮುದಾಯದಲ್ಲಿದೆ.

ರಾತ್ರಿ ಪ್ರಪಂಚವನ್ನೇ ಕವಿಯುತ್ತಿದ್ದ ಕತ್ತಲೆಯನ್ನು ಪರಿಹರಿಸುವುದು ಈಶ್ವರನಿಗೆ ಅತ್ಯಗತ್ಯ ಎಂದು ತೋರಿತು. ಅದಕ್ಕಾಗಿ ನಿರಂತರ ದೀಪ ಉರಿಸಿ ಬೆಳಕು ಮಾಡಬೇಕೆಂದು ಬಯಸಿದ ಶಿವ ತನ್ನ ಬೆವರಿನಿಂದ ಒಬ್ಬ ಮಾನವನನ್ನು ಸೃಷ್ಟಿಸಿ, ಎಣ್ಣೆ ತೆಗೆದು ದೀಪ ಬೆಳಗಿಸುವ ವೃತ್ತಿಯಲ್ಲಿ ತೊಡಗಿಸಿದ ಇವನೇ ಪ್ರಪಂಚದ ಪ್ರಥಮ ಗಾಣಿಗ ಎಂದು ಈ ಸಮುದಾಯದ ಪೌರಾಣಿಕ ಹಿನ್ನೆಲೆಯಲ್ಲಿ ತಿಳಿದು ಬಂದಿದೆ.

ತನಗೆ ಶಿವನಿಂದ ದೊರೆತ ಒನಕೆ ಒರಳುಗಳನ್ನು ಶಿವ ಪಾರ್ವತಿಯರ ಪ್ರತ್ಯಕ್ಷರೂಪ ಎಂದು ನಂಬಿದ ಗಾಣಿಗ ಅವುಗಳನ್ನು ಪೂಜಿಸಿ ತನ್ನ ವೃತ್ತಿಯನ್ನು ಮುಂದುವರಿಸಿದ. ಈ ವಂಶದವರು ಕಾಲಾನುಕ್ರಮದಲ್ಲಿ

ತಮ್ಮ ಕುಟುಂಬದ ಮದುವೆ ಮುಂತಾದ ಮಂಗಲಕಾರ್ಯಗಳ ಕಾಲಕ್ಕೂ ಒನಕೆ ಒರಳುಗಳನ್ನು ಅಲಂಕರಿಸಿ ಶಿವ ಪಾರ್ವತಿಯರ ಪ್ರತಿರೂಪವೆಂದೇ ಭಾವಿಸಿ ಪೂಜಿಸುವ ಪರಂಪರೆ ಬೆಳೆದು ಬಂದಿರಬಹುದೆಂದು ಮಾರ್ಟಿನ್ ಎನ್ನುವ ವಿದ್ವಾಂಸರ ಅಭಿಮತ."[೧೮]

"ಮಧ್ಯಪ್ರಾಂತ್ಯದ ಮಿರ್ಜಾಪುರ ಭಾಗದಲ್ಲಿ ಪ್ರಚಲಿತವಿರುವ ಒಂದು ಐತಿಹ್ಯ ಕಥೆಯ ಪ್ರಕಾರ ಹಿಂದೊಮ್ಮೆ ಒಬ್ಬ ಗೃಹಸ್ಥನಿಗೆ ಮೂವರು ಮಕ್ಕಳು ಅವನು ಐವತ್ತೆರಡು ಮಹುವಾ ಮರಗಳ ಒಡೆಯ. ತನ್ನ ಕೊನೆಗಾಲದಲ್ಲಿ ಆತ ಮಕ್ಕಳನ್ನು ಕರೆದು ಮಹುವಾ ಮರಗಳನ್ನು ಹಂಚಿಕೊಳ್ಳುವಂತೆ ತಿಳಿಸಿದ. ಅದಕ್ಕೆ ಒಪ್ಪದ ಆ ಮೂವರೂ ತಮ್ಮ ತಮ್ಮಲ್ಲಿಯೇ ಚರ್ಚಿಸಿ, ಆ ಮರಗಳ ಉತ್ಪಾದಿತ ವಸ್ತುಗಳನ್ನು ಹಂಚಿಕೊಳ್ಳ ಬಯಸಿದರು. ಈ ನಿರ್ಣಯಕ್ಕೆ ಅನುಗುಣವಾಗಿ ಅವರಲ್ಲಿ ಒಬ್ಬ ಎಲೆಯನ್ನು ಮಾತ್ರ ಆಯ್ದುಕೊಂಡ. ಅವನು 'ಭರ್ಭುಂಜ'ನೆಂದು ಕರೆಯಲ್ಪಟ್ಟ. ಎರಡನೆಯವ ಹೂಗಳನ್ನು ಹಂಚಿಕೊಂಡ. ಅವನನ್ನು 'ಕಲಾರ' ಎಂದು ಕರೆಯಲಾಯಿತು. ಮೂರನೆಯವ ಅವರೆ ಕಾಯಿ ಬೀಜಗಳನ್ನು ಆಯ್ದು ಅದನ್ನು ಅರೆದು ಎಣ್ಣೆ ಉತ್ಪಾದಿಸಿದ. ಅವನೇ 'ತೇಲಿ' ಅಥವಾ 'ಗಾಣಿಗ'."[೧೯]

## ೩.೩. ಶಾಸನಗಳಲ್ಲಿ ಗಾಣಿಗರು

"ಒಂದು ನಾಡಿನ ಅಥವಾ ಜನಾಂಗದ ಇತಿಹಾಸವನ್ನು ರೂಪಿಸುವಲ್ಲಿ ಶಾಸನಗಳು ಬಹುಮುಖ್ಯ ಆಕರಗಳಾಗಿವೆ. ಗಾಣಿಗರಿಗೆ ಸಂಬಂಧಿಸಿದ ಶಾಸನಗಳು ಕರ್ನಾಟಕದ ಉದ್ದಗಲಕ್ಕೂ ಹರಡಿವೆ. ಇವು ಅಂದಿನ ಗಾಣಿಗರ ಬದುಕಿನ ಬಗೆಗೆ, ಅವರ ವ್ಯಕ್ತಿತ್ವದ ಬಗೆಗೆ ಅಪೂರ್ವ ಮಾಹಿತಿ ನೀಡುತ್ತವೆ. ಈ ಹಿನ್ನೆಲೆಯಲ್ಲಿ ಬಳ್ಳಾರಿ ಜಿಲ್ಲಾ ಗಾಣಿಗರು ನೆಲೆಸಿರುವ ತಾಣಗಳಲ್ಲಿ ದೊರೆಯುವ ಗಾಣಿಗರ ಶಾಸನಗಳಲ್ಲಿ ಅವಲೋಕಿಸಿದಾಗ ಈ ಜನಾಂಗದವರು ಈ ನೆಲದಲ್ಲಿ ಪಾದಾರ್ಪಣೆ ಮಾಡಿ ಒಂದು ಸಾವಿರ ವರ್ಷಗಳಾದರೂ ಸಂದಿರುವ ಸಾಧ್ಯತೆ ಕಂಡುಬರುತ್ತದೆ."

ಈಗಾಗಲೇ ಗಮನಿಸಿದಂತೆ ಇಲ್ಲಿನ ಕೆಲವೊಂದು ಶಾಸನಗಳಲ್ಲಿ 'ಗಾಣಿಗ' ಎಂಬ ಶಬ್ದ ವೃತ್ತಿಸೂಚಕವಾಗಿಯೂ ಪ್ರಯೋಗವಾಗಿರುವುದು ಕಂಡುಬರುತ್ತದೆ. ಈ ಮಾತಿಗೆ ಇನ್ನಷ್ಟು ನಿದರ್ಶನವಾಗಿ "ಕೋಲಾರದ ಸು.೯೬೬ರ ಶಾಸನದಲ್ಲಿ 'ಗಾಣಿಗರ ಪೆರುನ್ನಾಳಿ ಸೆಟ್ಟಿಯರ ಮಗಂಗಂಜ್ಞ ಸೆಟ್ಟಿ' ಎಂದಿದ್ದು ಗಾಣಿಗರನ್ನು ಕುರಿತ ಐತಿಹಾಸಿಕ ಇದಾಗಿದೆ. ಅರಕಲಗೂಡಿನ ಮಾಹಿತಿ ೧೩೮೩ರ ಶಾಸನದಲ್ಲಿ ಆಗಿನ ಕಾಲದಲ್ಲಿ ಗಾಣಿಗರಿಂದ ತೆರಿಗೆ ವಸೂಲಾತಿ ಮಾಡುತ್ತಿದ್ದರೆಂಬುದು ತಿಳಿದುಬರುತ್ತದೆ. 'ಆಡಿದರೆ, ಮಗ್ಗದೆರೆ, ಕುಂಮರ ಗಾಣಿಗರ ನಾಯಿಂದರದರೆ' ಗಾಣದೆರೆಯನ್ನು ಹೇರಲಾಗುತ್ತಿತ್ತು. ಗಾಣಿಗರು ಎಣ್ಣೆ ಉತ್ಪಾದನೆ ಹಾಗೂ ವ್ಯಾಪಾರದಿಂದಾಗಿ ಲಾಭದಾಯಕ ವೃತ್ತಿಯನ್ನಾಗಿಸಿಕೊಂಡಿದ್ದಾರೆಂಬುದು ಇದರಿಂದ ಸ್ಪಷ್ಟವಾಗುತ್ತದೆ".[೨೦]

ಗಾಣಿಗರ ಮೂಲ ಪುರುಷರ ಬಗೆಗೆ ಇನ್ನೊಂದು ಸಂಗತಿ ತಿಳಿದು ಬರುತ್ತದೆ. "ಗಾಣಿಗ ಜನಾಂಗ ಅತ್ಯಂತ ಧಾರ್ಮಿಕ ಶ್ರದ್ಧೆಯುಳ್ಳದ್ದು. ಪೂರ್ವದಲ್ಲಿ ಗಾಣಿಗ ಜನಾಂಗದ ಮಹಾಭಕ್ತರೆಂದು ಖ್ಯಾತಿವೆತ್ತ

ಸಿರಿಯಾಳ ಸೆಟ್ಟಿ ಶ್ರೀರಾಮಚಂದ್ರನಿಗೆ ಒಂದು ಅತ್ಯಮೂಲ್ಯ ರತ್ನವನ್ನು ಕಾಣಿಕೆಯಾಗಿ ಅರ್ಪಿಸಿದನಂತೆ. ಭಕ್ತಿಗೆ ಮೆಚ್ಚಿ ಶ್ರೀರಾಮ, ಸಿರಿಯಾಳಸೆಟ್ಟಿಗೆ ಹನುಮಂತ ಮುದ್ರಿಕೆ, ಗರುಡ ಮುದ್ರಿಕೆ, ರತ್ನ ದೀಪಗಳನ್ನು ಗಾಣಿಗ ಜನಾಂಗದ ಸಂವರ್ಧನೆಯ ಸಂಕೇತವಾಗಿ ನೀಡಿದನಂತೆ. ಇಂದಿಗೂ ಗಾಣಿಗ ಜನಾಂಗದವರು ದೇವರ ರಥೋತ್ಸವಗಳಲ್ಲಿ ಹನುಮ ಉತ್ಸಾಹದಿಂದ ಪಾಲ್ಗೊಳ್ಳುವ ವಾಡಿಕೆ"[೨೧] ಇದೆಯೆಂದು ಹೇಳಲಾಗಿದೆ.

೧೮೯೧ರ ಮೈಸೂರು ಜನಗಣತಿಯ ಪ್ರಕಾರ "ಮಲ್ಲರಾಜೇ ಅರಸ್ ಎಂಬ ಮೈಸೂರಿನ ದೊರೆ ಗಾಣಿಗರಿಗಾಗಿ ಬೆಂಗಳೂರಿನಲ್ಲಿ ಒಂದು ಪೇಟೆಯನ್ನು ಸ್ಥಾಪಿಸಿದನು. ಅದೇ ರೀತಿ ಇವರನ್ನು ಅನುಸರಿಸಿ ಬಂದ ಸಹವಲಸೆಗಾರ ನರ್ಗತರಿಗೂ ಒಂದು ಪೇಟೆಯನ್ನು ಸ್ಥಾಪಿಸಿದನು. ಮಲ್ಲರಾಜನು ಈ ಜಾತಿಯ ಮುಖ್ಯ ಸದಸ್ಯರನ್ನು ಸೆಟ್ಟಿ ಮತ್ತು ಯಜಮಾನರನ್ನಾಗಿ ಮಾಡಿ, ಅವರಿಗೆ ಮನೆಗಂದಾಯದ ವಿನಾಯಿತಿಯನ್ನು ಕೊಟ್ಟನು. ಗಾಣಿಗರು ವೈಷ್ಣವರು ಮತ್ತು ಶೈವರು ಎರಡು ವರ್ಗಕ್ಕೆ ಸೇರಿದವರಾಗಿದ್ದಾರೆ".[೨೨] ಲಭ್ಯ ಆಧಾರಗಳ ಮೂಲಕ ಗಾಣಿಗರ ಬಗೆಗೆ ಇದಿಷ್ಟು ಅಂಶಗಳನ್ನು ದಾಖಲಿಸಬಹುದಾಗಿದೆ. ಪ್ರಸ್ತುತ ಮಹಾಪ್ರಬಂಧ ಲಿಂಗಾಯತ ಗಾಣಿಗ ಸಮುದಾಯ ಕುರಿತದ್ದಾಗಿದೆ.

ಗಾಣಿಗರು ತಾವು ನೆಲೆಸಿರುವ ಊರಿನ ಮೇಲೆ ಪ್ರಭುತ್ವ ಹೊಂದಿದವರಾಗಿದ್ದರು. ಸಿಂಧವಾಳ ಸಿಂಧವಾಳ ರಾಮಲಿಂಗೇಶ್ವರ ದೇವಾಲಯದಲ್ಲಿರುವ ೬೪ನೇ ಶಾಸನದಲ್ಲಿ ಈ ರೀತಿ ಉಲ್ಲೇಖವಿದೆ. ಹಗರೆಯ ತಡಿಯ ತೋಂಟ ೧ ಗಾಣ ೧ ಮನೆಯ ನಿವೇಶಣ ೧ ಈಂತೀ ಧರ್ಮವನಾವನೊರ್ವ್ವ. ಅನಂತ ಪಾಲಯ್ಯನ ಆದೇಶದಂತೆ ಪೆರ್ಗಡೆ ಚಾಕಣಯ್ಯನು ಈ ಧಾನವನ್ನು ಕೊಟ್ಟನು. ಒಂದು ಮನೆ, ಹೂದೋಟ, ಗಾಣವನ್ನು ನೀಡಿದನು."[೨೩]

"ಹಿರೇಹಡಗಲಿ ಭೀಮೇಶ್ವರ ದ್ಯಾಮೇಶ್ವರ ದೇವಾಲಯದ ಮುಂದೆ ಇರುವ ೫೨ನೇ ಶಾಸನದಲ್ಲಿ ಹೀಗಿದೆ. **ಬಂದು ಪುಗುವ....ವೊಂದು ಬಳ್ಳಮಂ ಬಿಟ್ಟರು ನಂದದೀವಿಗೆಗೆ ಪೊನ್ನುಗಾಣದ ಮಾನೆಣ್ಣೆಯ** (ಬಿಟ್ಟರು) ತೆಲ್ಲಿಗರಯ್ವತ್ತೊ ಐದನೂರು ಬಳಂಜುಗಳು ಮತ್ತು ನೂರ ಇಪ್ಪತ್ತು ಮಹಾಜನಗಳು ಎಣ್ಣೆಗಾಣ ಮತ್ತು ಕೆಲವು ಆದಾಯಗಳನ್ನು ದೇವರ ಸೇವೆಕಾರ್ಯಗಳಿಗಾಗಿ ದಾನ ಮಾಡಿದರು."[೨೪]

ಚಿರಸ್ತಹಳ್ಳಿ ಶಂಕರಲಿಂಗಸ್ವಾಮಿ ದೇವಾಲಯದ ಬಳಿಯಿರುವ ೫೭ನೇ ಶಾಸನದಲ್ಲಿ ಈ ರೀತಿಯಿದೆ. ಬಯ್ಸುಗೆಜೆಯ ಕೆಳಗೆ ಅರುನೂಱು ಬಳ್ಳಿಯ ತೋಂಟ ಪೆನ್ನೆರಡು ಮನೆಯ ನೆಲಸಣವೆತ್ತು ಗಾಣ ೧ ಕೈಗಾಣ ೧ ಶಂಕರದೇವರ ಸೇವೆಗೆ ತೇಜೋನಿದಿ ಪಂಡಿತರ ಶಿಷ್ಯನಾದ ವಿದ್ಯಾನಿಧಿ ಪಂಡಿತರ ಪಾದ ತೊಳೆದು ಗಾಣವನ್ನು, ಅಡಕೆ ಮರಗಳನ್ನು, ಹೂವಿನ ತೋಟವನ್ನು ದಾನ ಬಿಟ್ಟಿರುತ್ತಾರೆ ಎಂದು ಹೆಸರು ದೊರೆಯುತ್ತದೆ.[೨೫]

ಕುಡುತಿನಿ ಕುಮಾರಸ್ವಾಮಿ ದೇವಾಲಾಯದ ಮುಂದೆ ಇರುವ ಶಾಸನದಲ್ಲಿ ಶಕವರ್ಷ ೧೧೩೨, ಪ್ರಮೋದ್, ಜೇಷ್ಠ ಶು.೧೩, ಗುರುವಾರಕ್ಕೆ ಸರಿಹೊಂದುವ ಕ್ರಿ.ಶ.೨೭.೫.೧೨೧೦ರ ಈ ಶಾಸನದ ತಿಂಗಳು

ನಿಜಚೇಷ್ಮವಾಗಿದೆ. ದೇವರ ತಪೋವನಾಧಿಪತಿ ವಿಷ್ಣುಕರ ದೇವನು ಸ್ಥಾನದ ಏಳ್ಕೋಟಿ ಭಕ್ತರು ಹಾಗೂ ಬಣಜಿಗರು ಮಹಾಸಭೆಯಾಗಿ ಸೇರಿದಾಗ ನಾಗೇಶ್ವರ ದೇವರಿಗೆ ಮನೆ, ನಂದಾದೀವಿಗೆಗೆ ಗಾಣವೊಂದನ್ನು ಹಾಗೂ ಭೂಮಿಯನ್ನು ದಾನವಾಗಿ ಕೊಡಲಾಗಿದೆ. (ಪುಟ ೩೬)

ಗಾಣಿಗ ಸಮುದಾಯದವರು ವಿಜಯನಗರ ಸೈನ್ಯದ ಪ್ರಮುಖ ಭಾಗವಾದ ಗಜ ಸೈನ್ಯದಲ್ಲಿದ್ದರು. ಅಂದರೆ ಕರಿಯ ಕುಲದ (ಆನೆಯ ಸಮೂಹ ಸೈನ್ಯ) ವ್ಯವಸ್ಥೆ ಗಾಣಿಗ ಕುಲದವರಿಗೆ ವಹಿಸಿಕೊಡಲಾಗಿತ್ತು. ಅಲ್ಲದೆ ವಿಜಯನಗರದ ಸೈನ್ಯದಲ್ಲಿ ಬಹು ಸಂಖ್ಯೆಯಲ್ಲಿದ್ದ ಇವರು 'ಆನೆಯ ಬಲದವರು' ಎಂದೇ ಪ್ರಖ್ಯಾತಿ ಪಡೆದಿದ್ದರು. ಈ ಅಂಶಗಳೇ ತಮ್ಮದು 'ಕರಿಯಕುಲ' ಎಂದು ಹೆಸರಾಗಲು ಕಾರಣವಾಯಿತು ಎನ್ನಲಾಗುತ್ತದೆ.

ಹೀಗೆ ಗಾಣಿಗರು ನೆಲೆಸಿರುವ ಸ್ಥಳಗಳಲ್ಲಿ ನೂರಾರು ಶಾಸನಗಳು ಲಭ್ಯವಿದ್ದು ಅವು ದಾನ, ದೇವಾಲಯ ನಿರ್ಮಾಣ, ಕ್ಷೇತ್ರ ತೇಜಸ್ಸು, ಇವೇ ಮೊದಲಾದ ಸಾಮಾಜಿಕ ಸಾಂಸ್ಕೃತಿಕ ಚಟುವಟಿಕೆಗಳನ್ನು ಸಮುದಾಯದ ಕೊಡುಗೆಯನ್ನು ತಿಳಿಸಿಕೊಡಲೂ ನೆರವಾಗಿವೆ. ಈ ಸಮುದಾಯದ ಇತಿಹಾಸದಲ್ಲಿ ಸಹಸ್ರಾರು ವೀರರ ತ್ಯಾಗದ ಔದಾರ್ಯದ ಪೌರುಷದ ಸಂಗತಿಗಳು ಘಟಿಸಿಹೋಗಿವೆ. ಅವುಗಳಿಗೆ ಶಾಸನಸ್ಥ ದಾಖಲೆಗಳಿಲ್ಲದಿರುವುದರಿಂದ ಇಂದು ಆ ಸಂಗತಿಗಳು ಅಲಭ್ಯವಾಗಿವೆ. ಉಪಲಬ್ಧ ದಾಖಲೆಗಳ ಹಿನ್ನೆಲೆಯಲ್ಲಿ ಕಣ್ಮರೆಯಾದ ಅಂದಿನ ಘಟನೆಗಳನ್ನು ರೂಪಿಸಿಕೊಳ್ಳಲೂ ಅಭ್ಯಂತರವಿಲ್ಲ. ಈ ಪರಿಸರದ ಇಂಥ ಭವ್ಯ ಪರಂಪರೆ ಈ ಸಮುದಾಯದ ಮೇಲೆ ಪ್ರಭಾವ ಬೀರಿದ ಕಾರಣ ಇದು ತನ್ನ ವ್ಯಕ್ತಿತ್ವ ಮತ್ತು ಅಭಿರುಚಿಗಳನ್ನು ರೂಪಿಸಿಕೊಂಡು ತನ್ನದೇ ಆದ ವೈಶಿಷ್ಟ್ಯವನ್ನು ಪಡೆದಿವೆ.

### ಟಿಪ್ಪಣಿಗಳು

೧. ವೈ.ಸಿ. ಬಾನುಮತಿ, ಮಲೆನಾಡು ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ, ೧೯೯೪, ಪು.೫

೨. ಅದೇ, ಪು.೬

೩. ಸಂ. ದೇವೇಂದ್ರಕುಮಾರ ಹಕಾರಿ, ಜಾನಪದೀಯ, ಪು.೯೬

೪. ಹೆಚ್.ಡಿ. ಪ್ರಶಾಂತ (ಸಂ), ಕರ್ನಾಟಕ ರಾಜ್ಯಕೋಶ-೪, ಜನಸಮುದಾಯ ಸಂಪುಟ, ೨೦೦೦, ಪು.೩೭

೫. ದೇವೇಂದ್ರಕುಮಾರ ಹಕಾರಿ (ಸಂ), ಜಾನಪದೀಯ, ಪು.೯೭

೬. ಗೆಜೆಟಿಯರ್ ಮುಂಬಾಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು ಧಾರವಾಡ, ಬಿಜಾಪುರ, ಬೆಳಗಾವಿ, ಕಾನಾಡಾ ಈ ನಾಲ್ಕು ಜಿಲ್ಲೆಗಳದು ಅನುವಾದ: ವೆಂಕಟರಂಗೋಕಟ್ಟಿ ಭಾಗ-೩, ೧೯೮೪, ಪು.೧೬೧

೭. ಕನ್ನಡ ಇಂಗ್ಲೀಷ್ ಡಿಕ್ಷನರಿ, REVF Kittel, ೧೯೯೯, ಪು.೫೩೭

೮. ಕನ್ನಡ ನಿಘಂಟು ಮೂರನೆಯ ಸಂಪುಟ, ೧೯೭೭

೯. ಸಂ. ದೇವೇಂದ್ರ ಕುಮಾರ ಹಕಾರಿ, ಜಾನಪದೀಯ, ಪು.೯೪

೧೦. ಡಾ. ರಾಜಶೇಖರ್ ಜಮದಂಡಿ, ಸರ್ವಜ್ಞನ ವಚನಗಳು ಒಂದು ಜಾನಪದೀಯ ಅಧ್ಯಯನ ಅಪ್ರಕಟಿತ ಪ್ರಬಂಧ, ೨೦೦೨, ಪು.೯೩

೧೧. ಪ್ರಿ.ಜಿ.ವಿ. ಸಜ್ಜನ (ಪ್ರ.ಸಂ.), ಗಾಣಸಿರಿ (ಸ್ಮರಣ ಸಂಚಿಕೆ), ೨೦೦೪, ಪು.೧೪

೧೨. ಅದೇ, ಪು.೧೮

೧೩. ಅದೇ, ಪು.೧೨

೧೪. ಅದೇ, ಪು.೧೭

೧೫. ಅದೇ, ಪು.೧೮

೧೬. ಡಾ. ರಾಜಶೇಖರ್ ಜಮದಂಡಿ, ಸರ್ವಜ್ಞನ ವಚನಗಳು ಒಂದು ಜಾನಪದೀಯ ಅಧ್ಯಯನ, ಪು.೯೩

೧೭. ದೇವೇಂದ್ರಕುಮಾರ ಹಕಾರಿ ಸಂ., ಜಾನಪದೀಯ, ಪು.೯೫

೧೮. ಅದೇ, ಪು.೯೫

೧೯. ಅದೇ, ಪು.೯೬

೨೦. ಅದೇ, ಪು.೯೮

೨೧. ಡಾ. ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ೨೦೦೫, ಪು.೧೨೦

೨೨. ಜಾನಪದ ವಿಶ್ವಕೋಶ ಭಾಗ ೧, ಪು.೬೪೫

೨೩. ಡಾ. ದೇವರಕೊಂಡಾರೆಡ್ಡಿ, ಬಳ್ಳಾರಿ ಜಿಲ್ಲೆ ಶಾಸನ ಸಂಪುಟ ೧, ಪು.೮೦

೨೪. ಅದೇ, ಪು.೩೫೬

೨೫. ಅದೇ, ಪು.೫೧೯

೨೬. ಅದೇ, ಪು.೩೬

# ಅಧ್ಯಾಯ ೪

## ಸಾಮಾಜಿಕ ವ್ಯವಸ್ಥೆ

ಪ್ರವೇಶ

೪.೧. ಕುಟುಂಬ (ಜೀವನ) ಪದ್ಧತಿ

೪.೨. ಗಾಣಿಗ ಸಮುದಾಯದ ಒಳಪಂಗಡಗಳು

೪.೩. ಗಾಣಿಗರ ಬೆಡಗುಗಳು

೪.೪. ಗಾಣಿಗರ ರಕ್ತಸಂಬಂಧ

೪.೫. ನ್ಯಾಯ ಪದ್ಧತಿ

೪.೬. ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ

೪.೭. ವೈದ್ಯ ಪದ್ಧತಿ



೪.೮. ಆಹಾರ ಪದ್ಧತಿ

೪.೯. ಉಡುಗೆ ತೊಡುಗೆ

೪.೧೦. ವಸತಿ ವ್ಯವಸ್ಥೆ

೪.೧೧. ರಾಜಕೀಯ ಆರ್ಥಿಕ ಸ್ಥಿತಿ-ಗತಿ

೪.೧೨. ನಿಷೇಧಗಳು

೪.೧೩. ಸಂಘ ಸಂಸ್ಥೆ

## ಪ್ರವೇಶ

ಸಮಾಜವು ಕೇವಲ ಜನರ ಒಂದುಗೂಡುವಿಕೆಯಲ್ಲ. ಅದು ಸಾಮಾಜಿಕ ಸಂಬಂಧಗಳ ಬಲೆ, ಸಮಾಜವು ತನ್ನ ಕ್ರಮಬದ್ಧತೆಯನ್ನು, ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಪರಂಪರೆಗಳು, ಧರ್ಮ, ನೀತಿ, ಲೋಕರೂಢಿಗಳು, ಕಟ್ಟುಪಾಡುಗಳು, ಸಾಂಸ್ಕೃತಿಕ ಮೌಲ್ಯಗಳು ಮುಂತಾದ ಅಂಶಗಳ ಮೂಲಕ ಸಮಾಜದಲ್ಲಿ ಬದುಕುವ ವ್ಯಕ್ತಿಯನ್ನು ನಿಯಂತ್ರಿಸಲಾಗುತ್ತದೆ. ಪ್ರತಿಯೊಬ್ಬ ವ್ಯಕ್ತಿಯೂ ಕೂಡ ಸಮಾಜದ ಒಬ್ಬ ಸದಸ್ಯನಾಗಿ, ಅಲ್ಲಿನ ಸಂವಿಧಾನ ಬದ್ಧ ನಿಯಮಗಳಿಗೆ ಹೊಂದಿಕೊಂಡು ಪಾಲಿಸಬೇಕಾಗುತ್ತದೆ. ಈ ದೃಷ್ಟಿಯಿಂದಲೇ ಮನುಷ್ಯ ಸಂಘ ಜೀವಿ, ಸಾಮಾಜಿಕ ಜೀವಿ, ಆ ಬಗ್ಗೆ ಅವನಿಗೆ ಅರಿವಿರುತ್ತದೆ, ಗೌರವವಿರುತ್ತದೆ.

ಸಮಾಜಕ್ಕೆ ಕುಟುಂಬವೇ ಮೂಲಾಧಾರ. ಸಮಾಜದ ಎಲ್ಲ ಸಂಸ್ಥೆಗಳು, ವೃತ್ತಿಗಳು, ಪಂಗಡಗಳು, ರೀತಿ ನೀತಿಗಳು, ಆಚರಣೆಗಳು ಮುಂತಾದ ಹತ್ತು ಹಲವಾರು ಸಂಗತಿಗಳು ಇಲ್ಲಿ ಸಮಾವೇಶಗೊಳ್ಳುತ್ತವೆ. ಸಮಾಜದಲ್ಲಿ ಜೀವಿಸುವ ಹಲವಾರು ಭಿನ್ನ ರೀತಿಯ ವ್ಯಕ್ತಿಗಳು ತಮ್ಮದೇ ಆದಂತಹ ಜಾತಿ, ವರ್ಗ, ವರ್ಣದ ನೆಲೆಯಲ್ಲಿ ವಿಭಜನೆಗೊಂಡಿದ್ದಾರೆ. ಈ ಒಂದೊಂದು ವಿಭಜಿತ ಘಟಕಗಳು ತಮ್ಮದೇ ಆದ ಜೀವನ ವಿಧಾನ, ವಾಸದ ನೆಲೆ, ಆಚಾರ-ವಿಚಾರ, ಸಂಪ್ರದಾಯಗಳನ್ನು ರೂಢಿಸಿಕೊಂಡಿದ್ದಾರೆ. ಆ ಮೂಲಕ ಸಾಮಾಜಿಕ ವ್ಯವಸ್ಥೆಯಲ್ಲಿ ವಿಭಿನ್ನ ಬಗೆಯ ಸಾಂಸ್ಕೃತಿಕ ಅಂಶಗಳನ್ನು ಉಳಿಸಿಕೊಂಡಿದ್ದಾರೆ.

ಸಮಾಜ ಕೇವಲ ಕುಟುಂಬದಲ್ಲಿನ ವ್ಯಕ್ತಿಗಳ ಸಮೂಹವಾಗಿರದೇ "ಪರಸ್ಪರ ವಿವಿಧ ಬಗೆಯ ಕುಟುಂಬ, ಕುಲವೃಂದ ಸಂಬಂಧವುಳ್ಳ ಜನತೆಯ ಆಂತರಿಕ ವ್ಯವಸ್ಥೆ ವಿಶಾಲಾರ್ಥದಲ್ಲಿ ಇದು ಇತರೆ ಕೀಟ, ಪಕ್ಷಿಗಳು, ನೀರು, ಪ್ರಾಣಿಗಳು, ಆಹಾರಗಳು. ಈ ಆಹಾರಕ್ಕಾಗಿ ಸಂಚರಿಸುವ ರೀತಿ ಹೀಗೆ ಹಲವಾರು ಬಗೆಯ ಅನ್ಯೋನ್ಯ ಸಂಬಂಧಗಳು ಇವೆ. ಇವು ಆಯಾ ಜೀವಿಗಳ ಒಂದು ಬಗೆಯ ಏಕತೆಯು ಅವರವರ ನಡುವೆ ಏರ್ಪಟ್ಟ ವಾಸ್ತವ ನೆಲೆಯ ಆಂತರಿಕವಾದ ಗಾಢ ನಿಕಟ ಸಂಬಂಧಗಳನ್ನು ಅವಲಂಬಿಸಿರುತ್ತದೆ. ಕೆಲವು ನೀತಿ ಸೂತ್ರ ಶಿಸ್ತುಗಳಿಗೆ ಒಳಪಟ್ಟು ಸುಸಂಘಟಿತ ಸಮುದಾಯವನ್ನು ನಾವು ಸಮಾಜ ಎನ್ನುತ್ತೇವೆ. ವ್ಯಕ್ತಿಗಳ ವ್ಯವಸ್ಥಿತ ಸಮೂಹಕ್ಕೆ ಸಮಾಜವೆಂಬ ಪದ ಅನ್ವಯಿಸುತ್ತದೆ. ಇಂಥ ಒಂದು ಸಮಾಜದಲ್ಲಿ ವಿವಿಧ ಅಂಗಗಳಿರುತ್ತವೆ. ಅವುಗಳೆಂದರೆ ಗುಂಪು, ವರ್ಗ, ಕುಟುಂಬ ಮುಂತಾದವು ಆಯಾ ಸಾಮಾಜಿಕ ನಡವಳಿಕೆ ಅವರವರ ರಾಜಕೀಯ, ಆರ್ಥಿಕ, ಧಾರ್ಮಿಕ ನೆಲೆಗಟ್ಟಿನ ಮೇಲೆ ನಿಂತಿರುತ್ತವೆ.

ಸಾಮಾಜಿಕ ಸಂಸ್ಥೆಗಳಲ್ಲಿ ಕುಟುಂಬವು ಅತ್ಯಂತ ಮುಖ್ಯ ಘಟಕ, ಮೂಲ ಸಂಸ್ಥೆ. ಏಕೆಂದರೆ ಇತರ ಎಲ್ಲ ಘಟಕಗಳು ಆಧಾರವಾಗಿರುವುದು ಈ ಕುಟುಂಬದ ಮೇಲೆ, ಕುಟುಂಬವಿಲ್ಲದೇ ಸಮಾಜವಿರಲು ಸಾಧ್ಯವಿಲ್ಲ.

ಲಿಂಗಯಿತ ಸಮುದಾಯಗಳು ಮೇಲ್ನೋಟಕ್ಕೆ ಸರಳವೆಂದು ಕಂಡುಬಂದರೂ ಕುಟುಂಬ ವ್ಯವಸ್ಥೆಯಲ್ಲಿ ತಮ್ಮದೇ ಆದಂತಹ ವೈಶಿಷ್ಟ್ಯಗಳನ್ನು ಹೊಂದಿದ್ದಾರೆ. ಅವರು ಊರಲ್ಲಿ ವಾಸವಾಗಿರುವುದರಿಂದ ಅಲ್ಲಿಯೇ ಸಮಾಜವನ್ನು ನಿರ್ವಿಸಿಕೊಂಡಿದ್ದಾರೆ. ಆ ಮೂಲಕ ತಮ್ಮ ಸಮುದಾಯದ ನಂಬಿಕೆ, ಸಂಪ್ರದಾಯ, ನಿಷೇದಗಳಂತಹ ಸಾಂಸ್ಕೃತಿಕ ಅಂಶಗಳನ್ನು ಉಳಿಸಿಕೊಂಡಿದ್ದಾರೆ. ಅದರಂತೆ ಲಿಂಗಾಯಿತ ಗಾಣಿಗ ಸಮುದಾಯವು ಆರಂಭದ ಜೀವನ ಮತ್ತು ಇಂದಿನ ಜೀವನದ ನಡುವಿನ ಸಾಮಾಜಿಕ ಜೀವನದಲ್ಲಿ ತನ್ನದೇ ವೈಶಿಷ್ಟ್ಯವನ್ನು ಪಡೆದುಕೊಂಡಿದೆ. ಇವರಲ್ಲಿ ಇರುವ ಅಂತಹ ಸಾಮಾಜಿಕ ಅಂಶಗಳನ್ನು ಕೆಲವು ಮುಖ್ಯ ಅಂಶಗಳ ಮೂಲಕ ಹೀಗೆ ವಿವರಸಬಹುದು.

## ೪.೧. ಕುಟುಂಬದ ಜೀವನ ಪದ್ಧತಿ

ಸಾಮಾನ್ಯವಾಗಿ ಈಗ ಗಾಣಿಗರಲ್ಲಿ ಅವಿಭಕ್ತ ಕುಟುಂಬಗಳು ಕಡಿಮೆ. ಆದರೆ ಹಿಂದೆ ಅವಿಭಕ್ತ ಕುಟುಂಬಗಳಿದ್ದವು. ವಲಸೆ ಬಂದ ಕಾಲದಲ್ಲಿ ಮನೆಯ ಬಂಧುಗಳೆಲ್ಲರು ಒಟ್ಟಿಗೆ ಇರುತ್ತಿದ್ದವೆಂದು ಹೇಳುತ್ತಾರೆ. ಈಗ ಗಾಣಿಗರು ತಮ್ಮ ಊರುಗಳಲ್ಲಿ ಬೇರೆ ಬೇರೆ ಗುಡಿಸಲುಗಳನ್ನು ಮಾಡಿಕೊಂಡು ವಿಭಕ್ತ ಕುಟುಂಬದವರಾಗಿ ವಾಸಿಸುತ್ತಿದ್ದಾರೆ.

ಹಿಂದೆ ಗಾಣಿಗರದು ಅವಿಭಕ್ತ ಕುಟುಂಬವಾಗಿತ್ತು. ದೊಡ್ಡಪ್ಪ, ದೊಡ್ಡಮ್ಮ, ಚಿಕ್ಕಪ್ಪ, ಚಿಕ್ಕಮ್ಮ, ಅತ್ತೆ, ಅಜ್ಜಿ ಇವರ ಮಕ್ಕಳು ಹೀಗೆ ಹೆಚ್ಚು ಮಂದಿ ಇರುತ್ತಿದ್ದರು. ಮಲಗುವ ಮನೆ, ಗುಡಿಸಲಾದ್ದರಿಂದ ಒಂದೇ ಕಡೆ ಮೂರು ನಾಲ್ಕು ಮನೆ, ಗುಡಿಸಲುಗಳನ್ನು ಕಟ್ಟಿಕೊಂಡು ಇರುತ್ತಿದ್ದರು. ಇವರದು ಪಿತೃ ಪ್ರಧಾನ ಕುಟುಂಬವಾದ್ದರಿಂದ ಮನೆಯಲ್ಲಿ ಹಿರಿಯನಾದವನು ಅಜ್ಜ ಹೇಳಿದಂತೆ ಕಾರ್ಯಗಳನ್ನು ನಡೆಸುತ್ತಿದ್ದರು. ಕುಟುಂಬದಲ್ಲಿ ದುಡಿದದ್ದೆಲ್ಲವನ್ನು ಯಜಮಾನನಿಗೆ ಒಪ್ಪಿಸಬೇಕು. ಆತ ಕುಟುಂಬದ ಜವಾಬ್ದಾರಿ ಹೊರುತ್ತಾನೆ. ಕೂಲಿ ಅಥವಾ ಬೇರಾವುದೇ ಕೆಲಸದ ಹಣವನ್ನು ಯಜಮಾನನಿಗೆ ಒಪ್ಪಿಸಬೇಕು. ತೋಟಗಳಲ್ಲಿ, ಮಣ್ಣು, ಹೊಲಗಳಲ್ಲಿ ಕೂಲಿ ಕೆಲಸ. ಹೀಗಾಗಿ ಹೆಂಗಸರು ಗಂಡಸರಂತೆ ದುಡಿಯುತ್ತಾರೆ. ಅದನ್ನು ಮನೆಯ ಯಜಮಾನನಿಗೆ ಒಪ್ಪಿಸಬೇಕಿತ್ತು. ಆತ ಧಾರ್ಮಿಕ ಕಾರ್ಯಗಳಿಗಾಗಿ ದಿನನಿತ್ಯದ ಹಣದಲ್ಲಿ ಉಳಿತಾಯ ಮಾಡಿ ಉಳಿದದ್ದನ್ನು ಕುಟುಂಬದ ಪೋಷಣೆಗೆ ವ್ಯಯಿಸುತ್ತಿದ್ದ. ಸಾಮಾನ್ಯವಾಗಿ ಹಿಂದೆ ಯಜಮಾನನ ಮಾತನ್ನು ಯಾರೂ ಮೀರುತ್ತಿರಲಿಲ್ಲ. ಕೆಲಸವನ್ನು ಯಜಮಾನನೇ ಹಂಚಿ ಹಾಕುತ್ತಿದ್ದ. ಅದರಂತೆ ಮನೆಯ ಸದಸ್ಯರೆಲ್ಲರು ಅನುಸರಿಸುತ್ತಿದ್ದರು.[೧] ಈ ರೀತಿಯ ಅವಿಭಕ್ತ ಕುಟುಂಬಗಳಿದ್ದ ಕಾಲದಲ್ಲಿ ಗಾಣಿಗರು ಎತ್ತು, ಎಮ್ಮೆ, ಆಕಳು ಇತ್ಯಾದಿ ದನಗಳನ್ನು ಕಟ್ಟುತ್ತಿದ್ದರು. ಅದಕ್ಕಾಗಿ ಮನೆಯಲ್ಲಿ ದನಗಳನ್ನು ಕಟ್ಟಲಿಕ್ಕೆ 'ದಂದಕ್ಕಿ' ಎಂದು ಇರುತ್ತಿತ್ತು. ಈಗ ಅವಿಭಕ್ತ ಕುಟುಂಬಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕೆಲವು ಊರುಗಳಲ್ಲಿನ ಮನೆತನಗಳಲ್ಲಿ ಈ ಪದ್ಧತಿ ಕಂಡುಬಂದಿದೆ. ಆದರೆ ಕುಟುಂಬದವರು ಒಂದೇ ಕಡೆ ಕೆಲವು ಮನೆ, ಗುಡಿಸಲುಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಇಂಥವನ್ನು ಕಿತ್ತೂರು, ತಂಬ್ರಹಳ್ಳಿ, ಏಣಿಗಿ, ಕತ್ತೆಬೆನ್ನೂರು, ರಾಜವಾಳದಲ್ಲಿ ಈಗಲೂ ಕಾಣಬಹುದು. ಅವಿಭಕ್ತ ಕುಟುಂಬದವರು ಒಂದು ಮನೆ ಇಲ್ಲವೆ

ಗುಡಿಸಲಿನಲ್ಲಿ ಅಡಿಗೆ ಮಾಡುತ್ತಾರೆ. ಊಟಕ್ಕಾಗಿ ಕುಟುಂಬದ ಸದಸ್ಯರೆಲ್ಲರೂ ಕೂಡುತ್ತಾರೆ. ಕುಟುಂಬದ ಎಲ್ಲ ಹೆಂಗಸರೂ ಅಡಿಗೆ ಮಾಡುವಾಗ ಒಟ್ಟಾಗಿ ಕೆಲಸ ಮಾಡುತ್ತಾರೆ. ಊಟದ ನಂತರ ಪ್ರತ್ಯೇಕ ಮಲಗುವ ಕೋಣೆಗಳಲ್ಲಿ ಇರುತ್ತಾರೆ. ಧಾರ್ಮಿಕ ಕಾರ್ಯಗಳನ್ನು ನಡೆಸಲು ಅದೇ ಮನೆಯಲ್ಲಿರುತ್ತದೆ. ಅದು ಬೇರೆ ಕೋಣೆಗಳಿಗಿಂತ ಭಿನ್ನವಾಗಿರುತ್ತದೆ. ಮನೆಯಲ್ಲಿ ಯಾವುದೇ ರೀತಿಯ ಜಗಳವಾದರೆ ಅದನ್ನು ಯಜಮಾನನೇ ಬಗೆಹರಿಸುತ್ತಾನೆ. ಕುಟುಂಬವನ್ನು ಒಡೆಯಲು ಬಿಡುತ್ತಿರಲಿಲ್ಲ. ಅದು ಯಜಮಾನನ ಬುದ್ಧಿವಂತಿಕೆಯನ್ನು ಅವಲಂಬಿಸಿರುತ್ತಿತ್ತು.

**ವಿಭಕ್ತ ಕುಟುಂಬ**

ಅವಿಭಕ್ತ ಕುಟುಂಬದಲ್ಲಿ ಸದಸ್ಯನಿಗೆ ಪೂರ್ಣ ಸ್ವಾತಂತ್ರ್ಯ ಯಾವ ಸಂದರ್ಭದಲ್ಲೂ ಇರುತ್ತಿರಲಿಲ್ಲ. ದುಡಿಮೆಗೆ ತಕ್ಕ ತೃಪ್ತಿ ಇರುತ್ತಿರಲಿಲ್ಲ. ಕೆಲಸದ ಸಂದರ್ಭದಲ್ಲಿ ಸದಸ್ಯ ಮನೆಯಲ್ಲಿ ಇರುವುದನ್ನು ಯಜಮಾನ ಒಪ್ಪುತ್ತಿರಲಿಲ್ಲ. ಮತ್ತು ಕೌಟುಂಬಿಕ ಕಲಹಗಳು ಆಗಾಗ ಜರುಗುತ್ತಿದ್ದವು. ಇಂಥ ಹತ್ತು ಹಲವಾರು ಕಾರಣಗಳಿಂದ ದೊಡ್ಡ ಕುಟುಂಬ ಚಿಕ್ಕ ಕುಟುಂಬಗಳಾಗಲು ಕಾರಣವಾಯಿತು.

ಚಿಕ್ಕ ಕುಟುಂಬದಲ್ಲಿ ಅಜ್ಜಿ, ಅಜ್ಜ, ತಾಯಿ, ತಂದೆ ಮತ್ತು ಮಕ್ಕಳು ಇರುತ್ತಾರೆ. ಜೊತೆಯಲ್ಲಿ ಪಿತೃಪ್ರಧಾನ ಕುಟುಂಬವಾದ್ದರಿಂದ ಮನೆಯ ಯಜಮಾನರಾಗಿ ಅಜ್ಜ ಅಜ್ಜಿಯರು ಇರುತ್ತಾರೆ. ಮನೆಯಹಿರಿಯ ಮಗನು ಕಾರ್ಯ ನಿರ್ವಹಿಸುವ, ಕುಟುಂಬ ಪೋಷಣೆ ಮಾಡಲು ಜವಾಬ್ದಾರನಾಗಿರುತ್ತಾನೆ. ಆದರೆ ಧಾರ್ಮಿಕ ಕಾರ್ಯಗಳನ್ನು ನಡೆಸಲು ಮನೆಯ ಹಿರಿಯರಾದ ಅಜ್ಜ ಅಜ್ಜಿಯರೇ ಪ್ರಧಾನರೆನಿಸುತ್ತಾರೆ. ಇಂಥ ವಿಭಕ್ತ ಕುಟುಂಬದ ಮನೆ ಸರಳವಾಗಿರುತ್ತದೆ. ಗುಡಿಸಲು, ಮಣ್ಣಿನ ಮನೆ, ಹಂಚಿನ ಮನೆಯಾದರೆ, ಮಲಗುವ ಕೋಣೆ, ಅಡಿಗೆ ಕೋಣೆ, ದೇವರ ಕೋಣೆ, ಬಚ್ಚಲು ಕೋಣೆ ಮತ್ತು ಎತ್ತು, ದನಕರುಗಳು ಕಟ್ಟಲು ದಂದಕ್ಕಿಯಿರುತ್ತದೆ. ಇಂಥ ಮನೆಗಳಲ್ಲಿ ೬ ರಿಂದ ೧೨ ಜನಗಳು ಮಲಗಲು ಅನುಕೂಲವಿರುತ್ತದೆ. ಇಂಥ ಮನೆಗಳನ್ನು ಏಣಿಗಿ, ವರದಾಪುರ ಕಿತ್ನೂರು, ತಂಬ್ರಹಳ್ಳಿ, ಮಕರಬ್ಬಿ, ರಾಜವಾಳ ಪ್ರದೇಶಗಳಲ್ಲಿ ಸಾಕಷ್ಟು ಕಾಣಬಹುದು. ಆದರೆ ಹಂಚಿನ ಮನೆ, ಗುಡಿಸಲಿನಲ್ಲಿಯೇ ಹೆಚ್ಚು ಮಂದಿ ಗಾಣಿಗರು ಚಿಕ್ಕ ಕುಟುಂಬ ಹೊಂದಿ ವಾಸಿಸುತ್ತಿದ್ದಾರೆ. ಮನೆಯ ಹೊರಗೆ ಅಂಗಳವಿದ್ದು. ಅಂಗಳದಲ್ಲಿ ಮಲಗುತ್ತಾರೆ. ಮಲಗಲು ಚಾಪೆ, 'ಕೌದಿ', 'ತಲೆದಿಂಬು' ಇಟ್ಟುಕೊಳ್ಳುತ್ತಾರೆ. ಕೆಲವರು ಕಂಬಳಿ ಹಾಕಿಕೊಂಡು 'ಗೋರ್ಕಿ' ಹೊಡೆಯುತ್ತಾರೆ. ಗುಡಿಸಲಿನಲ್ಲಿ, ಹಂಚಿನ ಮನೆಯಲ್ಲಿ ಮಲಗಲು ಪ್ರತ್ಯೇಕ ಅಡ್ಡಗೋಡೆ ಹಾಕಿ ಅದಕ್ಕೆ ಬಿದಿರಿನ ಅಥವಾ ಕದಮಾಡಿಸಿ ಮರೆ ಮಾಡುತ್ತಾರೆ. ಅವರು ಮನೆಯ ಒಳಗೆ ಪ್ರವೇಶ ಮಾಡಿದರೆ ಏನೂ ಕೆಲಸಗಳನ್ನು ಮಾಡುವಂತಿಲ್ಲ. ಸಾಮಾನ್ಯವಾಗಿ ಗಾಣಿಗರು ಈಗ ಆಕಳು, ಎಮ್ಮೆ, ಎತ್ತು, ಕೋಳಿ, ಕುರಿಗಳು ಸಾಕುತ್ತಾರೆ. ಮನೆಯ ಎದುರು ಕೋಳಿಗೂಡು ಇಲ್ಲವೇ ಬುಟ್ಟಿಗಳಿಂದ ಮುಚ್ಚುತ್ತಾರೆ. ಬೇರೆ ಪ್ರಾಣಿಗಳು ಗೂಡು, ಪುಟ್ಟಿಯಲ್ಲಿನ ಕೋಳಿಯನ್ನು ಹಾರಿಸಿಕೊಂಡು ಹೋಗಬಹುದೆಂದು ಬಾಗಿಲನ್ನು ಮುಚ್ಚಲು ತಗಡು ಅಥವಾ ಕಟ್ಟಿಗೆಯ ಕದ ಮಾಡಿಸಿರುತ್ತಾರೆ. ಗುಡಿಸಲಿನ ಬಾಗಿಲು, ಹಂಚಿನ ಮನೆಯ ಬಾಗಿಲು ಕಿರಿದಾಗಿದ್ದು ಎಲ್ಲರೂ

ಬಗ್ಗಿ ಒಳಗೆ ಹೋಗುವಂತಿರುತ್ತದೆ. ಮಳೆಗಾಳಿಯಿಂದ ರಕ್ಷಿಸಲು ಈ ರೀತಿಯ ಮನೆ, ಗುಡಿಸಲುಗಳನ್ನು ಮಾಡಿಕೊಂಡಿರುತ್ತಾರೆ. ಈ ರೀತಿಯ ಅವಿಭಕ್ತ ಕುಟುಂಬದ ರಕ್ಷಣೆಗಾಗಿ, ಪ್ರತಿ ಮನೆ, ಗುಡಿಸಲಿನಲ್ಲಿ ಸ್ವಾಮಿಗಳಿಂದ ತೆಂಗಿನಕಾಯಿ, ನಿಂಬೆಹಣ್ಣು, ಮಂತ್ರ ಮಾಡಿಸಿಕೊಂಡು ಬಂದು ಕಟ್ಟುತ್ತಾರೆ. ಮನೆಯ ಮುಂದಿನ ಬಾಗಿಲಿಗೆ ಅಥವಾ ಜಂತಿಗಳಿಗೆ ಕಾಯಿ, ನಿಂಬೆ ಹಣ್ಣು ಕಟ್ಟುತ್ತಾರೆ. ಮನೆಯ ಮುಂದಿನ ಬಾಗಿಲಿಗೆ ಅಥವಾ ಜಂತಿಗಳಿಗೆ ಕಾಯಿ, ನಿಂಬೆಹಣ್ಣು ಕಟ್ಟುತ್ತಾರೆ. ಈ ಮಂತ್ರಕಾಯಿ ಸಿಪ್ಪೆಯ ಸಹಿತವಿದ್ದು ಅದರ ಒಳಗೆ ತೂತು ಮಾಡಿ ಸ್ವಾಮಿಗಳು ಮಂತ್ರಿಸಿರುತ್ತಾರೆ. ಸಾಮಾನ್ಯವಾಗಿ ಎಲ್ಲ ಗಾಣಿಗರ ಮನೆಯಲ್ಲೂ ಇದನ್ನು ಕಾಣಬಹುದಾಗಿದೆ. ತೆಂಗಿನ ಕಾಯಿಯನ್ನು ಮರದಿಂದ ಕೆಳಕ್ಕೆ ಬೀಳದಂತೆ, ಹತ್ತಿ ಹಾಗೆ ಕಿತ್ತು ತರಬೇಕು ಬಲಿತ ಮರದಿಂದ ಕಾಯಿಯನ್ನು ತೆಗೆಯಬೇಕು. ತಂದು ಮನೆಯ ಒಳಗಡೆ ಕಾಯಿಯನ್ನು ಬಂಡಾರ ಕುಂಕುಮದಲ್ಲಿ ಹುಲಿಗೆಮ್ಮ, ಎಲ್ಲಮ್ಮ, ಮುಡುಪು ಕಟ್ಟಿ ಇಟ್ಟಿರುತ್ತಾರೆ. ಸಾಮಾನ್ಯವಾಗಿ ಮಕ್ಕಳನ್ನು ಬಿಟ್ಟರೆ ಕುಟುಂಬದ ಪೋಷಣೆಗಾಗಿ ಎಲ್ಲರೂ ದುಡಿಯುವವರು ಗಂಡು ಹೆಣ್ಣು ಒಟ್ಟಿಗೆ ಕೂಲಿಗೆ ಮಾಡುತ್ತಾರೆ. ಅಜ್ಜ ಅಜ್ಜಿಯರಿದ್ದರೆ ಮನೆ ಕೆಲಸ, ಸಣ್ಣ ಮಕ್ಕಳನ್ನು, ಮನೆಯನ್ನು ನೋಡಿಕೊಳ್ಳುವರು. ಮನೆಗೆ ಬೇಕಾದ ತರಕಾರಿಗಳನ್ನು ಬೆಳೆಸುತ್ತಾರೆ. ಸಾಮಾನ್ಯವಾಗಿ ಕುಂಬಳ, ಬದನೆಗಿಡ, ಟಮ್ಯಾಟೋ ಗಿಡ, ಮೆಣಸಿನ ಗಿಡ, ಕಲ್ಲಪಟ್ಲಗಿಡಗಳನ್ನು ತಮ್ಮ ಮನೆಯ ಅಂಗಳದಲ್ಲಿ ಹೆಚ್ಚು ಸ್ಥಳವಿದ್ದರೆ ನೆಟ್ಟಿರುತ್ತಾರೆ. ಹಗರಿಬೊಮ್ಮನಹಳ್ಳಿ, ಹೂವಿನಹಡಗಲಿ, ಕೂಡ್ಲಿಗಿ, ಹಂಚಿನ ಮನೆ, ಗುಡಿಸಲು ಮನೆಯ ಮುಂದೆ ಹಾಗೂ ಹಿಂದಿನ ಸ್ಥಳದಲ್ಲಿ ತರಕಾರಿ ಗಿಡಗಳನ್ನು ಕಾಣಬಹುದಾಗಿದೆ. ಗಾಣಿಗರು ಈಗ ಕೃಷಿ ನೀವಾರಿ ಮಾಡುತ್ತಿದ್ದು, ಜಮೀನಿನಲ್ಲಿ ಸಾಕಷ್ಟು ತರಕಾರಿ ಬೆಳೆಸುತ್ತಾರೆ. ಸ್ವಂತ ಸಾಗುವಳಿಯನ್ನು ಮಾಡಿ ವಾರ್ಷಿಕ ಪೈರು ಬೆಳೆ ಮಾಡುವುದಲ್ಲದೆ ಉಳಿದ ಕಾಲದಲ್ಲಿ ತರಕಾರಿಗಳನ್ನು ಬೆಳೆಯುತ್ತಾರೆ. ಇದರಿಂದ ಕುಟುಂಬದ ಆದಾಯ ಸ್ತ್ರೀ ಪುರುಷರೀರ್ವರ ದುಡಿಮೆಯಿಂದ ಹೆಚ್ಚುತ್ತದೆ. ಕುಟುಂಬದಲ್ಲಿ ಸ್ತ್ರೀ ದುಡಿಮೆ ಮಾಡುವುದರಿಂದ ಪ್ರಮುಖಳೆನಿಸಿದಳು, ಹಾಗಾಗಿ ಇವರ ಕೌಟುಂಬಿಕ ಸೌಹಾರ್ದ ದುಡಿಮೆಯಿಂದ ಗಳಿಕೆ ಇರುತ್ತದೆ. (ಮನೆಯಲ್ಲಿ ೫ ಅಥವಾ ೬ ವರ್ಷ ಕಳೆದ ಮಕ್ಕಳಿಂದ ಮನೆಯ ಇತರೆ ಕೆಲಸಗಳನ್ನು ಮಾಡಿಸುವರು.)

**ಸಂಬಂಧ**

ಗಾಣಿಗರಲ್ಲಿ ಪಿತೃಪ್ರಧಾನ ಕುಟುಂಬ ಅಸ್ತಿತ್ವದಲ್ಲಿರುತ್ತದೆ. ತಂದೆ ಪ್ರಮುಖನಾಗಿರುತ್ತಾನೆ. ಆದುದರಿಂದ ತಂದೆಯ ಕಡೆಯ ಸಂಬಂಧಗಳಿಗೆ ಗೌರವಾದರಗಳು ಹೆಚ್ಚು. ತಾಯಿಯ ಕಡೆಯಲ್ಲಿ ಸೋದರ ಮಾವನಿಗೆ ಮಾತ್ರ ಹೆಚ್ಚು ಗೌರವವಿರುತ್ತದೆ. ಗಾಣಿಗರಲ್ಲಿ ನಮ್ಮ ಸಂಬಂಧಗಳು ಈ ರೀತಿ ಇವೆ. ತಂದೆಯ ಅಜ್ಜ, ತಂದೆಯ ತಾಯಿ, ತಾಯಿಯ ತಾಯಿ ಅಜ್ಜಿ, ತಂದೆಯ ಅಣ್ಣ ದೊಡ್ಡಪ್ಪ, ದೊಡ್ಡಪ್ಪನ ಹೆಂಡತಿ ದೊಡ್ಡಮ್ಮ, ದೊಡ್ಡಪ್ಪರ ಮಕ್ಕಳು ಅಣ್ಣ ತಂಗಿಯರಾಗುತ್ತಾರೆ. ತಂದೆಯ ತಮ್ಮನನ್ನು ಸಣ್ಣಪ್ಪ ಅಥವಾ ಚಿಕ್ಕಪ್ಪ ಎಂದೂ ಈತನ ಹೆಂಡತಿ ಸಣವ್ವ, ಚಿಕ್ಕಮ್ಮ ಆಗುತ್ತಾಳೆ. ತಂದೆಯ ತಂಗಿ, ಅಕ್ಕ ಇವರು ಅತ್ತೆಯರಾದರೆ, ಅತ್ತೆಯರ ಗಂಡ ಮಾವನಾಗುತ್ತಾನೆ. ಮಾವನ ಮಕ್ಕಳು ದೊಡ್ಡವರಾಗುತ್ತಾರೆ. ತಾಯಿಯ ತಮ್ಮ ಅಥವಾ ಅಣ್ಣ

ಸೋದರ ಮಾವ ಎಂದು ಕರೆಸಿಕೊಂಡು ಪ್ರಮುಖನೆನಿಸುತ್ತಾನೆ. ಈತನ ಹೆಂಡತಿ ಅತ್ತೆಯಾದರೆ, ಮಕ್ಕಳು ಭಾವ, ಅತ್ತಿಗೆ, ನಾದಿನಿ, ಮೈದುನ ಎಂದು ಕರೆಸಿಕೊಳ್ಳುತ್ತಾರೆ. ಸೋದರ ಮಾವನ ಹೆಣ್ಣು ಮಕ್ಕಳನ್ನು ಮದುವೆ ಮಾಡಿಕೊಳ್ಳಬಹುದಾದ್ದರಿಂದ ಸೋದರಳಿಯನಿಗೆ ಅವರು ಸಲಿಗೆಯವರಾಗಿರುತ್ತಾರೆ.

ತಾಯಿಯ ತಂಗಿ ಚಿಕ್ಕವ್ವ, ಅಕ್ಕ ದೊಡ್ಡವ್ವಳಾಗುತ್ತಾಳೆ. ತಾಯಿಗೆ 'ಅಂವ್ವ' ಎಂದು ಕರೆಯುತ್ತಾರೆ. ಅಣ್ಣನ ಹೆಂಡತಿ ಅತ್ತಿಗೆ, ಅಕ್ಕನ ಗಂಡ ಭಾವ, ತಮ್ಮನ ಹೆಂಡತಿ ನಾದಿನಿ, ಮಗನ ಹೆಂಡತಿ ಸೊಸೆ, ಮಗಳ ಗಂಡ ಅಳಿಯ, ಮಗಳ ಮಾವ ಭಾವವಾದರೆ, ಮಗನ ಮಾವನೂ ಭಾವನಾಗುತ್ತಾನೆ. ಅಣ್ಣ ತಮ್ಮನ ಹೆಂಡ್ರು 'ಓರಗಿತ್ತಿ' ಅಥವಾ 'ಅಕ್ಕ-ತಂಗಿ' ಎಂದು ಕರೆಸಿಕೊಳ್ಳುತ್ತಾರೆ. ಇವರಲ್ಲಿ ದ್ವೇಷವುಂಟಾದರೆ 'ಸವತಿ'ಯರೆಂದು ಹೇಳುತ್ತಾರೆ. ಹೆಂಡತಿಯ ತಂಗಿ ನಾದಿನಿಯಾಗಿ ಹೆಚ್ಚು ಬಾವನ ಸಲಿಗೆಗೆ ಒಳಗಾಗುತ್ತಾಳೆ. ಅಕ್ಕ ಸತ್ತರೆ ತಂಗಿ ನಾದಿನಿಯಾಗಿದ್ದವಳು ಹೆಂಡತಿಯ ಸ್ಥಾನವನ್ನು ಪಡೆಯುತ್ತಾಳೆ.

## ೪.೨. ಗಾಣಿಗ ಸಮುದಾಯದ ಒಳಪಂಗಡಗಳು

ಈ ಸಮುದಾಯದಲ್ಲಿ ಅನೇಕ ಒಳಪಂಗಡಗಳಿವೆ. ಕರ್ನಾಟಕದಾದ್ಯಂತ ನೆಲೆಸಿರುವ ಇವರಲ್ಲಿ ಹೀಗೆ ಒಳಪಂಗಡಗಳು ಹುಟ್ಟಿಕೊಳ್ಳಲು ಪ್ರಾಯಶಃ ಭೌಗೋಳಿಕ ಹಾಗೂ ಸಾಮಾಜಿಕ ಭಿನ್ನತೆಯೇ ಕಾರಣವಿರಬೇಕು. ಈಗಿನಂತೆ ಸಂಪರ್ಕ ಸಾಧನಗಳ ಸೌಲಭ್ಯವಿರದಿದ್ದ ಕಾಲದಲ್ಲಿ ಮೂಲತಃ ಒಂದೇ ಜಾತಿಯವರಾಗಿದ್ದ ಈ ಜನರ ನಡುವೆ ಪರಸ್ಪರ ಸಂಪರ್ಕ ಸಾಧ್ಯವಾಗದಿದ್ದುದರಿಂದ ತಾವು ಎಲ್ಲೆಲ್ಲಿ ನೆಲೆಸಿದ್ದರೋ ಆಯಾಯ ಪ್ರದೇಶಕ್ಕನುಗುಣವಾದ ಜೀವನ ಮತ್ತು ಸಂಸ್ಕೃತಿಯನ್ನು ಇವರು ರೂಢಿಸಿಕೊಂಡಿರುತ್ತಾರೆ. ಅಲ್ಲದೆ ಕಾಲಕಾಲಕ್ಕೆ ಆಯಾ ಪ್ರದೇಶದಲ್ಲಿ ಪ್ರಬಲವಾಗಿದ್ದ, ವೈಷ್ಣವ ಮತ್ತು ವೀರಶೈವ ಮತಗಳ ಪ್ರಭಾವವೂ ಇವರ ಮೇಲೆ ಆಗಿರುತ್ತದೆ. ದಕ್ಷಿಣ ಕರ್ನಾಟಕದ ಗಾಣಿಗರ ಮೇಲೆ ವೈಷ್ಣವ ಧರ್ಮದ ಪ್ರಬಾವ ಅಧಿಕವಾಗಿ ಕಂಡುಬರುತ್ತದೆ. ಹಾಗೂ ಉತ್ತರ ಕರ್ನಾಟಕದ ಗಾಣಿಗರ ಮೇಲೆ ವೀರಶೈವ ಧರ್ಮದ ಪ್ರಭಾವ ಕಂಡುಬರುತ್ತದೆ. ದಕ್ಷಿಣ ಕರ್ನಾಟಕ ಹಾಗೂ ಉತ್ತರ ಕರ್ನಾಟಕದಲ್ಲಿರುವ ಗಾಣಿಗರಿಗೆ ವ್ಯತ್ಯಾಸವಿರುವುದು ಆಹಾರ ಪದ್ಧತಿ, ಆಚರಣೆ ಪದ್ಧತಿ ಮತ್ತು ವೃತ್ತಿಯಲ್ಲಿ.

ಗಾಣಿಗ ಸಮುದಾಯದಲ್ಲಿ ೧. ಕರಿಕುಲ ಗಾಣಿಗ, ೨. ಸಜ್ಜನ ಗಾಣಿಗ, ೩. ಪಂಚಮ ಗಾಣಿಗ, ೪. ತೇಲಿ ಗಾಣಿಗ, ೫. ಜ್ಯೋತಿಪಣ ಗಾಣಿಗ, ೬. ದೇವ ಗಾಣಿಗ, ೭. ಶೆಟ್ಟಿ ಗಾಣಿಗ, ೮. ವಾಣಿಯ ಗಾಣಿಗ, ೯. ಚೆಟ್ಟಿಯಾರ ಗಾಣಿಗ, ೧೦. ಗಂಡ್ಲರು, ೧೧. ಸಾಹೂ ಗಾಣಿಗ ಇವು ಪ್ರಮುಖ ಒಳಪಂಗಡಗಳಾಗಿವೆ.

ಅಧ್ಯಯನದ ದೃಷ್ಟಿಯಿಂದ ಲಿಂಗಾಯತ ಗಾಣಿಗ ಸಮುದಾಯದ ಒಂದೊಂದು ಪಂಗಡಗಳನ್ನು ಪ್ರತ್ಯೇಕವಾಗಿಯೇ ಇವೆ. ಅವುಗಳೆಂದರೆ:

೧. **ಕರಿಕುಲ ಗಾಣಿಗ:** ಮುಂಬಾಯಿ ಕರ್ನಾಟಕ ಮತ್ತು ಹೈದ್ರಾಬಾದ್ ಕರ್ನಾಟಕದಲ್ಲಿ ಬಹಳಷ್ಟು

ಜನ ಇರುತ್ತಾರೆ. ಅದರಲ್ಲೂ ವಿಜಾಪೂರ, ಬಾಗಲಕೋಟೆ, ಕೊಪ್ಪಳ, ಬಳ್ಳಾರಿಯಲ್ಲಿ ಇರುತ್ತಾರೆ. ಇವರು ಲಿಂಗ ಧರಿಸುವರು.

**೨. ಸಜ್ಜನ ಗಾಣಿಗ:** ಹೈದ್ರಾಬಾದ್ ಕರ್ನಾಟಕ ಮತ್ತು ಉತ್ತರ ಕರ್ನಾಟಕದಲ್ಲಿ ನೆಲೆಸಿದದ್ದಾರೆ. ಇವರ ಜಾತಿ, ಕಲ್ಯಾಣ ಪಟ್ಟಣದಲ್ಲಿ ಉದ್ಭವಿಸಿತೆಂದು ಬಸವೇಶ್ವರರಿಂದ ಸಂಘಟಿತರಾದವೆಂದು ಹೇಳುತ್ತಾರೆ.

**೩. ಪಂಚಮ ಗಾಣಿಗ:**

**೪. ತೇಲಿ ಗಾಣಿಗ:** ಇವರು ತಮಿಳು ನಾಡಿನಿಂದ ಬಂದವರು. ಕರ್ನಾಟಕದಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ.

**೫. ಜ್ಯೋತಿಪಣ ಗಾಣಿಗ:** ಹಾಸನ, ಮಂಡ್ಯ, ಮೈಸೂರು, ಚಿಕ್ಕಮಗಳೂರು ಹಾಗೂ ಶಿವಮೊಗ್ಗ ಜಿಲ್ಲೆಗಳಲ್ಲಿ ವಾಸಮಾಡಿರುತ್ತಾರೆ. ಜನಿವಾರ, ಲಿಂಗ ಧರಿಸುವುದಿಲ್ಲ.[೨]

ಗಾಣಿಗರಲ್ಲಿ ರೂಢಿ ಸಂಪ್ರದಾಯಗಳನ್ನು ಆಳವಾಗಿ ಅಭ್ಯಾಸಿಸಿದಾಗ ಇವರು ಮೂಲದಲ್ಲಿ ಒಂದೇ ಸಮುದಾಯದವರಾಗಿರಬಹುದೇ? ಎನ್ನುವ ಸಂಶಯವನ್ನು ಹುಟ್ಟಿಸುವಂತಹದ್ದಾಗಿದೆ. ಇವರು ತಮ್ಮ ಉಪಜೀವನಕ್ಕಾಗಿ ಬೇರೆ ಬೇರೆ ವೃತ್ತಿಗಳನ್ನು ಅವಲಂಬಿಸಿಕೊಂಡು ವಿವಿಧ ಪಂಗಡಗಳಾಗಿ ವಿಭಜನೆಗೊಂಡಿರಬೇಕು ಎಂಬುದು ಸ್ಪಷ್ಟವಾಗುತ್ತದೆ. ಇವರಲ್ಲಿ ಒಂದು ಪಂಗಡದವರು ಮತ್ತೊಂದು ಪಂಗಡದವರೊಡನೆ ಕೊಡುಕೊಳ್ಳುವ ವ್ಯವಹಾರಗಳನ್ನು ಮಾಡುವುದಿಲ್ಲ. ತಮ್ಮಲ್ಲಿಯೇ ಮೇಲು ಕೀಳು ಎಂಬ ತಾರತಮ್ಯ ಇರುತ್ತದೆ.

ಈ ಮೇಲಿನ ಎಲ್ಲಾ ಒಳ ತಿರುಳನ್ನು ಕೇಂದ್ರೀಕರಿಸಿ ಒಂದು ಸ್ಪಷ್ಟತೆಗೆ ಬರಬಹುದಾಗಿದೆ. ಏನೆಂದರೆ ಈ ಸಮುದಯದ ಮೂಲ ಪುರುಷನೊಬ್ಬನಿಂದ ಗಾಣಿಗ ಕುಲ ಸೃಷ್ಟಿಯಾಗಿ ತನ್ನ ವಿಕಾಸದ ಹಾದಿಯನ್ನು ಹಿಡಿದಿರಬಹುದು. ಅವನು ಗಾಣದ ವೃತ್ತಿಯನ್ನು ಅವಲಂಬಿಸಿ ಅದನ್ನೇ ಆರಾಧಿಸಿಕೊಂಡು ತನ್ನ ಬದುಕನ್ನು ಕಂಡುಕೊಂಡಿರುತ್ತಾನೆ. ಈ ಹಿನ್ನೆಲೆಯಲ್ಲಿ ಅವನ ಸಂತತಿ 'ಗಾಣಿಗ' ಅನ್ನುವ ಹೆಸರಿನಿಂದ ಉಳಿದುಕೊಂಡು ಬಂದಿರಬಹುದಾಗಿದೆ. ಇಂದು ಕೂಡ ಬೇರೆಯವರನ್ನು ಎಷ್ಟು ಬೇಕು ಅಷ್ಟು ಮಾತ್ರ ಸಂಬಂಧವಿಟ್ಟುಕೊಂಡು ಪ್ರತ್ಯೇಕವಾಗಿಯೇ ಸಮುದಾಯ ಜೀವನ ಸವೆಸುತ್ತಿರುವುದನ್ನು ಕಾಣಬಹುದಾಗಿದೆ.

### ೪.೩. ಗಾಣಿಗರ ಬೆಡಗುಗಳು

ಸಮುದಾಯದಲ್ಲಿರುವ ಕೆಲವು ವಿಭಜನೆಗಳನ್ನು ಪಂಗಡಗಳೆಂದು, ಈ ಒಂದೊಂದು ಪಂಗಡದಲ್ಲಿರುವ ವಿಶಿಷ್ಟ ಉಪಘಟಕಗಳನ್ನು ಬೆಡಗುಗಳೆಂದು ಕರೆಯುತ್ತಾರೆ. ಒಂದೇ ಪಂಗಡದಲ್ಲಿ ಈ ಬಗೆಯ ಬೆಡಗುಗಳ ಹುಟ್ಟಿಗೆ ಕಾರಣವೇನು ಎಂಬ ಕುರಿತು ಹೇಳಲು ಬಹುಶಃ ಭೌಗೋಳಿಕವಾಗಿ ಬೇರೆ ಬೇರೆ ಪ್ರಾಂತ್ಯಗಳಲ್ಲಿ ವಾಸಿಸುವ ಸಮುದಾಯಗಳಲ್ಲಿ ಈ ರೀತಿಯ ಪಂಗಡ, ಬೆಡಗು ಸೃಷ್ಟಿಗೆ ಕಾರಣವಾಗಿದೆ. ಗಾಣಿಗರಲ್ಲಿಯೂ ಕೆಲವು ಬೆಡಗುಗಳಿವೆ. ಅವುಗಳನ್ನು ಕೆಳಗೆ ವಿಭಾಗೀಕರಿಸಲಾಗಿದೆ. ಅವುಗಳೆಂದರೆ

೧. ಕೆಂಬೋಡ್ಯಾರ, ೨. ಜೋಡು ಗಡಗ, ೩. ಐದು ಗಡಗ

ಅ. ಗಾಣಿಗರ ಮೊತ್ತ ಮೂಲ ವಿಭಾಗ ಹೀಗಿವೆ:

೧. ಮುನ್ನು ನೊಲ್ಲು

೨. ಸನಕ ನೊಲ್ಲು

೩. ಶಂಭ ನೊಲ್ಲು

೪. ಸಾವಿತ್ರಿ ನೊಲ್ಲು

೫. ಗುರುನೊಲ್ಲು

೬. ವಿಲ್ಯನೊಲ್ಲು

೭. ಬೋಯಾ

೮. ಭದ್ರ

೯. ಈಶ್ವರ

೧೦. ಶಿವ

೧೧. ಲಿಂಗ

೧೨. ಥಮಕ

೧೩. ಚಂದ್ರ

೧೪. ಧನಕ

೧೫. ಕ್ಷೇಮ ಇತ್ಯಾದಿ.

ಬ. ಗಾಣಿಗರ ಕೆಲವು ಕುಲಗೋತ್ರಗಳು ಹೀಗಿವೆ:

೧. ಬ್ರಹ್ಮೇಂದ್ರ

೨. ಪುರುಷೇಂದ್ರ

೩. ಉಳೇಂದ್ರ

೪. ಆರೇಂದ್ರ

೫. ನಗೇಂದ್ರ

೬. ಚಂದ್ರಮೌಳಿ

೭. ಕನ್ನೇಂದ್ರ

೮. ದೇವೇಂದ್ರ

೯. ಕೊಮರೇಂದ್ರ

೧೦. ಮಚ್ಚೇಂದ್ರ ಇತ್ಯಾದಿ[1]

## ೪.೪. ಗಾಣಿಗರ ರಕ್ತಸಂಬಂಧ

ಗಾಣಿಗರ ಗುಂಪು ಬೆಡಗುಗಳಲ್ಲಿ ಒಂದೇ ಬೆಡಗಿಗೆ ಸೇರುವವರು ದಾಯಾದಿಗಳಾಗುತ್ತಾರೆ. ಅಣ್ಣ ತಮ್ಮಂದಿರ ಮತ್ತು ಅಕ್ಕತಂಗಿಯರ ಬೆಡಗುಗಳ ನಡುವೆ ವೈವಾಹಿಕ ಸಂಬಂಧ ನಡೆಯುವುದಿಲ್ಲ. ಬೆಡಗುಗಳು ಭಿನ್ನ ಭಿನ್ನವಾಗಿರುವವರ ನಡುವೆ ವೈವಾಹಿಕ ಸಂಬಂಧವಿರುತ್ತದೆ. ಒಂದೇ ಬೆಡಗಿನವರು ಹೆಚ್ಚಾಗಿ ಹತ್ತಿರದ ರಕ್ತ ಸಂಬಂಧಿಗಳಾಗಿರುತ್ತಾರೆ. ಇದರಿಂದ ಒಂದೇ ರಕ್ತದವರು ವಿವಾಹವಾದರೆ ದೈಹಿಕ ತೊಂದರೆಯಾಗುತ್ತದೆಂಬ ವೈಜ್ಞನಿಕ ತಿಳಿವು ಇವರಿಗಿದೆ. ಕಾರಣ ಬೀಗರು ಬೆಡಗುಗಳೊಂದಿಗೆ ವಿವಾಹ ಸಂಬಂಧ ಏರ್ಪಡಿಸಿಕೊಳ್ಳುತ್ತಾರೆ.

## ೪.೫. ನ್ಯಾಯ ಪದ್ಧತಿ

ಗಾಣಿಗರಲ್ಲಿ ಯಾವುದೇ ಕೌಟುಂಬಿಕ ಸಮಸ್ಯೆ ಬಂದರೆ ಅವುಗಳನ್ನು ತಮ್ಮ ತಮ್ಮೊಳಗೆ ಬಗೆಹರಿಸಿಕೊಳ್ಳುತ್ತಾರೆ. ಸಮುದಾಯದ ಸಮಸ್ಯೆ ಕುರಿತಂತೆ. ಇವರು ಸಮುದಾಯದ ಒಬ್ಬ ಹಿರಿಯ ಮುಖಂಡನನ್ನು ಜಾತಿಯ ಹಿರಿಯರೆಲ್ಲ ಸೇರಿ, ಆಯ್ಕೆಮಾಡುತ್ತಾರೆ. ಈತನನ್ನು ಯಜಮಾನ, ಬುದ್ಧಿವಂತ, ಪಟೇಲ, ಗೌಡ, ದೊಡ್ಡ ಮನುಷ್ಯ ಎಂದೆಲ್ಲಾ ಪ್ರದೇಶಕ್ಕನುಗುಣವಾಗಿ ಕರೆಯುವರು. ಕೆಲವು ಪ್ರದೇಶಗಳಲ್ಲಿ ಮೂರು ಮಂದಿ ಇಲ್ಲವೇ ಐದು ಜನ ಜಾತಿಯ ಮುಖಂಡರನ್ನಾಗಿ ಆಯ್ಕೆ ಮಾಡುತ್ತಾರೆ. ಸಮುದಾಯದ ವಿಷಯ ಕುರಿತಂತೆ ನಿರ್ಣಯ ಮಾಡುವಾಗ ಜಾತಿಯವರೆಲ್ಲರೂ ಆಯ್ಕೆ ಮಾಡಿದ ಸ್ಥಳದಲ್ಲಿ ಸೇರುವರು. ಜಾತಿಯ ಆಡಳಿತವನ್ನು ನಡೆಸುವವರು ಇವರೇ ಸಮುದಾಯದ ಒಳಜಗಳಗಳನ್ನು ಇವರೇ ಬಗೆಹರಿಸುತ್ತಾರೆ. ಹಿಂದಿನ ಕಾಲದಲ್ಲಿ ತಪ್ಪಿತಸ್ಥರಿಗೆ ದಂಡ ವಿಧಿಸುತ್ತಿದ್ದರು. ಆದರೆ, ಇತ್ತೀಚೆಗೆ ದಂಡ ವಿಧಿಸುವ ಪದ್ಧತಿ ಕಡಿಮೆಯಾಗಿದೆ. ಹಿಂದಿನ ಕಾಲದಲ್ಲಿ ಜಾತಿಯಿಂದ ಬಹಿಷ್ಕಾರ ಹಾಕುವ ಪದ್ಧತಿಯು ಈಗೂಲ ಈ ಸಮುದಾಯದಲ್ಲಿ ಮುಂದುವರಿದಿದೆ. ಜಾತಿ ಬಹಿಷ್ಕಾರಕ್ಕೆ ಒಳಗಾದವರು ಸಮುದಾಯದ ಯಾವುದೇ ಶುಭ ಅಶುಭ ಕಾರ್ಯಕ್ರಮಗಳಲ್ಲಿ ಎಲ್ಲರಂತೆ ಭಾಗವಹಿಸುವಂತಿಲ್ಲ. ಈ ಸಮುದಾಯದವರು ತಮ್ಮ ಜಾತಿಯ ಒಳಜಗಳಗಳ ಪಂಚಾಯಿತಿಯನ್ನು ಮಾಡುವಾಗ ಇತರೆ ಸಮುದಾಯದವರನ್ನು ಸೇರಿಸಿಕೊಳ್ಳುವುದಿಲ್ಲ. ಒಂದು ವೇಳೆ ಜಾತಿಯ ಒಳಜಗಳಗಳ ಪಂಚಾಯ್ತಿಯು ಬಗೆಹರಿಯದಿದ್ದರೆ, ಈ ಪಂಚಾಯ್ತಿಯನ್ನು ಸಮುದಾಯದ ತಾಲೂಕು ಇಲ್ಲವೇ ಜಿಲ್ಲಾ ಮಟ್ಟದ ಮುಖಂಡರಿಗೆ ವಿಷಯವನ್ನು ಹೇಳಿ ಒಪ್ಪಿಸುವುದುಂಟು.

ಸಮುದಾಯದ ಯಾವುದೇ ಕಾರ್ಯಕ್ರಮಗಳು ಜಾತಿಯ ಮುಖಂಡರ ಸಮ್ಮುಖದಲ್ಲಿಯೇ ನಡೆಯುತ್ತವೆ. ಜಾತ್ರೆ, ಹಬ್ಬ, ಹುಟ್ಟು ಸಾವು ಮುಂತಾದ ಅನೇಕ ಕಾರ್ಯಕ್ರಮಗಳನ್ನು ಮುಖಂಡರು ಮತ್ತು ಸಮುದಾಯದವರ ಜೊತೆಗೂಡಿ ನಡೆಸುವರು. ಜಾತಿಯ ಯಜಮಾನ ಸಮುದಾಯದ ಯುವಕರನ್ನು ಮತ್ತು ಯಜಮಾನರನ್ನು ನಿರ್ದಿಷ್ಟವಾದ ಕೆಲಸಗಳಿಗೆಂದು ನಿಯಮಿಸಿ ಅವರಿಗೆ ಜವಾಬ್ದಾರಿಯನ್ನು ವಹಿಸುವನು. ಕಾರ್ಯಕ್ರಮ ಮುಗಿದ ಮೇಲೆ ಎಲ್ಲಾ ಲೆಕ್ಕಾಚಾರವನ್ನು ಎಲ್ಲರ ಸಮ್ಮುಖದಲ್ಲಿ ಮಾಡುತ್ತಾರೆ. ಮದುವೆಯಂತಹ ಮಂಗಲಕಾರ್ಯಗಳಲ್ಲಿ ದೈವದ ಪರವಾಗಿ ಜಾತಿಯ ಮುಖಂಡರು ಪರ ಊರಿನ ದೈವದವರ ಸಮ್ಮುಖದಲ್ಲಿ ಮಾತುಕತೆ ಮಾಡಿ ದೈವದ ಹಣವನ್ನು ಕಟ್ಟಿಸಿಕೊಳ್ಳುವರು. ಕನ್ಯೆ ನಿಶ್ಚಿಯ ಮಾಡುವಾಗ ಉಭಯ ಪಕ್ಷದ

ಮುಖಂಡರು ಎರಡು ಬೇರೆ ಬೇರೆ ಬೆಡಗಿನವರ ಸಮ್ಮುಖದಲ್ಲಿ ಬೀಗತನ ಮಾಡುತ್ತಾರೆ. ಬೀಗರು ಎರಡೂ ಕುಟುಂಬಗಳ ಬೆಡಗು, ಗೋತ್ರ ಮತ್ತು ಕೊಡುಕೊಳ್ಳಿ ವ್ಯಾಪಾರವನ್ನು ಕುರಿತಂತೆ ಮತ್ತೊಮ್ಮೆ ವಿಚಾರಿಸಿ ಉಭಯ ಪಕ್ಷದವರ ಒಪ್ಪಿಗೆಯನ್ನು ಪಡೆದು ಮುಂದುವರೆಯುವರು. ಮೊದಲು ದೈವದ ಮುಖಂಡರಿಗೆ ವೀಳ್ಯವನ್ನು ಕೊಟ್ಟು ನಂತರ ಇತರರಿಗೆ ಕೊಡುವರು. ಇತ್ತೀಚೆಗೆ ಮದುವೆಯ ಸಂದರ್ಭದಲ್ಲಿ ದೈವದ ಊಟ ಹಾಕಿಸುವುದರ ಬದಲು ಇಂತಿಷ್ಟು ದುಡ್ಡು ಎಂದು ನಿಗದಿ ಮಾಡಲಾಗಿದೆ. ಮದುವೆಯ ಸಂದರ್ಭದಲ್ಲಿ ಮದುವೆಯ ಗಂಡು ಮತ್ತು ಹೆಣ್ಣಿನ ಮನೆಯವರಿಗೆ ಮಂಗಲ ದ್ರವ್ಯಗಳನ್ನು ಮತ್ತು ಸಾಂಪ್ರದಾಯಿಕ ವಸ್ತುಗಳನ್ನು ಕೆಲವು ಪ್ರದೇಶಗಳಲ್ಲಿ ಮುಖಂಡನ ಸಮ್ಮುಖದಲ್ಲಿಯೇ ತಲುಪಿಸುವರು. ಮದುವೆಯ ನಂತರ ಉಭಯ ಪಕ್ಷದವರ ನಡುವೆ ಬಂದ ಯಾವುದೇ ತರಹದ ವೈ ಮನಸ್ಸು ಮತ್ತು ಜಗಳಗಳನ್ನು ಎರಡು ದೈವದ ಸಮ್ಮುಖದಲ್ಲಿ ಜಾತಿಯ ಯಜಮಾನರು ತೀರ್ಮಾನಿಸುತ್ತಾರೆ. ದೈವದ ತೀರ್ಮಾನಕ್ಕೆ ಜಾತಿಯ ಸದಸ್ಯರು ತಲೆಬಾಗಬೇಕು.

ಇವರ ಕುಲಕಸುಬು ಮತ್ತು ಕೃಷಿಗೆ ಸಂಬಂಧಿಸಿದ ಯಾವುದೇ ಒಳಜಗಳಗಳನ್ನು ಸೂಕ್ಷ್ಮವಾಗಿ ಒಬ್ಬರಿಗೊಬ್ಬರು ಸೇರಿ ಬಗೆಹರಿಸಿಕೊಳ್ಳುವರು. ಹೊರಗಿನವರಿಂದ ತೊಂದರೆ ಬಂದಾಗ ಜಾತಿಯವರೆಲ್ಲ ಒಂದಾಗಿ ಸಮಸ್ಯೆಗೆ ಪರಿಹಾರ ಕಂಡುಕೊಳ್ಳುವರು. ಹೆಚ್ಚಾಗಿ ಇವರು ಜಗಳಗಳನ್ನು ಮಾಡುವುದಿಲ್ಲ. ಒಂದು ವೇಳೆ ಮಾಡಿದರೆ ರಾಜಿಯಿಂದಲೇ ಬಗೆಹರಿಸುವರು. ಕಾನೂನಿನ ಪ್ರಕಾರ ಯಾವುದೇ ರೀತಿಯ ಕೇಸು ಕಟ್ಟಳೆಗಳಿಗೆ ಹೋಗುವುದಿಲ್ಲ. ಈ ಹಿಂದೆ ಗಾಣಿಗರಲ್ಲಿ ಬಾಲ್ಯ ವಿವಾಹ ಪದ್ಧತಿ ಇತ್ತು. ಆದರೆ ಇತ್ತೀಚೆಗೆ ಈ ಪದದ್ಧತಿಯು ತೀರವಿರಳವಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ಇಲ್ಲ. ಗಾಣಿಗರಲ್ಲಿ ಮರು ವಿವಾಹದ ಪದ್ಧತಿ ಜಾರಿಯಲ್ಲಿದೆ. ಹೆಂಡತಿ ಸತ್ತರೆ ಗಂಡ ಮತ್ತೆ ಶಾಸ್ತ್ರೋಕ್ತವಾಗಿ ಕನ್ಯೆಯನ್ನು ಮದುವೆಯಾಗಬಹುದು. ಕೆಲವು ಸಂದರ್ಭದಲ್ಲಿ ವಿಧವೆಯ ಜೊತೆಗೆ ಕೂಡಿಕೆ ಶಾಸ್ತ್ರವನ್ನು ಮಾಡಿಕೊಳ್ಳಬಹುದು. ಆದರೆ ಗಂಡ ಸತ್ತ ವಿಧವೆ ಖೋರ ವರನನ್ನು ಮದುವೆಯಾಗುವ ಹಾಗಿಲ್ಲ. ಪುರುಷನು ತಾನು ತನಗೆ ಕೊಟ್ಟುಕೊಂಡಿರುವ ಪ್ರಾಧಾನ್ಯತೆಯು ಇತರೆ ಕೆಲವು ಸಮುದಾಯಗಳಂತೆ ಇಲ್ಲಿಯೂ ಇರುತ್ತದೆ.[೪]

ಗಾಣಿಗರಲ್ಲಿ ಕೂಡಿಕೆಯ ಮದುವೆಯನ್ನು 'ಖೋರಾ' ಮದುವೆಯಂತೆ ಮುತ್ತೈದೆಯರೆಲ್ಲ ಸೇರಿ ಮಾಡುವುದಿಲ್ಲ. ವಿಧವೆಯರು-ವಿಧುರರು ಮತ್ತು ಕೂಡಿಕಿ ಮದುವೆಯಾದವರು ಇಂತಹ ಮದುವೆಯಲ್ಲಿ ಭಾಗವಹಿಸುವರು. ಪ್ರದೇಶಕ್ಕನುಸಾರವಾಗಿ ಕೆಲವು ಕಡೆ ದೇವಸ್ಥಾನದಲ್ಲಿ, ಇಲ್ಲವೇ ಒಂದು ಪ್ರತ್ಯೇಕ ಕತ್ತಲು ಕೋಣೆಯಲ್ಲಿ ಕೂಡಿಕೆಯ ಶಾಸ್ತ್ರವನ್ನು ಮಾಡಿ ಮುಗಿಸುತ್ತಾರೆ. ಇವರಲ್ಲಿ ನಿಷಿದ್ಧ. ಕೆಲವೊಂದು ಪ್ರದೇಶದಲ್ಲಿ ಇದರ ಮುಖಂಡತ್ವವನ್ನು ಜಾತಿಯ ಮುಖಂಡನೇ ವಹಿಸುವನು. ಸಾವಿನ ಸಂದರ್ಭದಲ್ಲಿ ಹೆಂಡತಿಯಿಂದ ಋಣದ ವೀಳ್ಯವನ್ನು ತವರಿನವರಿಗೆ ಸ್ಥಳೀಯ ಜಾತಿ ಮುಖಂಡನ ಸಮ್ಮುಖದಲ್ಲಿ ಕೊಡಿಸುವರು. ಸ್ಮಶಾನದಲ್ಲಿ ಮಗನಿಗೆ ತಂದೆಯ ಯಜಮಾನಿಕೆಯ ಪೇಟವನ್ನು ಮುಖಂಡನೇ ಇರಿಸುತ್ತಾನೆ. ಗಾಣಿಗರ ಅವಿಭಕ್ತ ಕುಟುಂಬಗಳು ವಿಭಜನೆಯಾಗುವ ಬೇರೆಯಾಗುವ ಸಂದರ್ಭದಲ್ಲಿ ಆಸ್ತಿ ಹಂಚಿಕೆಯಲ್ಲಿ ನ್ಯಾಯ

ನಿರ್ಣಯವನ್ನು ಸಾಧ್ಯವಾದರೆ ತಾವೇ ಬಗೆಹರಿಸಿಕೊಳ್ಳುವರು. ಜಾತಿಯ ಮತ್ತು ದೈವ ಮುಖಂಡರ ಸಮ್ಮುಖದಲ್ಲಿ ಆಗುವುದಾದರೆ, ವೃದ್ಧ ತಂದೆ ತಾಯಿ ಮತ್ತು ಅವಲಂಬಿತರ ಜೀವನೋಪಾಯವನ್ನು ಗಮನದಲ್ಲಿರಿಸಿಕೊಂಡು ಪಂಚಾಯಿತಿ ಮಾಡುತ್ತಾರೆ. ಮಕ್ಕಳಾವನೋಪಾಯವನ್ನು ಗಮನದಲ್ಲಿರಿಸಿಕೊಂಡು ಪಂಚಾಯಿತಿ ಮಾಡುತ್ತಾರೆ. ಮಕ್ಕಳಾದವರು ವಯಸ್ಸಾದ ತಂದೆ ತಾಯಿಯರನ್ನು ಸಾಕಿಸಲುಹುವುದು. ಒಂದು ಸಾಮಾಜಿಕ ಜವಾಬ್ದಾರಿಯಾಗಿರುತ್ತದೆ. ಕೆಲವೊಮ್ಮೆ ಇವರಿಗೆ ಜೀವನೋಪಾಯಕ್ಕೆ ಇಂತಿಷ್ಟು ಭೂಮಿ ಮತ್ತು ದುಡ್ಡುಕೊಡಬೇಕೆಂದು ತೀರ್ಮಾನ ಮಾಡುವರು. ಹೀಗೆ ವಿವಿಧ ಸಂದರ್ಭಗಳಲ್ಲಿ ಗಾಣಿಗ ಸಮುದಾಯದ ಕೌಟುಂಬಿಕ ವ್ಯವಸ್ಥೆ ಮತ್ತು ನ್ಯಾಯ ನಿರ್ಣಯವು ಇರುವುದಾಗಿ ಸಮುದಾಯದ ಹಿರಿಯರು ಹೇಳುವರು. ಅಸಹಾಯಕ ಮತ್ತು ಅಸಾಧ್ಯವಾದ ಸಂದರ್ಭದಲ್ಲಿ ಮಾತ್ರ ಇವರು ಕಾನೂನಿನ ಮೊರೆ ಹೋಗುತ್ತಾರೆ. ಹೆಚ್ಚಾಗಿ ಪ್ರತಿಯೊಂದು ಗ್ರಾಮದ ದೈವಕ್ಕೆ ಸಂಬಂಧ ಪಟ್ಟ ಹಿರಿಯರಿಗೆ ಮತ್ತು ಯಜಮಾನರಿಗೆ ಜಾತಿಯ ಎಲ್ಲಾ ವಯಸ್ಸಿನ ಮತ್ತು ಎಲ್ಲಾ ವರ್ಗದ ಜನರು ಸಹಕಾರ ಕೊಡುವರು. ಅಲ್ಲದೇ, ಜಾತಿಯ ಸಾಮಾಜಿಕ ನಿರ್ವಹಣೆಯಲ್ಲಿ ಪ್ರತಿಯೊಬ್ಬರ ಸಹಕಾರ ಇದ್ದು ಸುಲಲಿತವಾಗಿ ನಡೆಯುತ್ತದೆ ಎಂದು ಸಮುದಾಯದ ಹಿರಿಯ ಮುಖಂಡರು ಹೇಳುತ್ತಾರೆ.

### ೪.೬. ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಪ್ರಕ್ರಿಯೆ

ಬಹಿಷ್ಕಾರವೆಂದರೆ ಸಮಾಜದಿಂದ ಉಚ್ಚಾಟಿಸುವ ಪ್ರಕ್ರಿಯೆ ಎಂದರ್ಥ. ಈ ಪದ್ಧತಿ ಬಹು ಹಿಂದಿನಿಂದಲೂ ಇವರಲ್ಲಿ ಇದೆ. ಹಿಂದಿನ ಕಾಲದಲ್ಲಿ ಈ ಪದ್ಧತಿ ತುಂಬ ಕ್ರೂರವಾಗಿತ್ತು. ಆದರೆ ಇಂದು ಆಧುನಿಕತೆಯ ಪ್ರಭಾವದಿಂದ ಅಂತಹ ಪದ್ಧತಿ ಮಾಯವಾಗಿದೆ.

ಗಾಣಿಗ ಸಮುದಾಯವು ಮೂಲತಃ ವೀರಶೈವದ ಒಂದು ಪಂಗಡವಾಗಿರುವುದರಿಂದ ಇವರಲ್ಲಿ ಜಾತಿ ಬಹಿಷ್ಕಾರದ ಸ್ವರೂಪ ತುಂಬಾ ಕಠಿಣವಾಗಿ ಕಂಡುಬರುತ್ತದೆ. ಸಮುದಾಯದೊಳಗಿನ ವ್ಯಕ್ತಿಯೊಬ್ಬನಿಗೆ ಜಾತಿ ಬಹಿಷ್ಕಾರ ಹಾಕಲು ಅವು ತಾನೇ ರೂಪಿಸಿಕೊಂಡ ನಿಯಮಗಳು, ಕಟ್ಟುಪಾಡುಗಳು ಕಾರಣವಾಗಿರುತ್ತವೆ.

ಗಾಣಿಗರಲ್ಲಿ ಪ್ರಚಲಿತವಿರುವ ಅಂತಹ ಹಲವು ಕಾರಣಗಳು ಈ ಕೆಳಗಿನಂತಿವೆ:

೧. ಅನೈತಿಕ ಸಂಬಂಧ
೨. ಅಂತರ್ ಜಾತಿ ವೈವಾಹಿಕ ಸಂಬಂಧಗಳು
೩. ಅನ್ಯಜಾತಿ ವ್ಯಕ್ತಿಯಿಂದ ಅವಾಚ್ಯ ಶಬ್ದಗಳಿಂದ ಬೈಯಿಸಿಕೊಳ್ಳುವುದರಿಂದ
೪. ಚಪ್ಪಲಿಯಿಂದ ಹೊಡೆಸಿಕೊಳ್ಳುವ ಮತ್ತು ಮೈಯಿಗೆ ಸೋಕಿಸುವುದರಿಂದ
೫. ಸಮುದಾಯದ ಒಳಗೆ ನಡೆಯುವ ಯಾವುದೇ ಶುಭ ಮತ್ತು ಅಶುಭ ಕಾರ್ಯಗಳಿಗೆ ಗೈರು ಹಾಜರಿಯಾಗುವುದರಿಂದ
೬. ಆ ಸಮುದಾಯದವರು ಮಾಡಿದ ನಿಯಮ ಕಟ್ಟುಪಾಡುಗಳನ್ನು ಮೀರುವುದರಿಂದ.

ಗಾಣಿಗ ಸಮುದಾಯದೊಳಗಿನ ಯಾವುದೇ ವ್ಯಕ್ತಿ ತನ್ನ ಸಮುದಾಯಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡಲ್ಲಿ ಅಂತಹ ವ್ಯಕ್ತಿಯನ್ನು ಸಮುದಾಯದಿಂದ ದೂರವಿಟ್ಟು ಬಹಿಷ್ಕರಿಸಲಾಗುತ್ತದೆ. ಅಲ್ಲಿ ಬಹಿಷ್ಕೃತ ವ್ಯಕ್ತಿಯನ್ನು ಆತನ ರಕ್ತ ಸಂಬಂಧಗಳು ದೂರವಿಟ್ಟಲ್ಲಿ ಕೆಲವು ಸಂದರ್ಭಗಳಲ್ಲಿ ಸಮುದಾಯದೊಳಗೆ ಇರಬಹುದಾದರೂ ಬಹಿಷ್ಕಾರಗೊಂಡ ವ್ಯಕ್ತಿಯೊಂದಿಗೆ ಯಾವುದೇ ನೇರ ಸಂಬಂಧಗಳನ್ನು ಇಟ್ಟುಕೊಂಡಿದ್ದಲ್ಲಿ ಅಂಥವರೂ ಕೂಡ ಸಮುದಾಯದಿಂದ ಬಹಿಷ್ಕೃತರಾಗುತ್ತಾರೆ. ಇವರನ್ನು ಬಹಿಷ್ಕರಿಸುವ ಹಕ್ಕು ಆಯಾಯ ಊರಿನ ಗಾಣಿಗ ಸಮುದಾಯದ ಯಜಮಾನರಿಗೆ ಇರುತ್ತದೆ.

**ಅನೈತಿಕ ಸಂಬಂಧ:** ಗಾಣಿಗ ಸಮುದಾಯದ ಹೆಣ್ಣಿಗೆ ಮಾತ್ರ ಅನ್ವಯವಾಗುವ ವಿಚಾರವಾಗಿದ್ದು. ಆ ಸಮುದಾಯಕ್ಕೆ ಸೇರಿದ ಹೆಣ್ಣು ಪರಜಾತಿ ಪರ ಪುರುಷನೊಂದಿಗೆ ಅನೈತಿಕವಾದ ದೈಹಿಕ ಸಂಪರ್ಕ ಇಟ್ಟುಕೊಂಡಿದ್ದ ಪಕ್ಷದಲ್ಲಿ ಅಂತಹ ಹೆಣ್ಣನ್ನು ಜಾತಿಯಿಂದ ಬಹಿಷ್ಕರಿಸುವುದರೊಂದಿಗೆ ಹಲವು ಬಗೆಯ ಶಿಕ್ಷೆಗೆ ಗುರಿ ಮಾಡುವ ಉದಾಹರಣೆಗಳುಂಟು. ಪೂರ್ವದಲ್ಲಿ ಈ ರೀತಿಯ ಬಹಿಷ್ಕಾರ ಕ್ರಮ ಆ ಸಮುದಾಯದ ಪುರುಷ ವರ್ಗಕ್ಕೆ ಅನ್ವಯಿಸುತ್ತಿದ್ದಿತೆಂದು ತಿಳಿಸುತ್ತಾರೆ. ಆದರೆ ಇಂದು ಈ ರೀತಿಯ ಅಕ್ರಮ ಸಂಬಂಧಕ್ಕಾಗಿಯೇ ಬಹಿಷ್ಕರಿಸುವುದು ಮಹಿಳೆಯರಿಗೆ ಮಾತ್ರ ಸೀಮಿತವಾಗಿದೆ. ಆದರೆ ಗಾಣಿಗ ಸಮುದಾಯದೊಳಗಿನ ಬಿಗಿ ಕ್ರಮದಿಂದಾಗಿ ಇಂತಹ ಪ್ರಕರಣಗಳು ತೀರ ಕಡಿಮೆ ಎಂದೇ ಹೇಳಬಹುದು. ತನ್ನರಿವಿಗೆ ಬಾರದಂತೆ ಅನೈತಿಕ ಸಂಬಂಧವನ್ನಿಟ್ಟುಕೊಂಡು ಹೆಣ್ಣು ಬಹುಬೇಗನೆ ತಿಳುವಳಿಕೆಯಿಂದಾಗಿ ಅಂತಹ ಸಂಬಂಧಗಳಿಂದ ದೂರವಾದ ಪಕ್ಷದಲ್ಲಿ ಮಾನವೀಯ ದೃಷ್ಟಿಯಿಂದ ಗಾಣಿಗ ಯಜಮಾನರು (ಗುರುಗಳು) ತಮ್ಮ ಸಮುದಾಯಕ್ಕೆ ಸೇರಿದ ಗಂಡೊಂದನ್ನು ಮದುವೆಯಾಗಲು ಒಪ್ಪಿಗೆ ಕೊಟ್ಟ ಉದಾಹರಣೆಗಳಿವೆ. ಅನೈತಿಕ ಸಂಬಂಧಗಳನ್ನೇರ್ಪಡಿಸಿಕೊಂಡ ಹೆಣ್ಣನ್ನು ಸಮುದಾಯದಿಂದ ಬಹಿಷ್ಕರಿಸುವ ಪೂರ್ಣ ಹಕ್ಕನ್ನು ಆ ಸಮುದಾಯದ ಹಿರಿಯರು ಹೊಂದಿರುತ್ತಾರೆ.

**ಅಂತರ್‌ಜಾತಿ ವಿವಾಹದಿಂದ ಬಹಿಷ್ಕಾರ ನಿಯಮ**

ಗಾಣಿಗ ಸಮುದಾಯದೊಳಗಿನ ಯಾವುದೇ ಹೆಣ್ಣು ಅಥವಾ ಗಂಡು ಇನ್ನೊಂದು ಜಾತಿಯ ವ್ಯಕ್ತಿಯೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸಿದಲ್ಲಿ ಅಂತಹ ವ್ಯಕ್ತಿಯನ್ನು ಸಮುದಾಯದಿಂದ ಬಹಿಷ್ಕರಿಸಲಾಗುತ್ತದೆ. ಈ ಸಮುದಾಯದ ಗಂಡಸಾದರೆ ಅನ್ಯ ಜಾತಿ ಸಮುದಾಯದ ಹೆಣ್ಣನ್ನು ಮದುವೆಯಾಗುವಂತಿಲ್ಲ. ಒಂದು ವೇಳೆ ಮದುವೆಯಾದ ಪಕ್ಷದಲ್ಲಿ ಅಂತಹ ವ್ಯಕ್ತಿಯ (ಗಾಣಿಗ) ತನ್ನ ಸಮುದಾಯದೊಳಗೆ ಮರು ಪ್ರವೇಶ ಮಾಡಬೇಕಾಗಿದ್ದಲ್ಲಿ ತಾನು ಮದುವೆಯಾದ ಪರಜಾತಿ ಹೆಣ್ಣನ್ನು ನಿರಾಕರಿಸಬೇಕು. ಗಾಣಿಗರ ಸಮುದಾಯದೊಳಕ್ಕೆ ಪ್ರವೇಶವಿರುವುದಿಲ್ಲ. ವಿವಾಹವಾದ ಹೆಣ್ಣನ್ನು ಬಿಟ್ಟು ಮರಳಿ ಸಮುದಾಯದೊಳಗೆ ಪ್ರವೇಶ ಬಯಸುವ ಗಂಡು ಗಾಣಿಗ ಗುರುಗಳು ಅಥವಾ ಊರಿನ ಜಂಗಮರಿಂದ ದೀಕ್ಷೆ ಪಡೆದುಕೊಂಡು ತಪ್ಪಿಗೆ ದಂಡ ಕಟ್ಟಿ ನಂತರ ಗಾಣಿಗ ಯಜಮಾನ ಆತನನ್ನು ಶುದ್ಧಗೊಳಿಸಿ ಮರಳಿ ತನ್ನ ಸಮುದಾಯಕ್ಕೆ ಸೇರಿಸಿಕೊಳ್ಳುತ್ತಾನೆ. ಆದರೆ ಅನ್ಯ ಜಾತಿಯ ಗಂಡನ್ನು

ವಿವಾಹವಾದ ಗಾಣಿಗರ ಹೆಣ್ಣಿಗೆ ಈ ಅವಕಾಶ ಇರುವುದಿಲ್ಲವೆಂದು ಈ ಸಮುದಾಯದ ಹಿರಿಯ ವ್ಯಕ್ತಿಗಳನ್ನು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಭೇಟಿಯಾದಾಗ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

**ಶುಭ ಅಶುಭ ಕಾರ್ಯಗಳಿಗೆ ಹೋಗದಿದ್ದ ಪಕ್ಷದಲ್ಲಿ**

ಈ ಸಮುದಾಯದ ಪ್ರತಿಯೊಂದು ಗಾಣಿಗರಲ್ಲಿ ನಡೆಯುವ ಮದುವೆ, ಹುಟ್ಟು, ಸಾವುಗಳಂತಹ ಇಡೀ ಆ ದೈವಕ್ಕೆ ಸಂಬಂಧಿಸಿದಂತೆ ಆ ವ್ಯಾಪ್ತಿಯಲ್ಲಿ ನೆಲೆಸಿರುವ ಎಲ್ಲಾ ಗಾಣಿಗ ಸಮುದಾಯದವರು ಕಡ್ಡಾಯವಾಗಿ ಹಾಜರಾಗಬೇಕೆಂಬ ನಿಯಮ ಇವರಲ್ಲಿದೆ. ಆಕಸ್ಮಿಕವಾಗಿ ಮನೆಯ ಹಿರಿಯ ಹಾಜರಾಗಲು ತೊಂದರೆ ಇದ್ದಲ್ಲಿ ಮನೆಯ ಸದಸ್ಯನೊಬ್ಬನು ಹಾಜರಾಗಬೇಕು. ತಾನು ಬಾರದೆ ತನ್ನ ಕುಟುಂಬದ ಪ್ರತಿನಿಧಿಯನ್ನು ಕಳಿಸದೆ ಧಾರ್ಮಿಕ ಕಾರ್ಯಗಳಿಗೆ ಗೈರು ಹಾಜರಾದ ಪಕ್ಷದಲ್ಲಿ ಅಂತಹ ಕುಟುಂಬದ ಸದಸ್ಯರನ್ನು ಕುಲದಿಂದ ಬಹಿಷ್ಕರಿಸುವ ಹಕ್ಕನ್ನು ದೈವವು ಹೊಂದಿರುತ್ತದೆ. ದೈವದ ಪರವಾಗಿ ಹಿರಿಯ ಯಜಮಾನನು ಇಂಥ ವ್ಯಕ್ತಿಗಳನ್ನು ಕುಲದಿಂದ ಬಹಿಷ್ಕರಿಸುತ್ತಾನೆ. ಅಕಸ್ಮಾತ್ ಯಜಮಾನನು ಅಂತಹ ವ್ಯಕ್ತಿಯನ್ನು ನಿರ್ಲಕ್ಷ್ಯ ತೋರಿದಲ್ಲಿ ಇಡೀ ಆ ಸಮುದಾಯದವರೇ ಯಜಮಾನನ್ನು ತರಾಟೆಗೆ ತೆಗೆದುಕೊಳ್ಳುತ್ತದೆ.

ಈ ರೀತಿಯಾಗಿ ಬಹಿಷ್ಕಾರಕ್ಕೆ ಒಳಗಾದ ವ್ಯಕ್ತಿಯ ನಂತರ ದೈವದವರ, ಸ್ವಾಮಿಗಳ ಸಮ್ಮುಖದಲ್ಲಿ ತಪ್ಪೊಪ್ಪಿಕೊಂಡು ಇನ್ನೊಮ್ಮೆ ಅಂತಹ ಘಟನೆಗಳು ನಡೆಯದಂತೆ ಎಚ್ಚರ ವಹಿಸುತ್ತೇನೆಂದು ತಿಳಿಸಿದ ಬಳಿಕ ಆ ವ್ಯಕ್ತಿಗೆ ತಪ್ಪುದಂಡ ಹಾಕಿ ಶುದ್ಧೀಕರಣವನ್ನು ಮಾಡುವ ಪ್ರಕ್ರಿಯೆಗೆ ತೊಡಗಿಸಿ ಮರಳಿ ಕುಲಕ್ಕೆ ಸೇರಿಸಿಕೊಳ್ಳಲಾಗುವುದು. ನಂತರ ಆತನ ಇಡೀ ಕುಟುಂಬ ಆ ಕುಲದೊಳಗೆ ಸೇರುತ್ತದೆ. ಹೀಗೆ ಗಾಣಿಗ ಸಮುದಾಯದಲ್ಲಿ ಬಹಿಷ್ಕರಿಸುವ ಮತ್ತು ಮರಳಿ ಸೇರಿಸಿಕೊಳ್ಳುವ ಎರಡೂ ಪ್ರಕ್ರಿಯೆಗಳನ್ನು ಗಾಣಿಗ ಸಮುದಾಯದಲ್ಲಿ ಕಾಣಬಹುದಾಗಿದೆ.

**ಹೆಂಡತಿಯನ್ನು ಬಿಡುವುದು**

ಕುಟುಂಬದಲ್ಲಿ ನಡೆಯುವ ಆಂತರಿಕ ಕಲಹಗಳಲ್ಲಿ ಗಂಡ ಹೆಂಡತಿಯ ನಡುವೆ ಬಂದಂತಹ ವೈಮನಸ್ಸನ್ನು ಸಮುದಾಯದ ಹಿರಿಯರು ಬಗೆಹರಿಸಿ ಅವರಿಗೆ ತಿಳುವಳಿಕೆ ನೀಡಿ, ಕೂಡಿಬಾಳುವಂತೆ ಬುದ್ಧಿ ಹೇಳುತ್ತಾರೆ. ಇದಕ್ಕೆ ಒಪ್ಪದಿದದ್ದಲ್ಲಿ ಅವನಿಗೆ ಬಹಿಷ್ಕಾರ ಹಾಕಲಾಗುತ್ತದೆ. ಹೆಂಡತಿಯನ್ನು ಅವರು ಮನೆಗೆ ಕಳಿಸಿದರೆ, ತವರು ಮನೆಯವರು ಗಂಡನ ಮನೆಯವರನ್ನು ಬಹಿಷ್ಕಾರ ಹಾಕುತ್ತಾರೆ.

**ಮರುಮದುವೆಯಾಗುವುದು**

ಈ ಸಮುದಾಯದ ಯಾವುದೇ ಗಂಡು ಹೆಣ್ಣು ಮರು ಮದುವೆಯಾಗಲು ಅವಕಾಶವಿಲ್ಲ. ಆದರೆ ಮೊದಲ ಹೆಂಡತಿಗೆ ಮಕ್ಕಳಿಲ್ಲದಿದ್ದರೆ, ಅಥವಾ ರೋಗದಿಂದ ಕೂಡಿದರೆ ಅವಳ ಒಪ್ಪಿಗೆಯಂತೆ ಮರುಮದುವೆ ಯಾಗಬಹುದು. ಹೆಣ್ಣಿಗೆ ಗಂಡ ಸತ್ತಿದ್ದರೆ, ಹಿರಿಯರ ಸಲಹೆಯಂತೆ ಕೂಡುವಳಿ ಮಾಡಿಕೊಳ್ಳಬಹುದು. ಈ ಒಪ್ಪಿಗೆಯಲ್ಲದೆಯೇ ನಿಯಮವನ್ನು ಮೀರಿದರೆ ಕುಲದಿಂದ ಬಹಿಷ್ಕಾರ ಹಾಕುತ್ತಾರೆ.

**ಚಪ್ಪಲಿಯಿಂದ ಹೊಡೆಸಿಕೊಳ್ಳುವುದರಿಂದ ಮತ್ತು ಅವಾಚ್ಯ ಶಬ್ದಗಳಿಂದ ಬೈಯ್ಯಿಸಿಕೊಳ್ಳುವುದರಿಂದ ಬಹಿಷ್ಕಾರ**

ಈ ಸಮುದಾಯದಲ್ಲಿ ಯಾವುದೇ ಅನ್ಯಜಾತಿ ಧರ್ಮದ ವ್ಯಕ್ತಿಗಳಿಂದಾಗಲಿ ಇಲ್ಲವೇ ಸಮುದಾಯದೊಳಗೆ ತಮ್ಮ ತಮ್ಮೊಳಗೆ ಅವಾಚ್ಯ ಶಬ್ದಗಳನ್ನು ಬೈಯಿಸಿಕೊಳ್ಳುವುದಾಗಲಿ ಅಥವಾ ಚಪ್ಪಲಿಯಿಂದ ಹೊಡೆದಾಡಿಕೊಳ್ಳುವುದು ಗಾಣಿಗ ಸಮುದಾಯದಲ್ಲಿ ಬಹಿಷ್ಕಾರ ಯೋಗ್ಯವಾದ ಕ್ರಿಯೆ ಎಂದು ಭಾವಿಸಲಾಗುತ್ತದೆ. ಅಂತಹ ವ್ಯಕ್ತಿಗಳನ್ನು ಗಾಣಿಗ ಸಮುದಾಯವು ಬಹಿಷ್ಕರಿಸಿ ಆ ಸಮುದಾಯದಿಂದ ಹೊರಗೆ ಹಾಕುತ್ತಾರೆ. ಈ ರೀತಿಯಾಗಿ ಬಹಿಷ್ಕಾರಕ್ಕೆ ಒಳಗಾದ ಆ ವ್ಯಕ್ತಿಯನ್ನು ಮತ್ತೆ ಮರಳಿ ಸಮುದಾಯದೊಳಗೆ ಸೇರಿಸಿಕೊಳ್ಳಲು ಗಾಣಿಗರಲ್ಲಿ ಹಲವು ಆಚರಣೆಗಳುಂಟು.

ಬಳ್ಳಾರಿ, ಸಿರುಗುಪ್ಪ, ಹೊಸಪೇಟೆ, ಹೂವಿನ ಹಡಗಲಿ, ಹಗರಿಬೊಮ್ಮನಹಳ್ಳಿ, ಕೂಡ್ಲಿಗಿ, ಸಂಡೂರು ಈ ತಾಲ್ಲೂಕುಗಳಲ್ಲಿರುವ ಗಾಣಿಗ ಸಮುದಾಯಗಳಲ್ಲಿ ಮೇಲಿನ ರೀತಿಯಲ್ಲಿ ಬಹಿಷ್ಕರಿಸಲ್ಪಟ್ಟ ವ್ಯಕ್ತಿಯನ್ನು ಮರಳಿ ಆ ಸಮುದಾಯಕ್ಕೆ ಸೇರಿಸಿಕೊಳ್ಳುವ ಪದ್ಧತಿ ಎಲ್ಲಾ ಜನವರ್ಗಗಳಲ್ಲಿ ಇರುವಂತೆ ಇವರಲ್ಲಿಯೂ ರೂಢಿಗತವಾಗಿ ಬಂದಿದೆ.

ಚಪ್ಪಲಿಯಿಂದ ಹೊಡೆಸಿಕೊಂಡ, ಬಯ್ಯಿಸಿಕೊಂಡ ಮತ್ತು ಸೋಕಿಸಿಕೊಂಡ ವ್ಯಕ್ತಿಯನ್ನು ಆ ಕ್ಷಣದಿಂದಲೇ ಬಹಿಷ್ಕರಿಸಲಾಗುತ್ತದೆ. ಈ ರೀತಿ ಬಹಿಷ್ಕಾರಕ್ಕೆ ಒಳಪಟ್ಟ ವ್ಯಕ್ತಿಗೆ ತನ್ನ ಸ್ವಂತ ಮನೆಯೊಳಗೆ ಹೋಗುವ ಹಕ್ಕು ಸಹ ಇರುವುದಿಲ್ಲ. ಹಾಗೆ ಆ ಸಮುದಾಯದವರಾಗಲೀ ಆತನ ರಕ್ತ ಸಂಬಂಧಿಗಳಾಗಲಿ ಬಹಿಷ್ಕೃತ ವ್ಯಕ್ತಿಯನ್ನು ಮುಟ್ಟಿಸಿಕೊಳ್ಳುವಂತಿಲ್ಲ ಮತ್ತು ಗಾಣಿಗರು ಆಚರಿಸುವ ಧಾರ್ಮಿಕಾಚರಣೆಗೆ ಹೋಗುವಂತಿಲ್ಲ.

ಹೀಗೆ ಬಹಿಷ್ಕೃತಗೊಂಡ ವ್ಯಕ್ತಿಯನ್ನು ಮತ್ತೆ ಮರಳಿ ಸಮುದಾಯದೊಳಗೆ ಸೇರಿಸಿಕೊಳ್ಳಬೇಕಾದರೆ ಬಹಿಷ್ಕೃತಗೊಂಡ ವ್ಯಕ್ತಿಯಿಂದ ಹೇಗೆ ದೀಕ್ಷೆಯನ್ನು ನೀಡುವ ಸಂದರ್ಭದಲ್ಲಿ ಏನೆಲ್ಲಾ ಆಚರಣೆ ನಿಯಮಗಳನ್ನು ಆಚರಿಸಿದ್ದನೋ ಆ ಎಲ್ಲಾ ಆಚರಣೆಗಳನ್ನು ಆ ವ್ಯಕ್ತಿಗೆ ಮಾಡಿಸಿ ಅಂದರೆ ಜಂಗಮರಿಂದ ಹೊಸದಾಗಿ ದೀಕ್ಷೆ ಪಡೆದು ಜಂಗಮರ ಮೂಲಕ ಪ್ರಮಾಣ ಮಾಡಲಾಗುತ್ತದೆ. ನಂತರ ಆ ಸಮುದಾಯದ ಯಜಮಾನನಿಗೆ ತಮ್ಮ ದೈವದ ಹರಕೆಯಾಗಿ ತಪ್ಪು ದಂಡವನ್ನು ಆ ವ್ಯಕ್ತಿಯಿಂದ ಕಟ್ಟಿಸುತ್ತಾರೆ. ಈ ರೀತಿಯಾಗಿ ಆ ಸಮುದಾಯದ ಯಾವುದೇ ವ್ಯಕ್ತಿಯಾಗಲಿ ಜಂಗಮರ ಮೂಲಕ ಶುದ್ಧೀಕರಣ ಶಾಸ್ತ್ರವನ್ನು ಪಡೆದು ಆ ಸಮುದಾಯಕ್ಕೆ ಸೇರಿಸಿಕೊಳ್ಳಬೇಕೆಂದು ಗಾಣಿಗರ ಸಮುದಾಯದ ನಿಯಮ.

**ಅನೈತಿಕ ಸಂಬಂಧ**

ಮದುವೆಯನ್ನು ಮಾನ್ಯ ಮಾಡಿ ಈ ಸಮುದಾಯವು ಗೌರವ ನೀಡುತ್ತದೆ. ಈ ವೈವಾಹಿಕ ಸಂಬಂಧದ ಹೊರತಾಗಿ ಅನೈತಿಕ, ಅಕ್ರಮವಾಗಿ ಲೈಂಗಿಕ ಸಂಬಂಧವನ್ನು ಗಾಣಿಗರು ವಿರೋಧಿಸುತ್ತಾರೆ. ಅದು ಅಪರಾದವೆಂದು ಶಿಕ್ಷೆಯನ್ನು ನೀಡಿ ಊರಿನಿಂದ, ಕುಲದಿಂದ ಬಹಿಷ್ಕರಿಸುತ್ತಾರೆ. ತಮ್ಮ ಸಮುದಾಯದಲ್ಲಿ

ಅಥವಾ ಅನ್ಯ ಸಮುದಾಯದೊಂದಿಗೆ ಅನೈತಿಕ ಸಂಬಂಧ ಹೊಂದುವ ಯಾವುದೇ ಗಂಡು, ಹೆಣ್ಣು ಶಿಕ್ಷಾರ್ಹರು. ತಮ್ಮ ಸಮುದಾಯದಲ್ಲಿಯೇ ಅನೈತಿಕ ಸಂಬಂಧ ಹೊಂದಿದ್ದರೆ, ಅವರನ್ನು ಬಹಿಷ್ಕರಿಸುತ್ತಾರೆ. ನಂತರ ಅವರನ್ನು ಕುಲಕ್ಕೆ ಸೇರಿಸಿಕೊಳ್ಳುವಾಗ ಅವರಿಗೆ ನೀರೆರೆದು, ಸ್ವಾಮಿಗಳಿಂದ ದೀಕ್ಷೆ ಪಡೆದು ಕುಲ ಅಥವಾ ಮನೆ ದೈವಗಳಿಗೆ ಪೂಜೆಯನ್ನು ಮಾಡುತ್ತಾರೆ. ಇತರ ಯಾವುದೇ ಸಮುದಾಯದೊಂದಿಗೆ ಅನೈತಿಕ ಸಂಬಂಧ ಹೊಂದಿದ್ದರೆ; ಅಂಥವರನ್ನು ಶಾಶ್ವತವಾಗಿ ಕುಲದಿಂದ ಹೊರಹಾಕುತ್ತಾರೆ. ಅವರನ್ನು ಯಾವುದೇ ಕ್ರಮದಿಂದ ಮರು ಸೇರ್ಪಡೆ ಮಾಡುವುದಿಲ್ಲ. ಇಂದಿಗೂ ಗಾಣಿಗರಲ್ಲಿ ಕಟ್ಟುಪಾಡುಗಳು ಉಳಿದುಕೊಂಡು ಬಂದಿದೆ.

### ೪.೭. ವೈದ್ಯ ಪದ್ಧತಿ

ಲಿಂಗಾಯತ ಗಾಣಿಗ ಸಮುದಾಯ ತಮಗೆ ಬರುವ ರೋಗರುಜಿನಗಳನ್ನು ಅಲೌಕಿಕ ಶಕ್ತಿಯೆಂದೇ ನಂಬುತ್ತಾ ಬಂದಿರುವರು. ಆದರೆ ಇತ್ತೀಚೆಗೆ ಗೌಣವಾಗಿದೆ. ಮನುಷ್ಯ ತಪ್ಪು ಮಾಡುವುದರಿಂದ ದೇವರು ನೀಡುವ ಶಿಕ್ಷೆ ಎಂದು ನಂಬುತ್ತಾರೆ. ಅಲ್ಲದೆ ಅದೊಂದು ಅತಿಮಾನುಷ ಶಕ್ತಿಯೆಂದು ತಿಳಿದಿದ್ದಾರೆ. ಇವರು ಎಣ್ಣೆ ತೆಗೆಯುವ ಕಸುಬಿನವರಾಗಿರುವುದರಿಂದ ಅಲ್ಲಿನ ಪ್ರಾಕೃತಿಕ ವಾತಾವರಣದಿಂದ ಕೆಲವು ರೋಗಗಳು ಹರಡುತ್ತಿದ್ದವು. ಅವುಗಳಿಗೆ ತಕ್ಕಂತೆ ತಾವು ವಾಸಿಸುವ ಊರುಗಳಲ್ಲಿ ನಾನಾ ಬಗೆಯ ಗಿಡಮೂಲಿಕೆಗಳು ದೊರೆಯುತ್ತಿದ್ದವು. ಆ ಗಿಡ ಮೂಲಿಕೆಗಳಿಂದಲೇ ತಮ್ಮ ಕೆಲವು ಕಾಯಿಲೆಗಳಿಗೆ ಔಷಧಿಯನ್ನಾಗಿ ಬಳಸುತ್ತಿದ್ದರು. ಇಂದಿಗೂ ಈ ಔಷಧಿಯನ್ನು ಬಳಸುತ್ತಾರೆ. ಔಷಧವನ್ನಲ್ಲದೆ, ಕೆಲವು ಮಾನಸಿಕ ಕಾಯಿಲೆಗಳು ಬಂದರೆ ಅವುಗಳನ್ನು ಔಷಧಿಯಿಂದ ವಾಸಿಮಾಡಲು ಸಾಧ್ಯವಾಗುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ಮಂತ್ರ ಮಾಟ ಶಕ್ತಿಯನ್ನು ನಂಬಿ, ಅವುಗಳಿಂದ ಅಂತಹ ರೋಗರುಜಿನಗಳನ್ನು ವಾಸಿ ಮಾಡಲು ಮುಂದಾಗುತ್ತಿದ್ದರು. ವೈದ್ಯಕೀಯವು ಧಾರ್ಮಿಕ ಆಚರಣೆ ಮತ್ತು ಸಾಮಾಜಿಕ ಕಟ್ಟಳೆಗಳ ಮೇಲೆ ಬಹುವಾಗಿ ಅವಲಂಬಿಸಿದೆ.[೨] ಆಧುನಿಕವಾಗಿ ಇಂದಿಗೂ ಈ ರೀತಿಯ ಮಾಟ ಮಂತ್ರಾದಿ ಉಪಚಾರ ನಮ್ಮಲ್ಲಿ ಅಲ್ಲಲ್ಲಿ ಉಳಿದುಕೊಂಡು ಬಂದಿದೆ. ಇದನ್ನು ಕೆಲವು ಸಮುದಾಯಗಳು ಗಾಢವಾಗಿ ನಂಬಿವೆ. ತಮ್ಮ ಹೊಲ ಸುತ್ತಮುತ್ತ ದೊರೆಯುವ ಗಿಡಮೂಲಿಕೆಗಳಿಂದ ಮಹತ್ವವಾದ ಔಷಧಗಳನ್ನು ತಯಾರಿಸಿಕೊಂಡು ಈ ಸಮುದಾಯವು ತಮಗೆ ಬರುವ ಅನೇಕ ಕಾಯಿಲೆಗಳಿಗೆ ತಾವೇ ಔಷಧೋಪಚಾರ ಮಾಡಿಕೊಳ್ಳುತ್ತಾರೆ. ಅಲ್ಲದೇ ಕೆಲವೊಮ್ಮೆ ತಮ್ಮ ಸಮುದಾಯದಲ್ಲಿಯೇ ಯಾರಾದರೂ ಒಬ್ಬ ವ್ಯಕ್ತಿ ಔಷಧಿಗಳ ಬಗೆಗೆ ಜ್ಞಾನವಿದ್ದಲ್ಲಿ ಇಡೀ ಜನರಿಗೆ ವೈದ್ಯನಾಗಿ ನಿರ್ವಹಿಸುತ್ತಾನೆ. ಅಲ್ಲದೇ ಗಿಡಮೂಲಿಕೆಯ ವಿವರ ಅವನಿಗೆ ಮಾತ್ರ ತಿಳಿದಿರುತ್ತಿದ್ದು, ಅದನ್ನು ರಹಸ್ಯವಾಗಿ ಇಟ್ಟಿರುತ್ತಿದ್ದನು. ತಾನು ಮರಣಿಸುವಾಗ ಆ ವಿದ್ಯೆಯನ್ನು ಮತ್ತೊಬ್ಬರಿಗೆ ಹೇಳುತ್ತಿದ್ದ. ಕೇವಲ ಮನುಷ್ಯರಿಗೆ ಮಾತ್ರವಲ್ಲ ತಮ್ಮೊಂದಿಗೆ ಬದುಕುವ ಪಶು ಪಕ್ಷಿಗಳಿಗೆ ರೋಗ ರುಜಿನಗಳು ಬಂದಾಗಲೂ ಗಿಡಮೂಲಿಕೆಯ ಮೂಲಕ ಗುಣಪಡಿಸುತ್ತಾರೆ. ಆ ಮೂಲಕ ತಮ್ಮ ಆರೋಗ್ಯ, ತಮ್ಮೊಂದಿಗಿನ ಜೀವಿಗಳ ಆರೋಗ್ಯವನ್ನು ರಕ್ಷಿಸುತ್ತಾರೆ. ಇದನ್ನು ಜನಪದ ವೈದ್ಯ, ಮನೆ ವೈದ್ಯ, ನಾಟಿ ವೈದ್ಯ, ಕಾಡು ಔಷಧಿ ಮುಂತಾದ ಹೆಸರುಗಳಿಂದ ಕರೆಯಲಾಗುತ್ತದೆ.

ಗಾಣಿಗ ಸಮುದಾಯವು ಕೆಲವು ರೋಗಗಳಿಗೆ ಔಷಧಿಯನ್ನು ತೆಗೆದುಕೊಂಡು ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾರೆ. ಗಿಡಮೂಲಿಕೆಗಳಿಂದ ತಮ್ಮಲ್ಲಿಯೇ ಕೆಲವರು ನಾಟಿ ವೈದ್ಯರ ಮೊರೆ ಹೋಗುವರು. ಕೆಲವು ರೋಗಗಳ ಕುರಿತ ವಿವರಣೆ ಹೀಗಿದೆ:

೧. **ಜ್ವರ:** ಕಾಫಿ ಪುಡಿ, ಶುಂಠಿ, ಮೆಣಸು, ಕರಿ ಮೆಣಸುಗಳನ್ನು ಪುಡಿ ಮಾಡಿ ಅದರಿಂದ ಕಷಾಯವನ್ನು ತಯಾರಿಸಿ ಕುಡಿಯುವ ಪದ್ಧತಿ ಇದೆ. ಹೀಗೆ ಮಾಡಿದರೆ ಜ್ವರ ಕಡಿಮೆಯಾಗುತ್ತದೆ ಎಂಬ ನಂಬಿಕೆ ಅವರಲ್ಲಿದೆ.

೨. **ಹೊಟ್ಟೆ ಉಬ್ಬರ:** ಬೆಳ್ಳುಳ್ಳಿ, ಶುಂಠಿಯನ್ನು ಚೆನ್ನಾಗಿ ಅರೆದು, ಕುದಿಸಿ ಆ ನೀರನ್ನು ಕುಡಿಯುವುದರಿಂದ ಹೊಟ್ಟೆ ಉಬ್ಬರ ಕಡಿಮೆಯಾಗುವುದು.

೩. **ನೆಗಡಿ-ಕೆಮ್ಮು:** ಶುಂಠಿ, ಮೆಣಸು ಹಾಗೂ ಗಿಡಮೂಲಿಕೆಗಳನ್ನು ಹಾಕಿ ಚೆನ್ನಾಗಿ ಪುಡಿಮಾಡಿ ಅದಕ್ಕೆ ತಕ್ಕ ನೀರನ್ನು ಹಾಕಿ, ಒಲೆ ಮೇಲೆ ಕುದಿಸುತ್ತಾರೆ. ಇದರಿಂದ ಬಂದ ಕಷಾಯವನ್ನು ಕುಡಿಯುವುದರಿಂದ ನೆಗಡಿಯು ಗುಣವಾಗುತ್ತದೆ.

೪. **ಭೇದಿ:** ಈ ಕಾಯಿಲೆ ಆಹಾರದ ವ್ಯತ್ಯಾಸದಿಂದಾಗಿ ಉಂಟಾಗುವ ಬೇದಿಗೆ ಹಾಗೂ ಅಜೀರ್ಣಕ್ಕೆ ಹಿರಳೇಕಾಯಿ ರಸವನ್ನು ತೆಗೆದು ಮಜ್ಜಿಗೆ ಇಲ್ಲವೇ ಮೊಸರಿನಲ್ಲಿ ಮಿಶ್ರಣ ಮಾಡಿ ಅನ್ನದಲ್ಲಿ ಊಟ ಮಾಡುವುದರಿಂದ ಭೇದಿ ಕಡಿಮೆಯಾಗುತ್ತದೆ.

೫. **ಹಲ್ಲು ನೋವು:** ಕರಿ ಮೆಣಸಿನ ಬೇರು ಅಥವಾ ಲವಂಗವನ್ನು ಮತ್ತು ತಂಬಾಕು ಹಲ್ಲು ನೋಯುವ ಜಾಗದಲ್ಲಿಟ್ಟುಕೊಂಡರೆ ಹಲ್ಲು ನೋವು ವಾಸಿಯಾಗುತ್ತದೆ.

೬. **ವಾಂತಿ:** ವಾಂತಿ ಬರುವ ಸಂದರ್ಭದಲ್ಲಿ ಏಲಕ್ಕಿಯನ್ನು ತಿಂದರೆ ವಾಂತಿ ಕಡಿಮೆಯಾಗುತ್ತದೆ. ಇಲ್ಲವಾದರೆ ಹಸಿರು ಮದ್ದನ್ನು ನೀರಿನಲ್ಲಿ ಕುದಿಸಿ, ಆ ನೀರನ್ನು ಸೇವಿಸುವುದರಿಂದ ವಾಂತಿಯಾಗುವುದಿಲ್ಲವೆಂದು ಹೇಳುವರು.

೭. **ಗಾಯಗಳಿಗೆ:** ಸುಣ್ಣ, ತೆಂಗಿನ ಮರದ ಪುಡಿ, ಹಸಿರು ಮದ್ದಿನೊಂದಿಗೆ ಚೆನ್ನಾಗಿ ಅರೆದು, ಗಾಯಕ್ಕೆ ಹಚ್ಚಬೇಕು. ಅದು ಗಾಯಕ್ಕೆ ಅಂಟಿಕೊಳ್ಳುತ್ತದೆ. ಅದು ಒಣಗಿ ಉದುರುವುದರಲ್ಲಿ ಗಾಯ ವಾಸಿಯಾಗುತ್ತದೆ.

೮. **ಸುಟ್ಟ ಗಾಯ:** ಕರಿ ಮೆಣಸು, ಕರಿತುಳಸಿ (ಕೃಷ್ಣ ತುಳಸಿ)ಯನ್ನು ಚೆನ್ನಾಗಿ ಅರೆದು ಕೊಬ್ಬರಿ ಎಣ್ಣೆಯೊಂದಿಗೆ ಬೆರೆಸಿ ಹಚ್ಚುವುದರಿಂದ ಸುಟ್ಟ ಗಾಯ ಕಡಿಮೆಯಾಗುತ್ತದೆ. ಗಾಯದ ಕಲೆಗೆ ಜೇನು ತುಪ್ಪ ಹಚ್ಚಿದರೆ ಆ ಕಲೆ ಮಾಯವಾಗುತ್ತದೆ.

೯. **ಪಿತ್ತ:** ಒಣ ಶುಂಠಿ, ಲವಂಗ, ಕರಿ ತುಳಸಿ (ಕೃಷ್ಣ ತುಳಸಿ) ಇವುಗಳನ್ನು ಸೇರಿಸಿ ಪುಡಿ ಮಾಡಿ ಕೊಂಚ ಸ್ವಲ್ಪ ನೀರಿನಿಂದ ಕಷಾಯ ತಯಾರಿಸಿ, ಜೇನು ತುಪ್ಪದೊಂದಿಗೆ ಬೆರೆಸಿ ಸೇವಿಸಿದರೆ ಪಿತ್ತ ವಾಸಿಯಾಗುತ್ತದೆ.

೧೦. **ಕಜ್ಜಿ:** ಹೊಳೆ ಜವನ ಸೊಪ್ಪನ್ನು ಚೆನ್ನಾಗಿ ಅರೆದು, ಅದನ್ನು ಮೈತುಂಬಾ ಬಳಿಯುತ್ತಾರೆ. ಅಲ್ಲದೇ

(ಕೃಷ್ಣ ತುಳಸಿ) ಕರಿ ತುಳಸಿಯ ಜೊತೆಗೆ ಸ್ವಲ್ಪ ಉಪ್ಪು ಹಾಕಿ ಚೆನ್ನಾಗಿ ಅರೆದು, ಕಜ್ಜಿಗೆ ಲೇಪಿಸಿದರೆ ಗುಣವಾಗುತ್ತದೆ.

೧೧. **ಕಣ್ಣು ಬೇನೆ:** ತುಳಸಿ ರಸ, ಹಸಿರು ಮದ್ದಿನ ರಸವನ್ನು ಒಂದೆರಡು ದಿವಸ ಬಿಸಲಿನಲ್ಲಿ ಇರಿಸಿದರೆ, ಅದು ಲೋಳೆಯಾಗುತ್ತದೆ. ಅದನ್ನು ಕಣ್ಣಿನ ರೆಪ್ಪೆಯ ಮೇಲೆ ಲೇಪಿಸಿದರೆ ಕಣ್ಣು ಬೇನೆ ವಾಸಿಯಾಗುತ್ತದೆ.

೧೨. **ಕುರುವು:** ಮದ್ದುರಸದ ಜೊತೆಗೆ ಗಿಡಮೂಲಿಕೆಯನ್ನು ಬೆರೆಸಿ ಹಚ್ಚಿದರೆ ಕುರುಬಾವು ಕಡಿಮೆಯಾಗುತ್ತದೆ.

೧೩. **ಕಿವಿ ನೋವು:** ಒಳ್ಳೆಣ್ಣೆಯನ್ನು ಕಾಯಿಸಿ ಆರಿದ ಮೇಲೆ ಕಿವಿಯಲ್ಲಿ ಬಿಡುತ್ತಾರೆ. ಅಲ್ಲದೆ ತುಂಬೆಗಿಡದ ರಸವನ್ನು ಕಿವಿಯಲ್ಲಿ ಹಿಂಡಿದರೆ ಕಿವಿನೋವು ಕಡಿಮೆಯಾಗುತ್ತದೆ.

೧೪. **ಮೈ, ಕೈ, ನೋವು:** ವೀಳ್ಯದೆಲೆ, ಬೆಳ್ಳುಳ್ಳಿ, ಹುಂಡೆ ಮೆಣಸು ಬೆರೆಸಿ ಕೊಬ್ಬರಿ ಎಣ್ಣೆಯೊಂದಿಗೆ ಕುದಿಸಿ ಮೈಗೆ ಹಚ್ಚುತ್ತಾರೆ. ನಂತರ ಮೈಗೆ ಬಿಸಿ ನೀರನ್ನು ಎರೆಯಬೇಕು. ಇದರಿಂದ ಮೈ, ಕೈ, ನೋವು ಕಡಿಮೆಯಾಗುತ್ತದೆ.

೧೫. **ಜಂತು ಹುಳದ ಬಾಧೆ:** ತುಂಬೆ ಸೊಪ್ಪಿನ ರಸ, ಗಿಡ ಮೂಲಿಕೆಯ ಬೇರು ಅರೆದು ಹಸುವಿನ ಮಜ್ಜಿಗೆಯೊಂದಿಗೆ ಬೆರಸಿ ಸೇವಿಸಿದರೆ ಹುಳು ಸಾಯುತ್ತವೆ.

೧೬. **ಮಂತ್ರ ವೈದ್ಯ:** ಗಾಣಿಗರು ಕಾಡು ಮೂಲಿಕೆಗಳಿಂದ ವೈದ್ಯ ಮಾಡುತ್ತಾರಲ್ಲದೆ, ಕೆಲವು ರೋಗಗಳು ಗಿಡಮೂಲಿಕೆಗಳಿಂದ ವಾಸಿಯಾಗದಿದದ್ದರೆ, ಪರ್ಯಾಯವಾಗಿ ಮಂತ್ರವೈದ್ಯ ಇರುತ್ತದೆ. ಈ ರೋಗಗಳು ಹೆಚ್ಚಾಗಿ ದುಷ್ಟ ಶಕ್ತಿಯಿಂದ ಬರುತ್ತವೆ ಎಂದು ಈ ಸಮುದಾಯ ನಂಬುತ್ತದೆ. ಕೇವಲ ಮಂತ್ರ, ಯಂತ್ರದ ಸಹಾಯದಿಂದ ಈ ರೋಗಗಳು ನಿವಾರಣೆಯಾಗುತ್ತವೆಯೆಂಬ ನಂಬಿಕೆಯಿದೆ.

೧೭. **ಕಣ್ಣಿನ ದೃಷ್ಟಿ (ಕೆಟ್ಟ ಕಣ್ಣು):** ತಮ್ಮ ಮಕ್ಕಳು ಚೆಲುವಿಗೆ ಬೇರೆಯವರು ದೃಷ್ಟಿ ಬೀರಿದರೆ, ಆ ಮಕ್ಕಳು ಹಠ ಮಾಡಿ, ರಂಪ್ ಮಾಡುತ್ತಾರೆ. ಇದಕ್ಕೆ ತಾಯಿತ (ಯಂತ್ರ)ವನ್ನು ಮಾಡಿಸಿ ಕೊರಳಿಗೆ ಕಟ್ಟುತ್ತಾರೆ. ಅಲ್ಲದೆ ಅನ್ನವನ್ನು ಮುದ್ದೆಮಾಡಿ ಮೂರು ಬಾರಿ ಮಗುವಿನ ತಲೆಗೆ ನಿವಾಳಿಸಿ, ಮೂರು ದಾರಿ ಕಲೆಯುವಲ್ಲಿ ಹಾಕುವುದರಿಂದ, ದೃಷ್ಟಿಯಿಂದ ತಗುಲಿದ ಪೀಡೆ ತೊಲಗುತ್ತದೆ ಎಂದು ನಂಬುತ್ತಾರೆ.

೧೮. **ಹೊಟ್ಟೆ ಚುಚ್ಚುವುದು:** ಹೊಟೆ ಚುಚ್ಚಿದಂತೆ ನೋವು ಬಂದರೆ ಬಿಸಿ ನೀರಿಗೆ ಒಂದು ಚಿಟಿಕೆ ಚಮಚ ಏಲಕ್ಕಿ ಪುಡಿ ಹಾಕಿ ಕುಡಿದರೆ ಗುಣವಾಗುವದೆಂದು ನಂಬಿಕೆ.

೧೯. **ಬಿದ್ದ ಗಾಯ:** ಮೊದಲ ಬಿದ್ದ ಜಾಗಕ್ಕೆ ಮೂರು ಸಲ ಉಗುಳುತ್ತಾರೆ. ರಕ್ತ ಸ್ರಾವವಾಗುತ್ತಿದ್ದರೆ ನಶಿಪುಡಿ ಅಥವಾ ಅರಿಶಿಣಪುಡಿ ಹಾಕುವರು. ರಕ್ತ ನಿಯಂತ್ರಣಕ್ಕೆ ಬರುತ್ತದೆ. ಗಾಯ ಬೇಗ ಒಣಗದಿದ್ದಲ್ಲಿ ಲೋಳಿ ಸರವನ್ನು ಕತ್ತರಿಸಿ ಕಟ್ಟುವರು.

೨೦. **ಹಾವು ಕಚ್ಚಿದರೆ:** ಹಾವು ಕಡಿದರೆ ಕಚ್ಚಿಸಿಕೊಂಡ ವ್ಯಕ್ತಿ ನನಗೆ ಹಾವು ಕಚ್ಚಿತ್ತೆಂದು ಹೇಳಬಾರದು, ಬದಲಾಗಿ ಹುಳ ಮುಟ್ಟಿತೆಂದು ಹೇಳಬೇಕೆಂಬ ನಂಬಿಕೆಯಿದೆ. ಕೂಡಲೆ ಕಚ್ಚಿದ ಗಾಯದಿಂದ ಸ್ವಲ್ಪ ಮೇಲಕ್ಕೆ ಬಿಗಿಯಾಗಿ ಬಟ್ಟೆ ಕಟ್ಟುತ್ತಾರೆ. ಸುಣ್ಣ ಹಚ್ಚುತ್ತಾರೆ. ಕಡಿದ ಜಾಗದಲ್ಲಿ ಬ್ಲೇಡಿನಿಂದ ಯರ್ಜುವರು. ಅನಂತರ

ಕಚ್ಚಿದ ಜಾಗಕ್ಕೆ ಜೀವಂತ ಕೋಳಿಗಳನ್ನು ಅದರ ಪೃಷ್ಠ ಭಾಗದಿಂದ ಹಿಡಿಯುತ್ತಾರೆ. ಆ ಮೂಲಕ ಕೋಳಿ ವಿಷವನ್ನು ಎಳೆದುಕೊಳ್ಳುತ್ತದೆ. ಹೀಗೆ ಕೋಳಿ ಸಾಯುವವರೆಗೂ ಒಂದಾದ ಮೇಲೊಂದರಂತೆ ಕೋಳಿಗಳನ್ನು ಹಿಡಿಯುತ್ತಾರೆ. ಕೋಳಿ ಸಾಯದೆ ಬದುಕಿದಾಗ ವಿಷ ಇಳಿಯಿತೆಂದು ತಿಳಿಯುತ್ತಾರೆ.

**೨೧. ನಾಯಿ ಕಡಿತ:** ಕಡಿದ ಜಾಗಕ್ಕೆ ಸುಣ್ಣ ಹಚ್ಚುವರು. ಗಾಯ ವಾಸಿಯಾಗುವವರಿಗೂ ನಂಜಿನ ಪದಾರ್ಥವನ್ನು ಸೇವಿಸಕೂಡದು ಎಂದು ಈ ಸಮುದಾಯದ ಹಿರಿಯರಿಂದ ತಿಳಿಯಲಾಗಿದೆ.

**ಪಶು ವೈದ್ಯ**

ಮನುಷ್ಯರಿಗೆ ಬರುವಂತೆ ಪ್ರಾಣಿ ಪಕ್ಷಿಗಳಿಗೂ ಹಲವಾರು ರೋಗ ರುಜಿನಗಳು ಬರುತ್ತವೆ. ತೀರಾ ಕಾಡಿನಲ್ಲಿ ವಾಸಿಸುವ ಪ್ರಾಣಿ ಪಕ್ಷಿಗಳಿಗೆ ಯಾರು ವೈದ್ಯವನ್ನು ಮಾಡುವುದಿಲ್ಲ. ಕಾಡು ಮೃಗಗಳಿಗೆ ಯಾರು ಸಾಮಾನ್ಯವಾಗಿ ಔಷಧಿ ಕೊಡಲು ಹೋಗುವುದಿಲ್ಲ. ಅವು ಚಿಕ್ಕ ಪುಟ್ಟ ರೋಗಗಳನ್ನು ತಾವೇ ಗುಣಪಡಿಸಿಕೊಳ್ಳುತ್ತವೆ. ಅಜೀರ್ಣವಾದಾಗ ತಾವೇ ಉಪವಾಸ ಮಾಡುತ್ತವೆ. ಕಾಯಿಲೆಯಾದಾಗ ವಿಶ್ರಾಂತಿ ಪಡೆಯುತ್ತವೆ. ಅಗತ್ಯವಾದ ನಾರು, ಬೇರು ತಿಂದು ಉಪಶಮನ ಮಾಡಿಕೊಳ್ಳುತ್ತವೆ. ಹಾವಿನಿಂದ ಕಚ್ಚಲ್ಪಟ್ಟ ಪ್ರಾಣಿ ಸರ್ಪಗಂಧಿ ತಿನ್ನುತ್ತದೆ.[೫] ಅವು ತಮ್ಮನ್ನು ತಾವೇ ರಕ್ಷಿಸಿಕೊಳ್ಳುತ್ತವೆ. ಆದರೆ ಜನಸಮುದಾಯವು ತಮ್ಮೊಂದಿಗೆ ವಾಸಿಸುವ ದನಗಳು, ಕುರಿ, ಮೇಕೆ, ಕೋಳಿ ಇತ್ಯಾದಿ ಪ್ರಾಣಿಗಳು ಯಾವುದಾದರೂ ರೋಗ ಬಂದರೆ ತಕ್ಷಣವೇ ಅವುಗಳಿಗೆ ವೈದ್ಯ ಮಾಡುತ್ತಾರೆ. ಹೀಗೆ ಪಶು ವೈದ್ಯರನ್ನು ಗಾಣಿಗ ಸಮುದಾಯವು ಮಾಡುತ್ತದೆ. ಪಶು ಪಕ್ಷಿಗಳಿಗೆ ಬರುವ ಕೆಲವು ರೋಗಗಳು ಮತ್ತು ಅವುಗಳಿಗೆ ನೀಡುವ ಚಿಕಿತ್ಸೆಯು ಈ ಕೆಳಗಿನಂತಿದೆ.

**ಹೊಟ್ಟೆ ಹುಳು:** ಜಾನುವಾರಗಳು ಹೊಟ್ಟೆಯಲ್ಲಿ ಹುಳುಗಳಿದ್ದರೆ ಆಹಾರವನ್ನು ತೊರೆಯುತ್ತವೆ. ಮಂಕಾಗಿ ಮಲಗುತ್ತವೆ. ಇದಕ್ಕೆ ಚೆಂಡು ಹೂವಿನ ರಸ ಹಾಗೂ ಕರಿ ತುಳಸಿಯ ರಸವನ್ನು ಕುಡಿಸುತ್ತಾರೆ. ಇದರಿಂದ ಹುಳು ಸತ್ತು, ಪ್ರಾಣಿಗಳು ಆಹಾರ ಸೇವಿಸುತ್ತವೆ.

**ಸೆಲೆ ರೋಗ:** ಜಾನುವಾರಗಳು ಆಹಾರ ಪಾನೀಯವನ್ನು ತೊರೆದು, ಬಾಯಿಂದ ಜೊಲ್ಲು ಸುರಿಸುತ್ತಾ, ಮಂಕಾಗಿ ಮಲಗುತ್ತವೆ. ದೇಹವು ಸೊರಗುತ್ತದೆ. ಇದನ್ನು ಸೆಲೆರೋಗವೆಂದು ಗುರುತಿಸುತ್ತಾರೆ. ಇದರ ನಿವಾರಣೆಗಾಗಿ ಸೆಲೆ ಗಿಡದ ಬಳ್ಳಿಯನ್ನು ಪಶುಗಳ ಕೊರಳಿಗೆ ಕಟ್ಟುವರು. ಅಲ್ಲದೆ ಬೆಳ್ಳುಳ್ಳಿ, ಶುಂಠಿ, ತುಳಸಿ, ಕಾಡು ಜೀವನ ತೊಗಟೆ ಮತ್ತು ಗಿಡಮೂಲಿಕೆಯೊಂದಿಗೆ ಅರೆದು ಕುಡಿಸುತ್ತಾರೆ. ಆಗ ದನಗಳಿಗೆ ಸೀನು ಬಂದು, ಇದರಿಂದ ಮೈ ಹಗುರವಾಗಿ ರೋಗವು ನಿವಾರಣೆಯಾಗುತ್ತದೆ.

**ಕಾಲು ಬಾಯಿ ಜ್ವರ:** ದನ ಕರುಗಳ ಬಾಯಿಯು ಒಣಗುತ್ತದೆ. ಮೇವು ನೀರು ಸೇರುವುದಿಲ್ಲ. ಇದು ಅತ್ಯಂತ ಕೆಟ್ಟ ರೋಗವಾಗಿರುತ್ತದೆ. ಇದರಿಂದ ದನಕರುಗಳು ಮರಣ ಹೊಂದುತ್ತವೆ. ಈ ಸಂದರ್ಭದಲ್ಲಿ ನೊಣಗಳು ಮುಕುರುತ್ತವೆ. ಇದಕ್ಕೆ ಬೆಳ್ಳುಳ್ಳಿ, ಶುಂಠಿ, ಕಾಡು ಬೇವಿನ ತೊಗಟೆಯನ್ನು ಅರೆದು

ಮಜ್ಜಿಗೆಯೊಂದಿಗೆ ಬೆರೆಸಿ ದಿನಕ್ಕೆರಡು ಬಾರಿ ಕುಡಿಸುತ್ತಾರೆ. ನೊಣಗಳು ಮುಟ್ಟದಿರಲೆಂದು ಕರಿತುಳಸಿಯ ರಸವನ್ನು ಮೈಗೆ ಲೇಪಿಸುವರು.

**ಈರು ಹುಣ್ಣು:** ಪ್ರಾಣಿಗಳ ಕರುಳಿನ ಮೇಲೆ ಹುಣ್ಣು ಆಗುವುದನ್ನು ಈರು ಹುಣ್ಣು ಎಂದು ಕರೆಯುತ್ತಾರೆ. ಈ ರೋಗ ಆಹಾರದ ವ್ಯತ್ಯಾಸದಿಂದ ಬರುತ್ತದೆ. ಇದಕ್ಕೆ ಈರುಳ್ಳಿ, ತುಳಸಿ, ಮೂಲಿಕೆಯನ್ನು ಅರೆದು ಮಜ್ಜಿಗೆಯಲ್ಲಿ ಬೆರೆಸಿ ಕುಡಿಸುವುದರಿಂದ ಹುಣ್ಣು ಕರಗಿ ವಾಸಿಯಾಗುತ್ತದೆ.

**ಉಬ್ಬಸ:** ಜಾನುವಾರಗಳು ಅತ್ತಿಂದಿತ್ತ ಓಡಾಡುತ್ತವೆ. ಉಸಿರಾಟದ ತೊಂದರೆಯಾಗುತ್ತದೆ. ಮೈ ನಡುಕ ಉಂಟಾಗುತ್ತದೆ. ಉಸಿರಾಡುವಾಗ ಶಬ್ದ ಹೆಚ್ಚಾಗಿ ಬರುತ್ತದೆ. ಇದಕ್ಕೆ ಶುಂಠಿ, ಬೆಳ್ಳುಳ್ಳಿ, ತುಳಸಿ, ಸುಗಂಧ ಬೇರು ಮತ್ತು ಬೇವಿನ ತೊಗಟೆಯನ್ನು ಚೆನ್ನಾಗಿ ಅರೆದು ನೀರಿನೊಂದಿಗೆ ಕುಡಿಸುತ್ತಾರೆ. ಇದರಿಂದ ಉಬ್ಬಸ ರೋಗ ವಾಸಿಯಾಗುತ್ತದೆ.

**ಧನುರ್ವಾಯ:** ಪಶುಗಳ ಕಾಲುಗಳಲ್ಲಿ ಬಲಹೀನತೆ ಕಂಡು ಬಂದು ಓಡಾಡದೇ ಮೈಚಾಚಿ ಮಲಗುತ್ತವೆ. ಕಾಲುಗಳನ್ನು ಜಾಡಿಸುತ್ತಿರುತ್ತವೆ. ಕಣ್ಣಿನಿಂದ ನೀರು ಸುರಿಯುತ್ತದೆ. ಈ ಸಮಯದಲ್ಲಿ ಮೆಂತ್ಯೆ, ಬೆಳ್ಳುಳ್ಳಿ, ಶುಂಠಿ, ಗಿಡಮೂಲಿಕೆಯ ಬೇರು ಚೆನ್ನಾಗಿ ಅರೆದು ನೀರು ಅಥವಾ ಮಜ್ಜಿಗೆಯೊಂದಿಗೆ ಬೆರೆಸಿ ಎರಡು, ಮೂರು ದಿವಸ ಕುಡಿಸುತ್ತಾರೆ. ಇದರಿಂದ ರೋಗ ಗುಣಮುಖವಾಗುತ್ತದೆ.

**ಚಪ್ಪೆರೋಗ:** ಜಾನುವಾರುಗಳಲ್ಲಿ ಕಾಲುಗಳ ಶಕ್ತಿಯು ಕುಂದಿದಾಗ ನಡೆಯಲಾಗದೇ ಕುಸಿಯುತ್ತವೆ. ಅಲ್ಲದೇ ಈ ರೋಗ ಬಂದಾಗ ಕಣ್ಣಿನಲ್ಲಿ ಪಿಸುರು ಕಟ್ಟುತ್ತದೆ. ಹುಲ್ಲು, ನೀರು ಏನನ್ನು ತಿನ್ನುವುದಿಲ್ಲ. ಈ ಸಂದರ್ಭದಲ್ಲಿ ಈರುಳ್ಳಿ, ಬೆಲ್ಲ, ವೀಳ್ಯದೆಲೆ ಬೆರಸಿ ತಿನ್ನಿಸುತ್ತಾರೆ. ಶುಂಠಿ, ಮಜ್ಜಿಗೆಯನ್ನು ಕುಡಿಸುವರು. ಅಲ್ಲದೇ ರಾಗಿ ಅಂಬಲಿಯನ್ನು ಕುಡಿಸುವುದರಿಂದ ಕಾಲುಗಳಲ್ಲಿ ಶಕ್ತಿ ವರ್ಧಿಸಿ ರೋಗವು ವಾಸಿಯಾಗುತ್ತದೆ.

**ಹುಣ್ಣುರೋಗ:** ಪ್ರಾಣಿಗಳ ಮೂಗಿನ ಹೊಳ್ಳೆಯಲ್ಲಿ ಸಣ್ಣ ಸಣ್ಣ ಹುಣ್ಣಾಗುತ್ತವೆ. ಇದರಿಂದ ಅವು ಆಹಾರ ತಿನ್ನಲು ಕಷ್ಟವಾಗುತ್ತದೆ. ಇದಕ್ಕೆ ಗಿಡಮೂಲಿಕೆಯ ಹಸಿರು ಮದ್ದಿನೊಂದಿಗೆ ಅರೆದು ರಸವನ್ನು ಹೊಳ್ಳೆಯ ಸಂದಿಗೆ ಬಿಡಬೇಕು. ಹೀಗೆ ತಪ್ಪದೆ ಮೂರು ದಿನಗಳ ವರೆಗೆ ಬಿಟ್ಟರೆ ಇದರಿಂದ ರೋಗ ನಿವಾರಣೆಯಾಗುತ್ತದೆ.

**ಗದ್ದಕಟ್ಟು:** ಕೊಳಚೆನೀರು, ಕಲ್ಮಷವಾದ ನೀರನ್ನು ಕುಡಿದಾಗ ಜಾನುವಾರಗಳ ನಾಲಿಗೆಯ ಮೇಲೆ ಒಂದು ರೀತಿಯ ಮಾತು ಕಾಣಿಸಿಕೊಳ್ಳುತ್ತದೆ. ಇದನ್ನು ಗದ್ದಕಟ್ಟು ರೋಗವೆಂದು ಕರೆಯುತ್ತಾರೆ. ಈ ರೋಗದಿಂದ ಮೇವು, ನೀರು ತೊರೆಯುತ್ತವೆ. ಇದಕ್ಕೆ ಚಿಕಿತ್ಸೆಯಾಗಿ ಜಾನುವಾರಗಳ ಕೊರಳು ಗದ್ದದ ಹತ್ತಿರ ಬರೆಯನ್ನು ಹಾಕುತ್ತಾರೆ. ಈ ಬರೆಯ ಗಾಯಕ್ಕೆ ಬೆಣ್ಣೆ ಇಲ್ಲವೇ ಸಗಣಿ ಲೇಪಿಸುವರು. ಇದರಿಂದ ರೋಗ ಗುಣಮುಖವಾಗುತ್ತದೆ.

**ಮೂಳೆ ಮುರಿದರೆ:** ದನಕರುಗಳಿಗೆ ಮೂಳೆಯ ಯಾವುದೇ ಭಾಗದಲ್ಲಿ ಮುರಿದರೆ ಅದಕ್ಕೆ ಬೆಲ್ಲ, ಶುಂಠಿ, ಬೆಳ್ಳುಳ್ಳಿ, ಕಾಡುಬೇವಿನ ಸೊಪ್ಪು, ಕರಿತುಳಸಿಯನ್ನು ಚೆನ್ನಾಗಿ ಅರೆದು ಮೂಳೆ ಮುರಿದ ಭಾಗಕ್ಕೆ ಲೇಪಿಸಿ, ಎರಡು ಬಿದಿರು ಕಡ್ಡಿಯನ್ನು ಕಟ್ಟಿ ವೀಳ್ಯದೆಲೆ ಇಟ್ಟು ಬಟ್ಟೆಯೊಂದಿಗೆ ಬಿಗಿಯುತ್ತಾರೆ. ಇದರಿಂದ ಮೂಳೆಯು ಕಟ್ಟಿಕೊಳ್ಳುತ್ತದೆ.

**ದೊಡ್ಡರೋಗ:** ಜಾನುವಾರಗಳಿಗೆ ಕಂಡುಬರುವ ಅತ್ಯಂತ ಭೀಕರವಾದ ರೋಗವಿದು. ರೋಗ ಬಂದು ಒಂದು ವಾರದಲ್ಲಿ ದೇಹ ಕ್ಷೀಣಿಸಿ ಮರಣ ಹೊಂದುತ್ತವೆ. ಈ ರೋಗಕ್ಕೆ ಕೆಲವು ಗಿಡಮೂಲಿಕೆಯೊಂದಿಗೆ ಜೀರಿಗೆ, ಬೆಲ್ಲ, ಜೇನುತುಪ್ಪವನ್ನು ಬೆರೆಸಿ ಗೊಟ್ಟದಲ್ಲಿ ಹಾಕಿ ಕುಡಿಸುತ್ತಾರೆ. ಒಂದು ವಾರಾವದಿಯಲ್ಲಿ ಈ ವೈದ್ಯ ಮಾಡಿದರೆ ಪ್ರಾಣಿಗಳು ಪ್ರಾಣಾಪಾಯದಿಂದ ಉಳಿಯುತ್ತವೆ.

**ಉಚ್ಚುವುದು (ಉಚ್ಚಿಕೊಳ್ಳುವುದು):** ದನಕರುಗಳು ತಿನ್ನುವ ಆಹಾರದ ವ್ಯತ್ಯಾಸದಿಂದಾಗಿ ಈ ಬಾಧೆಯು ಬರುತ್ತದೆ. ಕೆಲವು ಗಿಡಮೂಲಿಕೆಯೊಂದಿಗೆ ಶುಂಠಿ, ಬೆಳ್ಳುಳ್ಳಿಯನ್ನು ಅರೆದು, ಬೆರೆಸಿ ದಿನಕ್ಕೆರಡು ಬಾರಿ ಮಜ್ಜಿಗೆಯಲ್ಲಿ ನಾಲ್ಕೈದು ದಿವಸ ಕುಡಿಸುವುದರಿಂದ ಉಚ್ಚಿಕೊಳ್ಳುವುದು ನಿಲ್ಲುತ್ತದೆ.

**ಹೇನು ಬೀಳುವುದು:** ಜಾನುವಾರಗಳ ಮೈಯಲ್ಲಿ ಹೇನುಗಳು ಹೆಚ್ಚಾಗಿದ್ದರೆ, ಹಾಲುವಾಣದ ಸೊಪ್ಪು ಅಥವಾ ತುಂಬೆಗಿಡದ ರಸವನ್ನು ಕಾಡು ಬೇವಿನ ರಸದೊಂದಿಗೆ ಬೆರೆಸಿ ಮೈಗೆ ಲೇಪಿಸುವರು. ನಂತರ ಒಂದೆರಡು ಗಂಟೆಯಾದ ಬಳಿಕ ನೀರೆರೆಯುತ್ತಾರೆ. ಇದರಿಂದ ಹೇನು ನಾಶವಾಗುತ್ತವೆ.

**ಅಂಗಳಕುಪ್ಪೆ (ಕಪ್ಪು ನಾಲಿಗೆ):** ಜಾನುವಾರಗಳ ನಾಲಿಗೆಯ ಹಿಂದಿನ ಭಾಗದಲ್ಲಿ ಅಂಗಳ ಕುಪ್ಪೆಯು ಉಂಟಾಗುತ್ತದೆ. ಈ ನೋವಿನಿಂದ ಅವು ಮೇವು ತಿನ್ನುವುದಿಲ್ಲ. ಆಗ ಕಾರೆ ಮುಳ್ಳಿನಿಂದ ಅಥವಾ ಸೂಜಿಯಿಂದ ನಾಲಿಗೆಯ ಹಿಂಬಭಾಗವನ್ನು ರಕ್ತ ಬರುವಂತೆ ಕೆರೆಯುತ್ತಾರೆ. ಒಂದೆರಡು ದಿನದಲ್ಲಿ ಇದು ವಾಸಿಯಾಗುತ್ತದೆ.

**ಕೋಳಿ ರೋಗ:** ಈ ರೋಗ ಬಂದರೆ ಅವುಗಳಿಗೆ ಬೆಳ್ಳುಳ್ಳಿ, ಈರುಳ್ಳಿ ಮತ್ತು ಕೆಲವು ಗಿಡಮೂಲಿಕೆಗಳ ರಸವನ್ನು ಬೆರೆಸಿ ಕುಡಿಸಿದರೆ ಕೋಳಿರೋಗ ಕಡಿಮೆಯಾಗುತ್ತದೆ.

ಹೀಗೆ ಗಾಣಿಗ ಸಮುದಾಯವು ಮನುಷ್ಯರಿಗೆ ಹಾಗೂ ತಮ್ಮೊಂದಿಗೆ ಜೀವಿಸುವ ಪ್ರಾಣಿ ಪಕ್ಷಿಗಳಿಗೆ ತಮ್ಮದೇ ಆದಂತಹ ವೈದ್ಯ ಪದ್ಧತಿಯನ್ನು ಅನುಸರಿಸುವರು. ಹೆಚ್ಚಾಗಿ ಇವರು ಕಾಡಿನಲ್ಲಿ ದೊರೆಯುವ ಶಕ್ತಿಯುತವಾದಂತಹ ಮೂಲಿಕೆಗಳನ್ನು ಉಪಯೋಗಿಸಿ, ಹಲವಾರು ರೋಗಗಳನ್ನು ವಾಸಿಮಾಡಿಕೊಳ್ಳುತ್ತಾರೆ. ಆಧುನಿಕವಾಗಿ ಕೆಲವರು ಆಧುನಿಕ, ವೈಜ್ಞಾನಿಕ ಮದ್ದು ಗುಳಿಗೆಗಳನ್ನು ಬಳಸುತ್ತಿರುವುದು ಕಂಡುಬರುತ್ತದೆ. ಅದೇನಿದ್ದರೂ ಪಾರಂಪರಿಕವಾಗಿ ಈ ಸಮುದಾಯ ಉಳಿಸಿಕೊಂಡು ಬಂದಂತಹ ಕಾಡು ವೈದ್ಯವನ್ನೇ ಪ್ರಬಲ ಔಷಧಿಯನ್ನಾಗಿ ಸ್ವೀಕರಿಸಿದ್ದಾರೆ. ಇದರಿಂದ ದೇಸೀ ವೈದ್ಯ ಪದ್ಧತಿಯು ಒಳ್ಳೆಯ ಪ್ರತಿಫಲವನ್ನು ನೀಡಿದೆಯೆಂಬುದು ಈ ಸಮುದಾಯದಿಂದ ತಿಳಿಯುತ್ತದೆ.

## ೪.೮. ಆಹಾರ ಪದ್ಧತಿ

ಆಹಾರ ಪದ್ಧತಿ ಒಂದು ನಾಡಿನ ಸಂಸ್ಕೃತಿಯ ಅನೇಕ ಅಂಶಗಳನ್ನು ಹೊರಗೆಡಹುತ್ತದೆ. ಅಡುಗೆಗೆ ಬಳಸುವ ವಸ್ತುಗಳು, ತಯಾರಿಕೆಯ ವಿಧಾನ, ಉಪಯೋಗಿಸುವ ಬಗೆ, ಸೇಖರಿಸಿಡುವ ರೀತಿ, ಅಡುಗೆಗಳ ಹೆಸರುಗಳು ದೇಶದಿಂದ ದೇಶಕ್ಕೆ ಸಮಾಜದಿಂದ ಸಮಾಜಕ್ಕೆ ಸ್ಥಳದಿಂದ ಸ್ಥಳಕ್ಕೆ ಕಾಲದಿಂದ ಕಾಲಕ್ಕೆ ಬೇರೆಯಾಗುತ್ತವೆ. ಒಂದು ಭೌಗೋಳಿಕ ಪರಿಸರಕ್ಕೆ ಹೊಂದಿಕೊಂಡು ಒಂದು ಸಮಾಜವು ತನಗೇ ವಿಶಿಷ್ಟವಾದ ಒಂದು ಪರಂಪರೆಯನ್ನು ನಿರ್ಮಿಸಿಕೊಳ್ಳುತ್ತದೆ.

ಬಳ್ಳಾರಿ ಜಿಲ್ಲಾ ಲಿಂಗಾಯತ ಗಾಣಿಗ ಸಮುದಾಯದ ಅಡುಗೆ ಪದ್ಧತಿ ಸಾಂಪ್ರದಾಯಕವಾದುದಾಗಿದ್ದು ಸ್ಥಳೀಯ ಗುಣವನ್ನು ಹೊಂದಿದೆ. ಇವರ ಅಡುಗೆ ಪದ್ಧತಿಯನ್ನು ಈ ಕೆಳಕಂಡಂತಿವೆ.

ಅಧ್ಯಯನದ ದೃಷ್ಟಿಯಿಂದ ಅಡುಗೆಯನ್ನು ಮುಖ್ಯವಾಗಿ ಎರಡು ಪ್ರಕಾರಗಳಲ್ಲಿ ಗುರುತಿಸಿರುವೆ. ಒಂದು ದಿನನಿತ್ಯದ ಸಾಮಾನ್ಯ ಅಡುಗೆ ಇನ್ನೊಂದು ಹಬ್ಬ ಹರಿದಿನಗಳಲ್ಲಿ ಮಾಡುವ ವಿಶೇಷ ಅಡುಗೆ. ಇವೆರಡು ಬಗೆಯಲ್ಲಿ ಇನ್ನುಳಿದ ವಿವಿಧ ಕಾರ್ಯ, ಪ್ರಸಂಗ ಸಂದರ್ಭದಲ್ಲಿ ಮಾಡುವ ಎಲ್ಲ ತರದ ಅಡುಗೆ ಒಳಗೊಳ್ಳುತ್ತವೆ. ಇವೆರಡು ಅಡುಗೆಗೆ "ಸಣ್ಣ ಅಡಿಗೆ" ಎಂದು ಹಬ್ಬದ ವಿಶೇಷ ಅಡಿಗೆಗೆ "ದೊಡ್ಡ ಅಡಿಗೆ" ಎಂದು ಅನ್ನುವರು. ಅಡುಗೆಯ ವಿವರವನ್ನು ನೋಡುವ ಮುನ್ನ ಊಟದ ವ್ಯವಸ್ಥೆಯನ್ನು ಸಂಕ್ಷಿಪ್ತದಲ್ಲಿ ತಿಳಿಯುವುದಾದರೆ ಗಾಣಿಗರಲ್ಲಿ ಮೊದಲಿನಿಂದಲೂ ಹೊಲ ಮನೆಗಳಲ್ಲಿ ದುಡಿಯುವ ಸ್ತ್ರೀ ಪುರುಷರು ನಿತ್ಯವೂ ಮೂರು ಹೊತ್ತು ಊಟ ಮಾಡುವ ರೂಢಿ ಇಟ್ಟುಕೊಂಡಿದ್ದಾರೆಂಬುದನ್ನು ಅವರ ಮಾತಿನಲ್ಲಿಯೇ ನೋಡುವುದಾದರೆ ಹಾಲು ಕುಡಿಯುವ ತೊಟ್ಟಿಲಿನ ಹಸುಗೂಸಿಗೆ ಒಂಬತ್ತೂಟ. ಅಂಗಳಾಗ ಆಡು ಮಕ್ಕಳಿಗೆ ಆರೂಟ, ಮನ್ಯಾನ ಹಸಿ ಬಾಣತಿಗೆ ನಾಕೂಟ, ಭೂಮ್ಯಾಗ ದುಡಿ ಗಂಡಸಗ ಮೂರೂಟ ಎನ್ನುವ ಅವರ ಮಾತಿನಿಂದ ತಿಳಿದು ಬರುತ್ತದೆ. ದುಡಿಯುವ ಗಂಡಸಿಗೆ ಮೂರೂಟ ಸಾಕು ಎಂದು ಹೇಳಿದ ಇವರು ಅನುಭವವಾಣಿಯೇ ಇನ್ನೊಂದು ಕಡೆಗೆ "ಒಪ್ಪತ್ತು ಉಂಡವ ಯೋಗಿ, ಎರಡೊತ್ತು ಉಂಡವ ಭೋಗಿ, ಮೂರ್‍ಹೊತ್ತು ಉಂಡವ ರೋಗಿ, ನಾಲ್ಕೊತ್ತು ಉಂಡವನನ್ನು ಹೊತ್ತುಕೊಂಡು ಹೋಗಿ (ಸ್ಮಶಾನಕ್ಕೆ)" ಎಂದು ಹೇಳಿದ್ದಾರೆ. ಇರಲಿ ಎಲ್ಲದಕ್ಕೂ ನಾವು ಅಕ್ಷರಶಃ ಅರ್ಥಮಾಡಬಾರದಲ್ಲವೆ?[೬]

ಇವರು ಹೊಲಕ್ಕೆ ದುಡಿಯಲು ಹೋಗುವ ಗಂಡಸರು ಮುಂಜಾನೆದ್ದು ಹೊಲಕ್ಕೆ ಹೊರಡುವ ಮುಂಚೆ ಮನೆಯಲ್ಲಿ ತಡವೆಂದರೆ ೭ ಅಥವಾ ೮ ಗಂಟೆಯೊಳಗಾಗಿ "ನ್ಯಾರಿ" (ಈಗಿನ ಬ್ರೆಕ್‌ಫಾಸ್ಟ್) ಎಂದು ದಿನದ ಮೊದಲಿನ ಊಟವನ್ನು ಮಾಡುವರು. ಮಧ್ಯಾಹ್ನ ಹೊಲದಲ್ಲಿ ಅಥವಾ ಮನೆಯಲ್ಲಿ ಎರಡನೆಯ ಊಟವನ್ನು ನಂತರ ಹೊತ್ತು ಮುಳುಗಿ ಹೊಲದಿಂದ ಮನೆಗೆ ಬಂದ ಸ್ವಲ್ಪ ಹೊತ್ತಿನ ತರುವಾಯ ರಾತ್ರಿಯ ಮೂರನೆಯ ಊಟದೊಂದಿಗೆ ದಿನದ ಕೆಲಸಗಳನ್ನು ಮುಕ್ತಾಯಗೊಳಿಸುವರು. ಗಾಣಿಗರು ದಿನದ ಅಡುಗೆ ಮತ್ತು ಹಬ್ಬದ ಅಡುಗೆಯಲ್ಲಿ ಮುಖ್ಯ ವ್ಯತ್ಯಾಸವೆಂದರೆ, ದಿನದ ಊಟದಲ್ಲಿ ಮಾಮೂಲಿ (ರೊಟ್ಟಿ, ಪಲ್ಲೆ) ಪ್ರದಾನವಾಗಿದ್ದರೆ, ಹಬ್ಬದೂಟದಲ್ಲಿ ಸಿಹಿ ಪ್ರಧಾನವಾಗಿರುತ್ತದೆ. ಹಾಗೆ ನೋಡಿದರೆ ಗಾಣಿಗರು ಹೋಳಿಗೆ ಊಟದ ಪ್ರಿಯರು.

ಬಹುಶಃ ಇದಕ್ಕೆ ಅವರು ಪ್ರತಿದಿನ ಉಣ್ಣುವ ಊಟವೇ ಬೇಸರಕ್ಕೆ ಕಾರಣವಿರಬಹುದು. ಇವರ ನಿತ್ಯದ ಊಟದ ಅಡುಗೆಯೆಂದರೆ, ರೊಟ್ಟಿ, ಅನ್ನ, ಪಲ್ಲೆ, ಚಟ್ನಿ, ಅಂಬಲಿ, ಬಳ್ಳೊಳ್ಳಿ ಖಾರ, ಉಪ್ಪಿನಕಾಯಿ ಇವುಗಳೊಂದಿಗೆ, ಮೊಸರು, ಮಜ್ಜಿಗೆ, ಹೈನವಂತೂ ಬೇಕೆ ಬೇಕು. ಮೊದಲಿನ ಕಾಲದಲ್ಲಿ ಅನ್ನ ದಿನದ ಊಟ ಆಗಿರದೇ ಹಬ್ಬದೂಟ ಹಾಗೂ ಶ್ರೀಮಂತರ ಊಟವಾಗಿತ್ತು. ಇದಲ್ಲದೆ ದಿನದ ಊಟದಲ್ಲಿ ವಿಶೇಷವಾಗಿ ಹೊಲದಲ್ಲಿ ಉಣ್ಣುವ ಊಟಕ್ಕಂತೂ ಉಳ್ಳಾಗಡ್ಡಿ ಇಲ್ಲದೆ ನಡೆಯುವಂತಿಲ್ಲ. ಆದ್ದರಿಂದ ಅವರು ಉಳ್ಳಾಗಡ್ಡಿ ಇದ್ದರೆ ಒಳ್ಳೇ ಊಟ ಎಂದು ಹೇಳುವರು.[೬]

ಇನ್ನು ಹದಿನೈದು ದಿನಕ್ಕೊಮ್ಮೆ ಬರುವ ಅಮವಾಸ್ಯೆ, ಹುಣ್ಣಿಮೆ ಮತ್ತು ಆಗಾಗ ಆಗಮಿಸುವ ಹಬ್ಬಗಳು ಇವುಗಳಲ್ಲದೆ ಊರ ಜಾತ್ರೆ-ಉತ್ಸವ, ಮದುವೆ-ಮುಹೂರ್ತ, ಕಸುಬು ತಿಥಿ-ದಿನಕರ್ಮ, ಜಡ್ಡು-ಜಾಪತ್ರಿಯಾದಾಗ, ಅವಸರದ ಅತಿಥಿ, ಬೀಗರ-ಬಿಜ್ಜರ ಆಗಮನ, ಮಕ್ಕಳಿಗೆ ರೋಗ-ರುಜಿನಗಳು ಬಂದಾಗ ದುರಗವ್ವಾ, ದ್ಯಾಮವ್ವಾಗ ಕೊಡುವ ಎಡೆ, ಭಿನ್ನ ಭಿನ್ನ ದೇವತೆಗಳ ಮೀಸಲಡಿಗೆ, ಮದುವೆಯಲ್ಲಿ ಕೊಡುವ ಸುರಗಿ ಮೊದಲಾದ ಕಾರ್ಯ ಪ್ರಸಂಗಗಳಲ್ಲಿ ಅವರು ಮಾಡುವ ಊಟ ಅಡುಗೆಗಳು ಹೀಗಿವೆ. ಹೋಳಗಿ, ಹುಗ್ಗಿ, ಪಾಯಸ, ಚಪಾತಿ, ಅನ್ನ, ಸಾರು, ಪಲ್ಲೆ, ಕಡಬು, ಉಪ್ಪಿನಕಾಯಿ, ಕರಿಹಿಂಡಿ, ಹಪ್ಪಳ, ಸೆಂಡಿಗೆ, ಚಟ್ನಿ, ಕೋಸಂಬರಿ, ಉಂಡಿ, ಕರಚಿಕಾಯಿ, ಚಕ್ಕಲಿ, ವಡೆ, ಪಡ್ಡು, ಗಾರಗಿ, ದೋಸೆ, ತಾಲಿಪಟ್ಟಿ, ಭಜಿ, ಉಪ್ಪಿಟ್ಟು ಇತ್ಯಾದಿ.[೭]

ಇನ್ನು ಸಣ್ಣ ಅಡಿಗೆ, ದೊಡ್ಡ ಅಡಿಗೆ ಒಟ್ಟಿನಲ್ಲಿ ಎಲ್ಲ ಅಡುಗೆಯ ಸಂಕ್ಷಿಪ್ತ ವಿವರಣೆ ಇಂತಿದೆ ಮೊದಲು ಪ್ರತಿಯೊಂದು ಅಡಿಗೆಯಲ್ಲಿ ಎಷ್ಟು ವಿಧ ಎಂಬುದನ್ನು ನಂತರದಲ್ಲಿ ಅವುಗಳನ್ನು ಯಾವ ಯಾವ ದವಸ ಧಾನ್ಯಗಳಿಂದ ಮಾಡಲು ಸಾಧ್ಯ ಮತ್ತು ಅವನ್ನು ತಯಾರಿಸುವ ಸಂಕ್ಷಿಪ್ತ ವಿಧಾನ ಹೇಗೆ ಎನ್ನುವುದನ್ನು ನೋಡೋಣ. ಮೊದಲನೆಯದಾಗಿ ಬಡವರು ಮತ್ತು ಸಿರಿವಂತರ ನಿತ್ಯದ ಊಟಕ್ಕೆ ಮುಖ್ಯ ಆಧಾರವಾಗಿರುವ ಜೋಳದ ಹಿಟ್ಟಿನಿಂದ ತಯಾರಿಸುವ ರೊಟ್ಟಿ ರೊಟ್ಟಿಯಲ್ಲಿ ೧. ಬಡದ ರೊಟ್ಟಿ, ೨. ಲಟ್ಟಿಸಿದ ರೊಟ್ಟಿ, ೩. ಕೈ ರೊಟ್ಟಿ, ೪. ಎಳ್ಳ ಹಚ್ಚಿದ ರೊಟ್ಟಿ ಎಂದು ವಿಭಿನ್ನ ಬಗೆಯಲ್ಲಿ ಮಾಡುತ್ತಾರೆ. ಮತ್ತು ರೊಟ್ಟಿಯನ್ನು ಬೇಯಿಸುವ ಅಂದರೆ ಮೆತ್ತಗೆ ಬೇಯಿಸಿದ ಹಾಗೂ ಕಟಕ ರೊಟ್ಟಿ ಇದು ತಂಗಳ ರೊಟ್ಟಿಯಲ್ಲ. ಬಿಸಿಯ ರೊಟ್ಟಿಯನ್ನೇ ಹೆಚ್ಚಾಗಿ ಬೇಯಿಸಿದ್ದು. ಹೆಚ್ಚು ದಿನ ತಡೆಯುತ್ತದೆ ಎಂದು ಕರೆಯುತ್ತಾರೆ.

ರೊಟ್ಟಿಯಲ್ಲಿ ಜೋಳ, ಸಜ್ಜೆ, ಗೊಂಜೋಳ, ಅಕ್ಕಿ ಮತ್ತು ಗೋದಿಯ ಹಿಟ್ಟಿನಿಂದ ಮಾಡುವರು. ಅವುಗಳಲ್ಲಿ ಅಂಗೈ ಹದಡದಿಂದ ಒತ್ತಿ ಒತ್ತಿ ಮಾಡುವಂತಹ ಕೈರೊಟ್ಟಿ ಸ್ವಲ್ಪ ಕಠಿಣವಾಗಿದೆ. ಇದಕ್ಕೆ ರಟ್ಟೆಗಳು ಗಟ್ಟಿಯಾಗಿರಬೇಕಾಗುತ್ತವೆ. ಬಡದ ರೊಟ್ಟಿ ಮಾಡವುದು ಕೈರೊಟ್ಟಿಗಿಂತ ಸುಲಭ ಲಟ್ಟಿಸಿದ ರೊಟ್ಟಿ ಇದಕ್ಕಿಂತಲೂ ಸುಲಭ. ಹಾಗೂ ಪರ ಊರಿಗೆ ಹೋಗುವಾಗ ಮತ್ತು ವಿಶೇಷ ಸಂದರ್ಭಗಳಲ್ಲಿ ಜೋಳದ ಮತ್ತು ಸಜ್ಜೆ ರೊಟ್ಟಿಗೆ ಎಳ್ಳು ಹಚ್ಚಿ ಮಾಡುವರು. ಒಟ್ಟಿನಲ್ಲಿ ಹಿಟ್ಟಿನಲ್ಲಿ ಹೊಯ್ಯಾಡುವ ನೀರು ಹಾಕಿ,

(ಇದಕ್ಕೆ ಜಿಗುಟು ಹಾಕುವುದು ಎನ್ನುವರು) ಕಲ್ಲಿನ ಇಲ್ಲವೆ ಕಟ್ಟಿಗೆಯ ಕೊಣಗಿಯಲ್ಲಿ ಭಾರ ಹಾಕಿ ಚರ ಚರವಾದಿ ಉಳ್ಳಾಗಡ್ಡಿಯಷ್ಟು ಉಳ್ಳಿ ಮಾಡಿಕೊಂಡು ರೊಟ್ಟಿ ಮಾಡುವ ಮಹಿಳೆ ಗಟ್ಟಿಗಳೇ ಆಗಿದ್ದಾಳೆ.

ರೊಟ್ಟಿಯನ್ನು ಚೆನ್ನಾಗಿ ಜೋಳದಿಂದ ಮಾಡುವರು. ದಿನದ ಊಟದಲ್ಲಿ ಜೋಳದ ರೊಟ್ಟಿಗೆ ಹೆಚ್ಚು ಪ್ರಾಧಾನ್ಯತೆ ಇದೆ. ಈ ರೊಟ್ಟಿ ತಿಂದವರು ಗಟ್ಟಿಯಾಗಿರುತ್ತಾರೆ ಎಂಬುವುದು ಇವರ ನಂಬಿಕೆ.[8]

ಗಾಣಿಗರು ಸಜ್ಜೆ ರೊಟ್ಟಿ ಮಾಡುವ ಸಂದರ್ಭಗಳೆಂದರೆ, ಸಂಕ್ರಮಣ, ಎಳ್ಳ ಅಮವಾಸ್ಯೆ ಮುಂತಾದ ಹಬ್ಬಗಳಲ್ಲಿ ಹಾಗೂ ಮದುವೆ, ಜಾತ್ರೆ, ಉತ್ಸವಗಳಲ್ಲಿ ಅಲ್ಲದೆ ಪರ ಊರುಗಳಿಗೆ ಹೋಗುವಾಗ ಮತ್ತು ಹೆಣ್ಣು ಮಕ್ಕಳು ಮದುವೆಯಾದ ನಂತರ ಹೊಸದಾಗಿ ಗಂಡನ ಮನೆಗೆ ಹೋಗುವಾಗ ಹಾಗೂ ಅಲ್ಲಿಂದ ಹಿಂದಿರುಗಿ ಬರುವಾಗ ಅಲ್ಲದೆ ಹೆರಿಗೆಯ ತರುವಾಯ, ತವರು ಮನೆಯಿಂದ ಗಂಡನ ಮನೆಗೆ ಹೋಗುವ ಮೊದಲಾದ ಪ್ರಸಂಗಗಳಲ್ಲಿ 'ಬೀಗ ಬುತ್ತಿರೊಟ್ಟಿ' ಎಂದು ಊರ ತುಂಬ ಕಟ್ಟಿಕೊಂಡು ಬಂದ ಬುತ್ತಿಯನ್ನು ಅರ್ಥಾತ್ ಅಡುಗೆಯನ್ನು ಬೀರಲು ಎಳ್ಳು ಹಚ್ಚಿದ ರೊಟ್ಟಿ, ಸಜ್ಜಿ ರೊಟ್ಟಿಯನ್ನೇ ಮಾಡುತ್ತಾರೆ.

ಇನ್ನು ರೊಟ್ಟಿಯ ನಂತರ ಬರುವಂತಹದು ನುಚ್ಚು. ಬಾಯಲ್ಲಿ ಹಲ್ಲು ಇಲ್ಲದ ಮುದುಕರಿಗೆ ನುಚ್ಚು ಪ್ರೀತಿಯ ಪಕ್ವಾನ್ನವಾದರೆ ಹಲ್ಲು ಇದ್ದವರಿಗೆ ರುಚಿಕರವಾದ ಊಟವಾಗಿದೆ. ಇತ್ತೀಚೆಗೆ ಕ್ರಮೇಣವಾಗಿ ಈ ನುಚ್ಚಿನ ಸ್ಥಾನವನ್ನು ಅಕ್ಕಿಯ ಅನ್ನ ಆಕ್ರಮಿಸುತ್ತಲಿದೆ. ಹಳ್ಳಿಯಲ್ಲಿ ಗಾಣಿಗರು ರೊಟ್ಟಿ ತಿಂದ ಮೇಲೆ ಉಣ್ಣುವ ನುಚ್ಚಿನ ಊಟಕ್ಕೆ ಮೇಲೂಟವೆಂದೇ ಕರೆಯುವರು. ಬಾನ, ಕಿಚಡಿ, ಅನ್ನ ಇವೆಲ್ಲ ಮೇಲೂಟದ ಪಂಕ್ತಿಗೆ ಸೇರಿವೆ. ನುಚ್ಚು ತಯಾರಿಸಲು ಜೋಳವನ್ನು ಮನೆಯಲ್ಲಿಯೇ ಬೀಸುಕಲ್ಲಿನಿಂದ ಒಡೆಯುವರು. ಇದಕ್ಕೆ ನುಚ್ಚಿ ಒಡೆಯುವುದೆಂದು ಹೇಳುತ್ತಾರೆ. (ಈಗ ಗಿರಣಿಗೆ ಕೊಡುತ್ತಾರೆ). ಒಡೆದ ಜೋಳದ ನುಚ್ಚನ್ನು ಸಾಣಿಸಿ ಹಿಟ್ಟು ತೆಗೆದು ಕೇವಲ ನುಚ್ಚನ್ನು ನೀರಿನಲ್ಲಿ ಕಲಿಸಿ ಒಲೆಯ ಮೇಲೆ ಗಡಿಗೆಯಲ್ಲಿ ಹೊಯ್ದಾಡುತ್ತಿರುವ ನೀರಿಗೆ ಅದನ್ನು ಸುರಿಯುವರು. ಕೆಲವರು ಅದನ್ನು ನೀರಿನಲ್ಲಿ ಕೆಲಸವೇ ಹಾಗೆ ಒಣ ನುಚ್ಚನ್ನು ಹೊಯ್ದಾಡುವ ನೀರಿಗೆ ಹಾಕಿ ಗಟ್ಟಿ ಕಟ್ಟಿಗೆಗೆ ಉರಿ ಹಚ್ಚಿ ಚೆನ್ನಾಗಿ ಕುದಿಸುವರು. ಇದಕ್ಕೆ ರುಚಿಯಾಗಿ ಸ್ವಲ್ಪ ಉಪ್ಪು ಹಾಕುತ್ತಾರೆ. ಇದು ಸಪ್ಪಗಿನ ನುಚ್ಚು ಇದನ್ನು ಇದ್ದವರು, ತುಪ್ಪ ಹಾಲಿನ ಜೊತೆ ಇಲ್ಲದವರು ಮಜ್ಜಿಗೆಯೊಂದಿಗೆ, ಮನೆಯಲ್ಲಿ ಊಟ ಮಾಡುವರು. ಕೆಲವರು ಬೆಲ್ಲ ಕೂಡಿಸಿಯೂ ಉಣ್ಣುತ್ತಾರೆ.

**ಇನ್ನು ಹಬ್ಬ ಹರಿದಿನಗಳ ಮತ್ತು ಇತರ ಪ್ರಸಂಗಗಳಲ್ಲಿ ಮಾಡುವ ವಿಶೇಷ ಅಡುಗೆ**

ಈ ಅಡುಗೆ ಪ್ರಕಾರದ ವಿಧಿ ವಿಧಾನ ನಮೂನೆಗಳು ನೂರಾರು ಬಗೆಯಾಗಿವೆ. ಆದರೆ ಅವೆಲ್ಲವುಗಳನ್ನು ವಿವರಿಸಲು ಇಲ್ಲಿ ಅವಕಾಶವಿಲ್ಲವಾದ್ದರಿಂದ ಕೆಲವು ಮುಖ್ಯ ಅಡುಗೆಗಳ ವಿಷಯವನ್ನು ಪ್ರಸ್ತಾಪಿಸುವೆನು. ಈ ಅಡುಗೆಯ ವಿಭಿನ್ನ ದಿನಸುಗಳನ್ನು ಈ ಹಿಂದೆ ಹೆಸರಿಸಲಾಗಿದೆ. ಕಾರಣ. ಇಲ್ಲಿ ಆ ಒಂದೊಂದು ವಿಧದಲ್ಲಿ ಬರುವ ವಿಭಿನ್ನ ಅಡುಗೆಗಳಾವುವು ಎಂಬುದನ್ನು ನೋಡೋಣ. ಮೊದಲನೆಯದಾಗಿ ಗಾಣಿಗರ ಪ್ರೀತಿಯ ಹಾಗೂ ಸಿಹಿ ಅಡುಗೆಗಳಲ್ಲಿಯೇ ಶ್ರೇಷ್ಟವೆಂದು ಅನಿಸಿಕೊಂಡಿರುವ ಹೋಳಿಗೆಯ ಮಹತ್ವ

"ಹೋಳಿಗೆ ಇಲ್ಲದ ಹಬ್ಬಲ್ಲಾ ತೇರ ಇಲ್ಲದ ಜಾತ್ರೆ ಅಲ್ಲಾ" ಎನ್ನುವ ಮಾತಿನಿಂದ ಸ್ಪಷ್ಟವಾಗುತ್ತದೆ. ಇದರ ಕಿರು ಪರಿಚಯ ಇಂತಿದೆ ಹೋಳಿಗೆಯಲ್ಲಿ ೧. ಹೂರಣ ಹೋಳಿಗೆ, ೨. ಎಳ್ಳ ಹೋಳಿಗೆ, ೩. ಶೇಂಗಾ ಹೋಳಿಗೆ, ೪. ಹೆಸರ ಬ್ಯಾಳಿ ಹೋಳಿಗೆ, ೫. ತೊಗರಿ ಬ್ಯಾಳಿ ಹೋಳಿಗೆ, ೬. ಕೊಬ್ಬರಿ ಹೋಳಿಗಿ ಎಂದು ಬೇರೆ ಬೇರೆಯಾಗಿವೆ. ಈ ಎಲ್ಲ ಹೋಳಿಗೆಗಳನ್ನು ಕೆಲಕೆಲವರು ಕೆಲ ಕೆಲ ಸಂದರ್ಭಕ್ಕನುಗುಣವಗಿ, ಬೆಲ್ಲ, ತುಪ್ಪ, ಹಾಲು, ಮಾವಿನ ಹಣ್ಣಿನ ಸೀಕರಣೆ, ಕಟ್ಟಿನ ಸಾರು, ಕುಸುಬಿ ಎಣ್ಣೆಯೊಂದಿಗೆ ಊಟ ಮಾಡುತ್ತಾರೆ.

**ಹುಗ್ಗಿ:** ಹುಗ್ಗಿಯೆಂದೊಡನೆ, ಹಿಗ್ಗುವುದು ಮನ. ಹುಗ್ಗಿಯಲ್ಲಿ ಮುಖ್ಯವಾಗಿ ಗೋದಿ ಹುಗ್ಗಿ, ಕಡಲಿಬ್ಯಾಳಿ ಹುಗ್ಗಿ, ಹೆಸರ ಬ್ಯಾಳಿ ಹುಗ್ಗಿ, ತೊಗರಿಬ್ಯಾಳಿ ಹುಗ್ಗಿ, ಅಕ್ಕಿ ಹುಗ್ಗಿ, ಅಲಸಂದಿ ಹುಗ್ಗಿ ಎಂಬ ಪ್ರಕಾರಗಳು. ಹುಗ್ಗಿಗೆ ಸಹ ಹೋಳಿಗೆಯಂತೆ, ಗೋದಿಗೆ ನೀರು ಹಚ್ಚಿ, ಒಳಕಲ್ಲಲ್ಲಿ ಕುಟ್ಟಿ ಗೋದಿಯ ಸಿಪ್ಪಿಯನ್ನು ತೆಗೆದು ಹೀಗೆ ಕುಟ್ಟಿ ತಯಾರಿಸಿದ ಗೋದಿಗೆ 'ಅಕ್ಕಿ' ಎನ್ನುತ್ತಾರೆ. ನಂತರ ಈ ಅಕ್ಕಿಯನ್ನು ಹೊಯ್ದಾಡುವ ನೀರಿನಲ್ಲಿ ಹಾಕಿ ಗಟ್ಟಿ ಕಟ್ಟಿಗೆಯಿಂದ ಉರಿ ಹಚ್ಚಿ ಕುದಿಸುತ್ತಾರೆ. ಆ ಮೇಲೆ ಬೆಲ್ಲ ಕೂಡಿಸಿ ಮುಗುಚಿ ಮತ್ತೆ ಕುದಿಸಿ ತೆಗೆಯುತ್ತಾರೆ. ಇದಕ್ಕೆ ಕೊಬ್ಬರಿ, ಕಸಕಸಿ, ಯಾಲಕ್ಕಿ, ಶುಂಠಿಯನ್ನು ರುಚಿಯಾಗಿ ಹಾಕುತ್ತಾರೆ.

**ಕಡಬು:** ಗಾಣಿಗರಲ್ಲಿ ನಾನಾ ರೀತಿಯ ಕಡುಬುಗಳು ಬಳಕೆಯಲ್ಲಿವೆ. ಒಂದು ಸಿಹಿ ಗಡಬು ಇನ್ನೊಂದು ಸಪ್ಪಗಿನ ಕಡಬು ಎಂದು ಮುಖ್ಯವಾಗಿ ಎರಡು ವಿಧ. ಸಿಹಿ ಕಡಬಿನಲ್ಲಿ ೧. ಕರಿಗಡಬ, ೨. ಕುಚ್ಚಗಡಬ, ೩. ಕುಂಬಳ ಕಡಬ ಇವುಗಳನ್ನು ಕಣಕದಲ್ಲಿ ಬೆಲ್ಲ ಕಡಲೆ ಬ್ಯಾಳೆಯಿಂದ ತಯರಿಸಿದ ಹೂರಣ, ಕೊಬ್ಬರಿ, ಬೆಲ್ಲ, ಕೂಡಿಸಿದ ಮಿಶ್ರಣದೊಂದಿಗೆ, ಕರಿದು ಇಲ್ಲವೆ ಕುದಿಸಿ ಮಾಡುತ್ತಾರೆ. ಹೀಗೆ ಮಾಡಿದ ನಂತರ ಸೇವಿಸುವರು.

**ಪಾಯಸ:** ಪಾಯಸಕ್ಕೆ ಬಳಸುವ ವಿವಿಧ ದಿನಿಸುಗಳು ಗಾಣಿಗರ ಮಹಿಳೆಯರು ಬೇಸಿಗೆಯ ಬಿಡುವಿನಲ್ಲಿ ಮಾಡಿ ಚೆನ್ನಾಗಿ ಒಣಗಿಸಿ ದೇವರ ಮನೆಯ ಅಡಕಲು ಗಡಿಗೆಯಲ್ಲಿ, ಸಂಗ್ರಹಿಸಿಟ್ಟಿರುತ್ತಾರೆ. ಪಾಯಸವನ್ನು ೧. ಶ್ಯಾವಿಗೆ, ೨. ಸವತಿ ಬೀಜ, ೩. ಗುಳಿಗೆ, ೪. ಗೌಲಿ, ೫. ಸಜ್ಜಕ, ೬. ಹೆಸರ ಬ್ಯಾಳಿ, ೭. ಕಡಲಿ ಬ್ಯಾಳಿ, ೮. ಅಲಸಂದಿ, ೯. ತೊಗರಿ ಬ್ಯಾಳಿಯದು ಮಾಡುತ್ತಾರೆ. ಪಾಯಸಕ್ಕೆ ಕೊಬ್ಬರಿ, ಕಸಿಕಸಿ, ಯಾಲಕ್ಕಿ ಪುಡಿಯನ್ನು ಕೂಡಿಸುತ್ತಾರೆ. ಪಾಯಸವನ್ನು ಸಣ್ಣ ಸಣ್ಣ ಹುಣ್ಣಿಮೆಗಳಲ್ಲಿ ಬಸಿರ ಬಾಣಂತಿಯರಿಗೆ ಜಡ್ಡಿನವರಿಗೆ ಹಾಗೂ ಅವಸರದ ಅತಿಥಿ ಬೀಗರಿಗೆ ಮಾಡಿ ಊಟಕ್ಕೆ ಬಡಿಸುತ್ತಾರೆ.

**ಉಂಡಿ:** ಈ ಮೊದಲು ಹೇಳಿದಂತೆ, ಉಂಡಿಯು ಮುಖ್ಯವಾಗಿ ತಿಂಡಿ ತಿನಿಸುಗಳಲ್ಲಿ ಬರುತ್ತದೆ. ಆದರೂ ಕೆಲವು ಸಂದರ್ಭಗಳಲ್ಲಿ ಊಟಕ್ಕೆ ಉಯೋಗಿಸುವರಾದ್ದರಿಂದ ಇಲ್ಲಿ ಕೇವಲ ಉಂಡಿಯ ಪ್ರಕಾರಗಳನ್ನು ಮಾತ್ರ ತಿಳಿಸುವೆನು. ಉಂಡಿಯನ್ನು ಸಕ್ಕರೆ ಮತ್ತು ಬೆಲ್ಲ ಎರಡರಿಂದಲೂ ಮಾಡುವರು. ೧. ಬೇಸನುಂಡಿ, ೨. ಬುಂದೆ ಉಂಡಿ, ೩. ಶೇಂಗಾ ಉಂಡಿ, ೪. ಎಳ್ಳುಂಡಿ, ೫. ರವಾ ಉಂಡಿ, ೬. ಮಂಡಳದುಂಡಿ, ೭. ನವಣಕ್ಕಿ ಹಿಟ್ಟಿನುಂಡಿ ಇತ್ಯಾದಿ.

**ಕಾಯಿಪಲ್ಲೆ:** ಎಲ್ಲಾ ಕಾಲದಲ್ಲಿ ಎಲ್ಲರಿಗೂ ಪ್ರಿಯವಾಗಿರುವ ಹಾಗೂ ಅವಸರದಲ್ಲಿ ಮೊದಲು ಬರುವಂತಹ ೧. ಬದನೆಕಾಯಿ (ಮುಳ್ಳಗಾಯಿ), ೨. ಬೆಂಡಿಕಾಯಿ, ೩. ಹೀರೆಕಾಯಿ, ೪. ಚವಳಿಕಾಯಿ, ೫. ತುಪ್ಪ ಹೀರೆಕಾಯಿ, ೬. ಸೌತಿ ಕಾಯಿ, ೭. ಮೆಕ್ಕೆ ಕಾಯಿ, ೮. ಹಾಗಲಕಾಯಿ, ೮.ಮೂಲಂಗಿಕಾಯಿ, ೯. ಕುಂಬಳಕಾಯಿ, ೧೦. ಹಸಿಮೆಣಸಿನಕಾಯಿ, ೧೧. ಅವರೆಕಾಯಿ, ೧೨. ಅಲಸಂದಿಕಾಯಿ, ೧೩. ಪಡುವಲಕಾಯಿ ಇತ್ಯಾದಿ.

**ಕಾಳಪಲ್ಲೆ:** ಅಲಸಂದಿ, ಕಡಲೆ, ಹೆಸರು, ಮಡಿಕೆ, ಅವರೆ, ತೊಗರೆ, ಉದ್ದು, ಬಟಗಡ್ಲಿ (ಬಟಾಣಿ) ಇತ್ಯಾದಿ.

ಈ ಕಾಳುಗಳನ್ನು ಇಡಿಯಾಗಿ ಕುದಿಸಿಯೂ ಹಾಗೂ ಒಂದು ಹಗಲಿಡಿ ನೆನೆಹಾಕಿ ರಾತ್ರಿಯಿಡಿ ಬಟ್ಟೆಯಲ್ಲಿ ಕಟ್ಟಿ ಮೊಳಕೆ ಬಡಿಸಿಯೂ ಪಲ್ಲೆ ಮಾಡುವರು. ಅಲ್ಲದೆ ಒಡೆದು ಬೇಳೆ ಮಾಡಿ ಸಹ ಪಲ್ಲೆ ಮಾಡುತ್ತಾರೆ. ಇದಲ್ಲದೆ ಬೇಳೆಯನ್ನು ಬೇರೆ ಬೇರೆ ಕಾಯಿ ಮತ್ತು ಸೊಪ್ಪಿನ ಜೊತೆಗೆ ಕೂಡಿಸಿಯೂ ಪಲ್ಲೆ ಮಾಡುತ್ತಾರೆ.

**ಸೊಪ್ಪಿನ ಪಲ್ಲೆ:** ಕಿರಕಸಾಲಿ, ಸಬ್ಬಸಗಿ, ಮೆಂತೆ, ಗೊರಜಿ, ರಾಜಗಿರಿ, ಪುಂಡಿ, ಕೋಲಾನಿ, ಮೂಲಂಗಿ, ಉಳ್ಳಾಗಡ್ಡೆ, ಪಾಲ್ಕನ್, ನುಗ್ಗಿ, ಅಲಸಂದಿ ಮುಗಳು, ಅವರೆ ಮುಗಳು. ಹೆಚ್ಚು ಜೀವ ಸತ್ವ ಹೊಂದಿರುವ ಈ ಸೊಪ್ಪಿನ ಪಲ್ಲೆಗಳು ಎಲ್ಲರ ಆರೋಗ್ಯಕ್ಕೆ ಹಿತವಾಗಿದ್ದರೂ ವಿಶೇಷವಾಗಿ ಕಾಯಿಲೆಯಿಂದ ಬಳಲುವವರಿಗೆ, ಮಕ್ಕಳಿಗೆ ಮತ್ತು ಬಾಣಂತಿಗೆ ಮಾಡಿಕೊಡುತ್ತಾರೆ.

**ಸಾರು:** ಊಟದಲ್ಲಿ ಸಾರು ಅವಶ್ಯವಾಗಿ ಬೇಕು. ಸಾರಿನಲ್ಲಿ ಮುಖ್ಯವಾಗಿ ಬೇಳೆಸಾರು, ಕಟ್ಟಿನ ಸಾರು, ತೊಗರಿ ಬೇಳೆ, ಹೆಸರ ಬೇಳೆ, ಟಮೆಟೋ ಹಣ್ಣಿನ ಸಾರು, ನುಗ್ಗೆಕಾಯಿಸಾರು, ಬೆಂಡಿಕಾಯಿ, ಹೋಳಿಗೆ ಸಾರು ಇತ್ಯಾದಿ.

**ಉಪ್ಪಿನ ಕಾಯಿ:** ವಿವಿಧ ಹುಳಿ, ಕಹಿ ಕಾಯಿ ಮತ್ತು ಬೇರು ಹಾಗೂ ಹೂಗಳಿಂದ ಉಪ್ಪಿನಕಾಯಿ ಹಾಕುತ್ತಾರೆ. ಇದರಲ್ಲಿ ಲಿಂಬಿಕಾಯಿ, ಮಾವಿನ ಕಾಯಿ, ದಡ್ಲಿಕಾಯಿ, ಉನ್ನಿ ಹಣ್ಣು, ಮೆಕ್ಕಿಕಾಯಿ ಇತ್ಯಾದಿ.

**ಹಪ್ಪಳ:** ಅಲಸಂದಿ, ಉದ್ದು, ಹೆಸರು, ಅಕ್ಕಿ ಗೋದಿ, ಇವುಗಳನ್ನು ವಿಶೇಷವಾಗಿ ಕ್ರಮದಿಂದ ಹಿಟ್ಟು ತಯಾರಿಸಿ, ಮಣೆಯ ಮೇಲೆ ಉದ್ದಿ ಬಿಸಿಲಲ್ಲಿ ಒಣಗಿಸಿ ಮತ್ತು ಗಂಗಾಳದಲ್ಲಿ ಹಾಕಿ ಉರಿಯ ಮೇಲೆ ಬೇಯಿಸುತ್ತಾರೆ. ಊಟ ಮಾಡುವಾಗ ಹಪ್ಪಳವನ್ನು ಕಿಚ್ಚಿನ ಮೇಲೆ ಸುಟ್ಟು, ಇಲ್ಲವೆ ಎಣ್ಣೆಯಲ್ಲಿ ಕರಿದು ಉಪಯೋಗಿಸುವರು.

**ಹಿಂಡಿ:** ಅಗಸಿ, ಗುರೆಳ್ಳು, ಶೇಂಗಾ, ಕೊಬ್ಬರಿ, ಕುಸುಬಿ, ಕೆಂಪಿಂಡಿ ಇತ್ಯಾದಿ.

ಮೇಲೆ ಹೇಳಿದ ಸಸ್ಯ ಆಹಾರಕ್ಕೆ ಸಂಬಂಧಿಸಿದಂತೆ ಇವರು ಪ್ರದೇಶಾನುಸಾರ ಎಲ್ಲಾ ವಿಧವಾದ ಊಟವನ್ನು ಮಾಡುತ್ತಾರೆ. ಹಪ್ಪಳ, ಸಂಡಿಗೆ, ಮಜ್ಜಿಗೆಯ ಮೆಣಸಿನಕಾಯಿ, ಸೌತೆ ಬೀಜ, ಗೌಲಿ, ಶ್ಯಾವಿಗೆ

ಮುಂತಾದವುಗಳನ್ನು ಮುಂಗಡವಾಗಿ ಹೆಂಗಸರು ತಯಾರಿಸಿ ಇಟ್ಟುಕೊಳ್ಳುತ್ತಾರೆ. ಗಾಣಿಗರ ಈ ಆಹಾರ ಪದ್ಧತಿಯನ್ನು ನಾವು ಬಳ್ಳಾರಿ, ದಾವಣಗೆರೆ, ಕೊಪ್ಪಳ, ಗದಗ ಜಿಲ್ಲೆಗಳನ್ನು ಗಮನದಲ್ಲಿರಿಸಿಕೊಂಡು ಹೇಳಿದ್ದೇನೆ. ಬೇರೆ ಪ್ರದೇಶಗಳಲ್ಲಿ ಇತರ ಆಹಾರ ಪದ್ಧತಿಯಲ್ಲಿ ವ್ಯತ್ಯಾಸ ಕಾಣಬಹುದು.

### ೪.೯. ಉಡುಗೆ-ತೊಡುಗೆಗಳು

ಮಾನವ ಬದುಕಲು ಗಾಳಿ ನೀರು ವಸತಿ ಎಷ್ಟು ಮುಖ್ಯವೋ ಅಷ್ಟೇ ಅವಶ್ಯಕವಾದುದು ಉಡುಪು. ಉಡುಗೆ ತೊಡುಗೆಗಳ ಅವಶ್ಯಕತೆ ಹೆಚ್ಚು ನೈಸರ್ಗಿಕವಾದುದು. ಯಾವುದೇ ಸಮಾಜದ ಉಡುಗೆ ತೊಡುಗೆಗಳು ಆ ಸಮಾಜವನ್ನು ಬೇರೆ ಸಮಾಜದಿಂದ ಪ್ರತ್ಯೇಕಿಸಲು ಸಹಾಯಕವಾಗುವ ಬಾಹ್ಯ ಸಾಧನ, ಉಡುಗೆ ತೊಡುಗೆಗಳು ಲಿಂಗ, ವಯಸ್ಸು, ಸಾಮಾಜಿಕ ಅಂತಸ್ತು, ವೃತ್ತಿಗಳಿಗನುಗುಣವಾಗಿ ವ್ಯಕ್ತಿಯಿಂದ ವ್ಯಕ್ತಿಗೆ ಬೇರೆಯಾಗಿರುತ್ತದೆ. ಉಡುಗೆ ತೊಡುಗೆಗಳ ಇನ್ನೊಂದು ಮುಖ್ಯ ಲಕ್ಷಣವೆಂದರೆ ಸ್ಥಳೀಯವೂ ಪ್ರಾದೇಶಿಕವೂ ಆಗಿರುವುದು. ಭೌಗೋಳಿಕ ಹಾಗೂ ಸಾಂಸ್ಕೃತಿಕ ಅಗತ್ಯಗಳಿಗನುಗುಣವಾಗಿ ಆ ಸ್ಥಳೀಯತ್ವವನ್ನು ಅವು ಪ್ರದರ್ಶಿಸುತ್ತವೆ. ಪ್ರತಿಯೊಂದು ಸಮಾಜವೂ ತನ್ನ ಅಸ್ತಿತ್ವವನ್ನು ತಾನು ರೂಢಿಸಿಕೊಂಡು ಉಡುಗೆ ತೊಡುಗೆಗಳಿಂದ ಗುರುತಿಸಿಕೊಳ್ಳುತ್ತದೆ. ಉಡುಗೆ ತೊಡುಗೆಗಳಿಗೆ ಧಾರ್ಮಿಕತೆಯ ನಂಟು ವಿಶೇಷವಾಗಿರುತ್ತದೆ. ಧಾರ್ಮಿಕ ಜೀವನದ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ವೇಷ ಭೂಷಣಗಳನ್ನು ಧರಿಸಬೇಕೆಂಬ ಕಟ್ಟಳೆ ಅನೇಕ ಸಮಾಜಗಳಲ್ಲಿದೆ.

ಆರಂಭದಲ್ಲಿ ಕಾಡು ಮತ್ತು ಗವಿಗಳನ್ನು ಆಶ್ರಯಿಸಿಕೊಂಡಿದ್ದ ಮಾನವನು ತನ್ನ ದೇಹಕ್ಕೆ ಉಡುಗೆಯನ್ನು ಕಂಡಿರಲಿಲ್ಲ. ನಿಸರ್ಗದತ್ತವಾಗಿ ಕಾಡಿನಲ್ಲಿ ದೊರೆಯುತ್ತಿದ್ದ ಮರದ ತೊಗಟೆ, ತಪ್ಪಲು ಮುಂತಾದವುಗಳಿಂದ ತನ್ನ ದೇಹವನ್ನು ರಕ್ಷಿಸಿ, ಮುಚ್ಚಿಕೊಳ್ಳಲು ಪ್ರಾರಂಭಿಸಿದ. ಅಲ್ಲದೇ ಕಾಡಿನಲ್ಲಿ ದೊರೆಯುತ್ತಿದ್ದ ಪ್ರಾಣಿಗಳ ಚರ್ಮ, ಪಕ್ಷಿಗಳ ರೆಕ್ಕೆಪುಕ್ಕಗಳೂ ಆರಂಭದಲ್ಲಿ ಉಡುಗೆಯ ಮಾಧ್ಯಮಗಳಾಗಿದ್ದವು. ಆದಿ ಮಾನವನ ಸ್ಥಿತಿಯು ಅರಿವಿನಿಂದ ಇಲ್ಲವೇ ಅರಿವು ಇಲ್ಲದೆಯೂ ಒಂದೊಮ್ಮೆ ಪ್ರಾಣಿಗಳ, ಗಿಡಮರಗಳಿಂದ ಬರುವ ಚರ್ಮ ಮತ್ತು ತೊಗಟೆಗಳನ್ನು ತನ್ನ ದೇಹಕ್ಕೆ ಮುಚ್ಚಿಕೊಂಡ. ಇದರಿಂದ ದೇಹಕ್ಕೆ ಉಂಟಾದ ರಕ್ಷಣೆಯನ್ನರಿತ ಸಂದರ್ಭವೇ ಉಡುಗೆಯ ಆವಿಷ್ಕಾರದ ಆರಂಭದ ಹಂತವೆನ್ನಬಹುದು. ನಂತರ ಬುದ್ಧಿ ವಿಕಾಸವಾದಂತೆ ತನ್ನ ಆಲೋಚನಾ ಕ್ರಮದಲ್ಲಿ ಹಾಗೂ ತಾನು ಬದುಕುವ ಜೀವನ ವಿಧಾನದಲ್ಲಿ ಹಲವಾರು ಬದಲಾವಣೆಗಳನ್ನು ಕಂಡುಕೊಂಡ. ಇಂತಹ ಬದಲಾವಣೆಯೇ ಬಟ್ಟೆಯ ಆವಿಷ್ಕಾರಕ್ಕೆ ಕಾರಣವಾಯಿತು.

"ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕ, ಮೌಲ್ಯಗಳು ಬದಲಾವಣೆಯಾದಂತೆಲ್ಲ ಜನರು ಸಾಮಾಜಿಕ ಪರಿವರ್ತನೆಗೆ ಒಳಪಟ್ಟಂತೆಲ್ಲಾ ಪ್ರತಿಯೊಂದು ಸಮೂಹ ತನ್ನ ನೀತಿ ನಿಯಮಗಳಲ್ಲಿ ಬದಲಾಗುತ್ತದೆ."[೬] ಉಡುಗೆ ತೊಡುಗೆಗಳು ಪ್ರತಿಯೊಂದು ಸಮೂಹಗಳಲ್ಲಿಯೂ ಅವರು ವಾಸಿಸುವ ಪರಿಸರಕ್ಕನುಗುಣವಾಗಿ ಬದಲಾಗುತ್ತದೆ. ಮುಖ್ಯವಾಗಿ ಇಂದು ಎರಡು ರೀತಿಯ ಪಂಗಡಗಳನ್ನು ಉಡುಗೆಯಿಂದ

ಗುರುತಿಸಬಹುದು. ೧. ಬಟ್ಟೆಯನ್ನು ಅರಸಿ ನಾಗರೀಕತೆಗೆ ಹೊಂದಿಕೊಂಡಿರುವ ಬೆಳವಣಿಗೆಯ ಸಮಾಜ. ೨. ಮೂಲ ಅಥವಾ ಪ್ರಾಚೀನ ಸಂಸ್ಕೃತಿಯನ್ನು ಕೆಲವು ಮಟ್ಟಿಗೆ ಉಳಿಸಿಕೊಂಡು ಬಂದಿರುವ ಗುಂಪು. ಬಹುಶಃ ಈ ಎರಡು ಬಗೆಯ ಉಡುಗೆಯನ್ನು ಅವಲಂಬಿಸಿದ ಸಮುದಾಯವು ಇಂದು ಇರುವುದನ್ನು ಕಾಣಬಹುದು.

**ದೈನಂದಿನ ಉಡುಗೆ ತೊಡುಗೆ**

ಗಾಣಿಗ ಸಮುದಾಯದ ದೈನಂದಿನ ಉಡುಗೆಯು ಇಂದಿನ ನಾಗರಿಕರು ಉಡುವ ರೀತಿಯಲ್ಲಿಯೇ, ಇದರ ಜೊತೆಗೆ ತಮ್ಮೊಂದಿಗೆ ವಾಸಿಸುವ ಹಲವಾರು ಸಮುದಾಯಗಳು ಪ್ರಭಾವ ಇವರ ಮೇಲಿದೆ. ಮುಂತಾದ ಸಮುದಾಯಗಳ ಪ್ರಭಾವವೂ ಇವರ ಉಡುಪುಗಳಲ್ಲಿ ಕಾಣಬಹುದಾಗಿದೆ. ವ್ಯವಸಾಯ, ಮನೆಗೆಲಸ ಮುಂತಾದ ಕಾರ್ಯಗಳಲ್ಲಿಯೂ ಇವರ ಧರಿಸುವ ಉಡುಗೆಯು ಸಾಮಾನ್ಯವಾಗಿರುತ್ತದೆ. ಸ್ತ್ರೀಯರು ಸೀರೆ, ಕುಪ್ಪಸವನ್ನು, ಚೋಲಿಯನ್ನು ಧರಿಸಿ, ಕಿವಿಗೆ ಓಲೆ, ಕೈ ಬೆರಳಿಗೆ ತಾಮ್ರದ ಉಂಗುರುಗಳನ್ನು ತೊಡುತ್ತಾರೆ. ಮಕ್ಕಳು ಬಿಳಿ ಅಂಗಿ ಚಡ್ಡಿಯನ್ನು ಧರಿಸುತ್ತಾರೆ. ಈ ಸಮುದಾಯದ ಹಿರಿಯ ಸ್ತ್ರೀಯರು ಮೈಗೆ ದಿನ್ನಾಗರಿಯ ಸೀರೆಯನ್ನು ಧರಿಸುತ್ತಾರೆ. ಕೈಗಳಿಗೆ ಬಳೆ, ಕಡಗ, ತೋಳಬಂದಿ, ತಾಮ್ರದ ಉಂಗುರವನ್ನು ಧರಿಸುವರು. ಕೊರಳಿಗೆ ಹವಳದ ಸರಗಳು, ಕರಿಮಣಿಸರ, ಮದುವೆಯಾಗಿದ್ದರೆ ತಾಳಿಸರ, ಕಿವಿಗೆ ಬಂಗಾರದ ಓಲೆ, ಮೂಗಿಗೆ ಬಂಗಾರದ ಮೂಗುತಿಯನ್ನು ಧರಿಸುತ್ತಾರೆ. ಸ್ತ್ರೀಯರು ವಿಧವೆಯರಾಗಿದ್ದರೆ ಕಿವಿಗೆ ಬೆಂಡಾಲೆ ಓಲೆಯನ್ನು ಧರಿಸುತ್ತಾರೆ.

**ವಿಶೇಷ ಸಂದರ್ಭದ ಉಡುಗೆ-ತೊಡುಗೆ**

ಗಾಣಿಗ ಸಮುದಾಯವು ಹಬ್ಬ ಹರಿದಿನ, ಮದುವೆ, ಜಾತ್ರೆ ಉತ್ಸವ ಮತ್ತು ಕೆಲವು ವಿಶೇಷ ಸಂದರ್ಭಗಳಲ್ಲಿ ವಿಶೇಷವಾಗಿ ಉಡುಗೆ ತೊಡುಗೆಯನ್ನು ಧರಿಸುವರು. ವಿಶೇಷ ದಿನಗಳಲ್ಲಿ ಇವರು ಹೊಸ ಬಟ್ಟೆಯನ್ನು ಧರಿಸುತ್ತಾರೆ. ಸಮುದಾಯದ ಸ್ತ್ರೀಯರು, ಪುರುಷರು, ಮಕ್ಕಳಾದಿಯಾಗಿ ಹೊಸ ಇಲ್ಲವೇ ಸ್ವಚ್ಛಗೊಳಿಸಿದ ಬಟ್ಟೆಯನ್ನು ಧರಿಸಿ, ಪುರುಷರು ಪೇಟವನ್ನು ಸುತ್ತಿಕೊಂಡು ಹೆಂಗಸರು ಬಂಗಾರದ ಓಲೆಗಳನ್ನು ಹಾಕಿಕೊಂಡು ಸಡಗರದಿಂದ ಓಡಾಡುತ್ತಾರೆ.

ಗಾಣಿಗರ ಮದುವೆಯ ಸಂದರ್ಭಗಳಲ್ಲಿ ಮಧುಮಗ, ಮಧುಮಗಳಿಗೆ ವಿಶೇಷವಾಗಿ ಉಡುಪು ಮತ್ತು ಒಡವೆಗಳನ್ನು ಹಾಕುತ್ತಾರೆ. ಮಧುಮಗನಿಗೆ ಒಂಬತ್ತು ಮೊಳದ ಬಿಳಿಯ ಪಂಚೆಯನ್ನು ತೊಡಿಸುತ್ತಾರೆ. ಇದರ ಜೊತೆಗೆ ಬಿಳಿಯ ಅಂಗಿ ತೊಡಿಸುತ್ತಾರೆ. ತಲೆಗೆ ಬಿಳಿಯ ಪೇಟವನ್ನು ಇಡುವರು ಪೇಟದ ಸುತ್ತಲೂ ಐದಾರು ಬಗೆಯ ಹೂಗಳನ್ನು ಸುತ್ತಿರುತ್ತಾರೆ. ಹಣೆಗೆ ವಿಭೂತಿ, ಕುಂಕುಮವನ್ನಿಟ್ಟು, ಬಾಸಿಂಗ ಕಟ್ಟಿ ಸಿಂಗರಿಸುತ್ತಾರೆ. ಕೈಗೆ ಕಂಕಣ, ಸೊಂಟಕ್ಕೆ ಪಟ್ಟಿಯನ್ನು ಕಟ್ಟುತ್ತಾರೆ. ಕೈಯಲ್ಲಿ ತೆಂಗಿನ ಕಾಯಿ, ಲಿಂಬಿ ಹಣ್ಣು ಹಿಡಿದುಕೊಂಡಿರುತ್ತಾರೆ.

ಮಧುಮಗಳ ಅಲಂಕಾರಕ್ಕೆ ಈ ಸಮುದಾಯ ಮಹತ್ವ ನೀಡುತ್ತದೆ. ವಧುವಿಗೆ ಹೊಸ ಸೀರೆಯನ್ನುಡಿಸಿ, (ಕೆಲವರು ರೇಷ್ಮೆ ಸೀರೆಯನ್ನು ಉಡಿಸುತ್ತಾರೆ). ರವಿಕೆಯನ್ನು ತೊಡಿಸಿ, ಹಣೆಗೆ ವಿಭೂತಿ, ಕುಂಕುಮ, ಕೈಗಳಿಗೆ ಬಳೆ, ಕಾಲಿಗೆ ಕಾಲುಂಗುರು, ತಲೆಗೆ ವಿವಿಧ ಹೂಗುಚ್ಛ, ಕಿವಿ, ಮೂಗಿಗೆ ಬಂಗಾರದ ಒಡವೆಗಳನ್ನು ತೊಡಿಸುವರು. ಬಾಸಿಂಗಕ್ಕೆ ದಿನ್ನಾಗರಿಯ ಹೂಗಳನ್ನು ಸುತ್ತಿ ಅಲಂಕಾರ ಮಾಡುತ್ತಾರೆ. ತಾಳಿಯು ಗಂಡನ ಮನೆಯಿಂದ ತಂದದ್ದಾಗಿದ್ದು, ಇದು ಬಂಗಾರದ್ದೇ ಆಗಿರುತ್ತದೆ. ಮುಖ್ಯವಾಗಿ ಮದುವೆಯ ಸಂದರ್ಭದಲ್ಲಿ ಗಾಣಿಗರು ತೊಡುವ, ಉಡುವ, ಆಭರಣ ಹಾಗೂ ಉಡುಪುಗಳು ಬಳ್ಳಾರಿ ಪರಿಸರದ ಬೇರೆ ಸಮುದಾಯದವರು ಉಡುವ ರೀತಿಯಲ್ಲೇ ಉಡುವರು.

ಗಾಣಿಗ ಸಮುದಾಯವು ಆಧುನಿಕ ಪ್ರಭಾವಕ್ಕೆ ಒಳಗಾಗುತ್ತಿದೆ. ಈ ಕಾರಣದಿಂದಾಗಿ ಆಧುನಿಕವಾಗಿ ಉತ್ಪಾದನೆಯಾಗುವ ಶರ್ಟ್, ಪ್ಯಾಂಟ್, ಹೊಸ ಹೊಸ ಬಗೆಯ ಉಡುಪುಗಳು ಧರಿಸುವರು. ಮುದುಕ-ಮುದುಕಿಯರಲ್ಲಿ ಮಾತ್ರ ಪಾರಂಪರಿಕ ಉಡುಗೆ ತೊಡುಗೆಯ ಸಂಪ್ರದಾಯ ಉಳಿದು ಬಂದಿದೆ.

ಈ ಸಮುದಾಯ ದೈನಂದಿನ ಬದುಕಿನಲ್ಲಿ ಬಳಸುವ ಆಭರಣಗಳನ್ನು ಈ ಕೆಳಗಿನಂತಿವೆ.

**ಗಾಣಿಗರು ಬಳಸುವ ಆಭರಣಗಳು**

**ಕೊರಳು:** ಹವಳದ ಸರ, ಶೃಂಗಾರ ಸರ, ಮಾವಿನ ಕಾಯಿ ಸರ, ಚಕ್ರಸರ, ಮಾಣಿಕ್ಯ ಸರ, ಬವಳ ಸರ, ಪಂಚಸರ, ತ್ರಿಸರ, ಮಣಿಪುರ, ಮುತ್ತಿನ ಹಾರ, ಕಮಲ ಹಾರ, ಚಪಲ ಹಾರ, ಚಂದ್ರಹಾರ, ಸೂರ್ಯಹಾರ, ನಕ್ಷತ್ರ ಹಾರ, ನವರತ್ನ ಹಾರ, ಟೀಕೆ, ಟೀಕಾ ಬಟ್ಟು, ಕೊರಳ ಪಟ್ಟಿ, ಮುತ್ತಿನ ಕಂಠಿ, ಮೇಲು ಗುಂಡು, ದೊಡ್ಡ ಗುಂಡು, ಬೋರಮಾಳ, ಚಿಂತಾರ, ಅಡ್ಡಿಗೆ ಮಣಿ, ತಾಳಿ (ಮಂಗಳ ಸೂತ್ರ), ರತ್ನ ತಾಳಿ, ಕರಿಮಣಿ, ಬ್ಯಾಳಿ ಮಣಿ, ರತ್ನ ಪದಕ.

**ಕಿವಿ:** ಬೆಂಡೋಲಿ, ಓಲೆ (ವಾಲಿ), ಮಿಂಚಿನೋಲೆ, ದಂತದೋಲೆ, ಕೇದಿಗೆಯೋಲೆ, ತಾಳಿ ಓಲೆ, ತೆಂಗಿನೋಲೆ, ಬಿಚ್ಚೋಲೆ, ಸರಪಳಿ, ದ್ರಾಕ್ಷಿ ಬಳ್ಳಿ, ಮಿಂಚ ಪಟ್ಟಿ, ಚಂದ್ರ ಭಾವ, ಕೆನ್ನೆ ಸರಪಳಿ ಜುಮಕಿ, ರತ್ನ ಕುಂಡಲ, ಮುರುವು, ರಿಂಗ್, ಲವಲಾಕ್ ಇತ್ಯಾದಿ.

**ಮೂಗು:** ಬುಲಾಕು, ರತ್ನದ ಬೊಟ್ಟು, ಮೂಗು ಬೊಟ್ಟು, ಗೂಟ ಮೂಗುತಿ, ಎಲಿ ಮೂಗು ಮೊಟ್ಟು, ಅರ್ಧ ಚಂದ್ರ, ನತ್ತು (ಮುತ್ತು, ಹರಳು), ಗಾಡೆ, ಮುತ್ತಿನ ಜೋಳ ಜೋಳಿ ಇತ್ಯಾದಿ.

**ಮುಡಿ:** ಗುಲಾಬಿ ಹೂ, ತಿರುಪಣಿ ಹೂ, ಬಂಗಾರದ ಹೂ, ಹರಳಿನ ಹೂ, ನಾಗರ, ಹೆರಳ (ಜಡೆ) ಬಂಗಾರ, ಜಡೆ ಬಿಲ್ಲೆ, ಬೈತಲ ಮಣಿ, ಪಿಂಪಣಿ, ಹೆರಳು ರಾಗುಟಚೌರಿ, ಗೊಂಡೆ, ಜರದ ಗೊಂಡೆ, ಮುತ್ತಿನ ಜೂಳೆ, ಮುತ್ತಿನ ಕಿರೀಟ.

**ರಟ್ಟೆ:** ತೋಳ ಬಾಪುರಿ, ವಂಕಿ, ನಾಗಮುರಿಗೆ, ಬಾಜುಬಂದ, ತೋಳ ಬಾಪುರಿ, ತೋಳ ಬಂದಿ, ಕೇಯೂರ, ಭುಜಗಬಂದ, ಬಾಹುಪೂರ, ಬಂದಿ ಮುರಡಿ ಸರ್ಪಳಿ.

**ಮುಂಗೈ:** ಬಳೆ, ನೀರಗಿ ಬಳಿ, ಗೀರ ಬಳಿ, ಕಂಕಣ (ವಜ್ರ, ರತ್ನ, ಮಣಿ), ಹರಡಿ ಕಂಕಣ, ಮುಳ್ಳು ಕಂಕಣ, ಕೀಲ ಕಂಕಣ, ಜೋಡು ಕಂಕಣ, ಗೋಟು, ಜೋಡು ದುಂಡು, ಬಂದ್ಲಿ, ಗುಂಡು ಇತ್ಯಾದಿ.

**ಕೈ ಬೆರಳು:** ಉಂಗುರ ವಜ್ರದುಂಗುರ, ನವರತ್ನದುಂಗುರ, ಮುತ್ತಿನ ಉಂಗುರ, ಹರಳಿನ ಉಂಗುರ, ಜವಳದ ಉಂಗುರ, ಮುದ್ರೆ ಉಂಗುರ, ಮಡಿ ಉಂಗುರ, ಸುತ್ತುಂಗುರ, ಗೆಜ್ಜೆ ಉಂಗುರ, ಕೆತ್ತಿದುಂಗುರ, ತೊಂಡಿಲುಂಗುರ, ಮಾಣಿಕದುಂಗುರ, ತೋರ ಮುದ್ರಿಕೆ ಇತ್ಯಾದಿ.

**ಸೊಂಟ:** ಗೆಜ್ಜೆ ಪಟ್ಟಿ ಕಟಿಸೂತ್ರ, ಚಿನ್ನದ ಕೊಂಡಿ, ರನ್ನ ಬಲೆಯ ಉಡುದಾರ, ಕಾಲ್ನೂಪುರ, ಬಂಗಾರದ ಕಿರುಗಂಟೆ, ಹೊನ್ನ ಗಂಟೆಸರ ಚಳಕಿ.

**ಕಾಲು:** ಕಾಲುಕಡಗ (ಕಾಲ್ಗಡಗ), ಕಾಲರುಳಿ, ಉರುಳಿ, ಗೆಜ್ಜೆ ಸರ, ಕಾಲ ಸರ್ಪಳಿ, ಹುರಗೆಜ್ಜೆ, ಚೈನು, ತೋಡೆ, ನೇವುರ, ನೂಪುರ, ಪೈಝಣ ಇತ್ಯಾದಿ.

**ಕಾಲಬೆರಳು:** ಕಾಲುಂಗುರ, ನೆಲ್ಲಿಕಾಲುಂಗರ, ಸುತ್ತ ಕಾಲುಂಗುರ, ಗೆಜ್ಜೆ ಉಂಗುರ, ಮಿಂಚು, ಸಾದಾ ಮೀನ, ಬೆರಳುಗುರು[೨೦] ಇತ್ಯಾದಿ.

ಈ ಮೇಲೆ ಹೇಳಿದ ಎಲ್ಲಾ ಆಭರಣವನ್ನು ಗಾಣಿಗರು ಬದುಕಿನ ದಿನಗಳಲ್ಲಿ ಬಿಟ್ಟು ಹಬ್ಬ ಹರಿದಿನಗಳಲ್ಲಿ ಹೆಚ್ಚಾಗಿ ಧರಿಸುವರು ಎಂದು ಸ್ತ್ರೀಯರು ಹೇಳುವರು.

## ೪.೧೦. ವಸತಿ ವ್ಯವಸ್ಥೆ

ಮನುಷ್ಯನ ಮೂಲಭೂತ ಅವಶ್ಯಕತೆಗಳಾದ ಆಹಾರ, ನೀರು, ಗಾಳಿ, ಬಟ್ಟೆಯಂತೆ ವಸತಿ ಸಹ ಒಂದು. ಆದಿಮ ಮಾನವ ತನ್ನ ಅಲೆಮಾರಿ ಜೀವನಕ್ಕೆ ವಿದಾಯ ಹೇಳಿ ತನ್ನವರೊಂದಿಗೆ ಒಂದು ಕಡೆ ನೆಲೆನಿಂತ. ತಾನು ತನ್ನವರು ಮತ್ತು ತನ್ನವುಗಳನ್ನು ಅನ್ಯರಿಂದ ರಕ್ಷಿಸಿಕೊಳ್ಳುವುದು ಅವಶ್ಯವಾಯಿತು. ಮೊದ ಮೊದಲು ಗವಿ, ಪೊಟರೆಗಳಲ್ಲಿ ರಕ್ಷಣೆಯನ್ನು ಪಡೆಯುತ್ತಿದ್ದ. ತನ್ನ ಬೌದ್ಧಿಕ ಮತ್ತು ಭೌತಿಕ ಬೆಳವಣಿಗೆಯಿಂದ ರಕ್ಷಣೆಯಲ್ಲಿ ಕೊರತೆಗಳನ್ನು ಕಂಡುಕೊಂಡ. ನಿಸರ್ಗ ನಿರ್ಮಿತ ರಕ್ಷಣಾತಾಣಗಳನ್ನು ಬಿಟ್ಟುಬಿಟ್ಟು. ತನ್ನನ್ನು ನಿಸರ್ಗದ ವಿಕೋಪದಿಂದಲೂ ಮತ್ತು ಕಾಡು ಪ್ರಾಣಿಗಳಿಂದಲೂ ರಕ್ಷಿಸಿಕೊಳ್ಳಲು ಪಕ್ಷಿಗಳ ಅನುಕರಣೆಯಿಂದ ಆಯಕಟ್ಟಿನ ಪ್ರದೇಶಗಳಲ್ಲಿ ತನ್ನ ತಾಣಗಳನ್ನು ನಿರ್ಮಿಸಿಕೊಂಡ. ನದಿತೀರಗಳು, ಬೆಟ್ಟದ ಬುಡಗಳು ಮತ್ತೆ ಕೆಲವೊಮ್ಮೆ ಗುಂಪು ಮರಗಳ ಮೇಲೆ ಕೂಡ ಈತನ ನೆಲೆಯ ತಾಣಗಳಾದವು. ತಾನು ವಾಸಿಸುವ ತಾಣಗಳಲ್ಲಿ ತನ್ನ ಅನುಕೂಲದ ಕೊರತೆ ಕಂಡಾಗಲೆಲ್ಲ ಹೊಸ ಹೊಸ ಆವಿಷ್ಕಾರಗಳಿಂದ ವಸತಿ ನಿರ್ಮಾಣದ ತಂತ್ರಗಳನ್ನು ಅಳವಡಿಸಿ ನಿರ್ಮಿಸಿಕೊಂಡ. ವಸತಿ ನಿರ್ಮಾಣಕ್ಕಾಗಿ ಕಾಡಿನಲ್ಲಿ ಸಹಜವಾಗಿ ಲಭ್ಯವಿರುವ ಬಿದಿರು, ಗೆಲ್ಲೆ, ಹಸಿರು ತಪ್ಪಲ, ವಿವಿಧ ಬಳ್ಳಿ, ನಾರು, ವಿವಿಧ ಬೇರುಗಳನ್ನು ಬಳಸುತ್ತಿದ್ದ. ಕಾಲಾಂತರದಲ್ಲಿ ಮಾನವ ಗ್ರಾಮ ಜೀವನಕ್ಕೆ ಕಾಲಿರಿಸಿದಾಗ ಈತನ ವಸತಿಯ ನಿರ್ಮಾಣದ ಕೌಶಲ್ಯ ಒಂದು ಹೊಸ ಆಕಾರವನ್ನು ಪಡೆಯಿತು. ಆಯಕಟ್ಟಿನ ಸ್ಥಳಗಳಲ್ಲಿ ನಾಡು ಕಟ್ಟುವಾಗ ತನ್ನ ವಾಸ ಸ್ಥಾನವನ್ನು ತನ್ನ ಇಷ್ಟಾರ್ಥಗಳ

ಅನುಕೂಲಕ್ಕೆ ತಕ್ಕಂತೆ ನಿರ್ಮಿಸುವ ಕೌಶಲ್ಯವನ್ನು ಮೈಗೂಡಿಸಿಕೊಂಡ. ಇಂತಹ ವಾಸಸ್ಥಾನಗಳ ಹಿಂದೆ ಆ ವ್ಯಕ್ತಿಯ ಸಮುದಾಯದ, ಸಾಮಾಜಿಕ ಮತ್ತು ಸಾಂಸ್ಕೃತಿಕ ಆಚರಣೆಗಳ ಸಂಸ್ಕಾರವಿರುತ್ತಿತ್ತು. ವಸತಿಯ ಅವಶ್ಯಕತೆಗಳು ಮತ್ತು ಅಲ್ಲಿರುವ ಎಲ್ಲಾ ಅನುಕೂಲತೆಗಳ ಉದ್ದೇಶ ಒಂದೇಯಾಗಿರುತ್ತದೆ. ಆದರೆ, ವಿನ್ಯಾಸ ಮತ್ತು ಆಚಾರಗಳಲ್ಲಿ ಸಾಕಷ್ಟು ಭಿನ್ನವಾಗಿರುತ್ತವೆ. ಇವು ಆ ವ್ಯಕ್ತಿಯ ಅಭಿರುಚಿಯನ್ನು ಬಿಂಬಿಸುತ್ತವೆ. ಆಧುನಿಕ ಯುಗದಲ್ಲಿ ಕೂಡ ಆಯ ವಾಸ್ತುವವನ್ನು ಆಧರಿಸಿ ನಿರ್ಮಿಸುವ ಮನೆಗಳಲ್ಲಿ ಉದ್ದೇಶ ಒಂದೇಯಾಗಿದ್ದರೂ, ವಿನ್ಯಾಸದಲ್ಲಿ ಸಾಕಷ್ಟು ಬದಲಾವಣೆಗಳನ್ನು ಕಾಣಬಹುದು. ಇದಕ್ಕೆ ಅವರ ಸಂಸ್ಕಾರ ಮತ್ತು ನಂಬಿದವರ ನಂಬಿಕೆಗಳ ಸತ್ಯವೇ ಕಾರಣವಾಗಿರುತ್ತದೆ.[೧೯] ಇದಕ್ಕೆ ಹೊರತಲ್ಲದ ಲಿಂಗಾಯತ ಗಾಣಿಗ ಸಮುದಾಯದವರು ತಾವು ನಿರ್ಮಿಸುವ ವಾಸಸ್ಥಳಗಳಿಗೆ ತಮ್ಮದೇಯಾದ ಸಾಂಸ್ಕೃತಿಕ ವಿಶೇಷ ಆಕಾರಗಳನ್ನು ಕೊಟ್ಟಿರುವರು. ವಿಶೇಷವಾಗಿ ಅಂದು ಕುಲಕಸುಬನ್ನು ಆಶ್ರಯಿಸಿರುವ ಗಾಣಿಗ ಸಮುದಾಯಗಳು ತಮ್ಮ ಕಸುಬಿಗೆ ತಕ್ಕ ಅನುಕೂಲತೆಗಳನ್ನು ವಾಸಸ್ಥಳದಲ್ಲಿ ಅಳವಡಿಸಿಕೊಂಡಿರುವುದು ಕಂಡುಬರುತ್ತದೆ. ಇಂದಿನ ಇವರ ವಾಸಸ್ಥಳ ಕುರಿತಂತೆ ವಿವರಣೆ ನೀಡಲಾಗಿದೆ.

ಗಾಣಿಗ ಸಮುದಾಯದವರು ತಮ್ಮ ಮನೆಯನ್ನು ಕಟ್ಟುವ ಸಂದರ್ಭದಲ್ಲಿ ಸ್ಥಳದ ಆಯ್ಕೆಯಲ್ಲಿ ಕೆಲವು ಕಟ್ಟುಪಾಡುಗಳನ್ನು ಬಹಳ ಕಟ್ಟುನಿಟ್ಟಿನಿಂದ ಪಾಲಿಸುವರು. ಇವರು ಮನೆಕಟ್ಟಲು ಶುದ್ಧವಾದ ಮತ್ತು ಶ್ರೇಷ್ಠವಾದ ಸ್ಥಳವನ್ನು ಆಯ್ಕೆ ಮಾಡುತ್ತಾರೆ. ಅಂದರೆ ಐಮೂಲೆಯ, ಮೂರು ಮೂಲೆಯ, ಸ್ಮಶಾನದ ಹತ್ತಿರದ, ಜಾಗವನ್ನು ಇವರು ಇಷ್ಟಪಡುವುದಿಲ್ಲ. ಆಯತ ಇಲ್ಲವೇ ಚೌಕಾಕಾರದ ಜಾಗವನ್ನು ಇವರು ಆಯ್ಕೆಮಾಡುತ್ತಾರೆ. ಹಳೆಯ ಮನೆ ಮತ್ತು ಹಾಳುಬಿದ್ದ ಜಾಗವನ್ನು ಕೊಂಡುಕೊಳ್ಳುವಾಗ ಸಮುದಾಯದ ಅನುಭವಸ್ತ ಹಿರಿಯರ ಸಲಹೆ ಪಡೆಯುವರು. ಆ ಪ್ರದೇಶದಲ್ಲಿ ಪ್ರೇತ, ಭೂತ, ಗಾಳಿ ದೋಷಗಳಿದ್ದರೆ, ಸ್ಥಳೀಯ ಸ್ವಾಮಿಗಳಿಂದ ಶಾಸ್ತ್ರ ಕೇಳಿಸಿ ಸರಿಬಂದರೆ ಮಾತ್ರ ಕೊಂಡುಕೊಳ್ಳುತ್ತಾರೆ. ಸಾಮಾನ್ಯವಾಗಿ ಇವರು ಮನೆಯ ಆಯವನ್ನು ಅಡಿಗಳಲ್ಲಿ ಇಲ್ಲವೇ ಮನೆಯ ಯಜಮಾನನ ಮೊಳದ ಅಳತೆಯನ್ನು ಸ್ಥಳದ ಅನುಕೂಲತೆಗೆ ತಕ್ಕಂತೆ ನಿರ್ಧರಿಸುವರು. ಭೂಮಿಯ ಪೂಜೆಯನ್ನು ಒಳ್ಳೆಯ ದಿವಸ ಮಾಡುತ್ತಾರೆ.

ಗಾಣಿಗರು ವಾಸದ ಮನೆಯನ್ನು ಕಟ್ಟುವಾಗ ತಮ್ಮ ಆರ್ಥಿಕ ಸಾಮರ್ಥ್ಯವನ್ನು ಗಮನದಲ್ಲಿಟ್ಟುಕೊಂಡಿರುವರು. ಹಿಂದಿನ ಕಾಲದಲ್ಲಿ ಇವರ ವಾಸಸ್ಥಾನ, ಕಸುಬಿಗೆ ತಕ್ಕಂತೆ ರಚಿಸಿಕೊಂಡಿದ್ದು. ಇಂದು ಇವರ ವಾಸದ ಮನೆಗಳು ಬದಲಾವಣೆಗೊಂಡಿವೆ. ಗಾಣಿಗರು ತಮ್ಮ ವಾಸಸ್ಥಾನಗಳನ್ನು ಊರಿನ ಉತ್ತಮ ಸ್ಥಳ ಮತ್ತು ನಿಶ್ಯಬ್ದವಿರುವ ಓಣಿಯನ್ನು ಆಯ್ಕೆಮಾಡಿಕೊಂಡು ಮನೆಗಳನ್ನು ನಿರ್ಮಿಸಲು ಇಷ್ಟಪಡುತ್ತಾರೆ. ಇವರು ಮನೆಕಟ್ಟಲು ಬಳಸಬಹುದಾದ ಪರಿಕರಗಳು ಹತ್ತು ಹಲವುಗಳಿದ್ದರೂ ಸಹ ಹೆಚ್ಚಾಗಿ ಬೇವಿನ ಗೂಟಗಳು, ಬಿದಿರು ಮತ್ತು ಬಂಬುಗಳನ್ನೇ ಬಳಸುವರು. ಕೆಲವು ಸಾರಿ ಕಡುಬಡವರು ತಮ್ಮ ಮನೆಯನ್ನು ನೂರಕ್ಕೆ ಎಪ್ಪತ್ತರಷ್ಟು ಬೇವಿನ ಮರದಕೊಂಬೆ ಬಿದಿರು, ವಿವಿಧ ಮರಗಳ ಗೂಟಗಳು ಜೋಡಿಸಿಕೊಂಡು ಒಂದೇ ಅಥವಾ ಎರಡು ದಿನಗಳಲ್ಲಿ ತಯಾರಿಸಿಕೊಳ್ಳುವರು. ಅನುಕೂಲಕ್ಕೆ ತಕ್ಕಂತೆ

ಸುತ್ತಲೂ ೧೧, ೯, ೭ ದಪ್ಪವಾದ ಗಟ್ಟಿಯಾದ ಗೂಟಗಳನ್ನು ಹುಗಿದು ಸುತ್ತಲೂ ಬಿದಿರನ್ನು ಕಟ್ಟಿ ಮೇಲೆ ತೆಂಗಿನ ಗರಿ, ಭತ್ತದ ಹುಲ್ಲು, ಬೇವಿನ ಕೊಂಗಲಿಗಳು ಮೇಲ ಭಾಗಕ್ಕೆ ವಿವಿಧ ಅಡ್ಡ ಉದದ್ದ ಸಣ್ಣ ಬಿದಿರುಗಳನ್ನು ಅಳತೆಗೆ ತಕ್ಕಂತೆ ಹೊಂದಿಸಿ ನಾರು ಇಲ್ಲವೇ ಉರುಕೋಣೆಗಳಿಂದ ಕಟ್ಟುವರು. ಮುಂಬಾಗದಲ್ಲಿ ಬಾಗಿಲತೋಳು ಮತ್ತು ಹೊಸ್ತಿಲು ಇರಿಸುತ್ತಾರೆ. ಬಾಳಿಕೆ ಬರುವ ಕದ ಬಡಿದು ಬಾಗಿಲಿಗೆ ಇರಿಸುವರು. ಒಟ್ಟಾರೆಯಾಗಿ ಅದರ ಮೇಲೆ ಸುಣ್ಣ ಬಣ್ಣ ಬಳಿಯುತ್ತಾರೆ. ಮನೆಯೊಳಗೆ ನೀರು ಬಾರದಂತೆ ಸುತ್ತಲೂ ಮಣ್ಣು ಏರಿಸುವರು. ಈ ಗಾಣಿಗರ ಚಪ್ಪರದ ಮನೆ ರೆಡಿಯಾದಂತೆ ಒಂದು ಒಳ್ಳೆಯ ದಿವಸದ ನಕ್ಷತ್ರ ನೋಡಿ ಬೆಳಗಿನ ಜಾವ ತುಂಬಿದ ಕೊಡ, ಆಕಳು ಕರು ಹೊಳಗೆ ಪ್ರವೇಶ ಮಾಡಿಸಿ ಹಾಲು ಉಕ್ಕಿಸಿ ಮನೆಯ ದೇವರ ಪೂಜೆ ಮತ್ತು ಸ್ಥಳೀಯ ದೇವರ ಪೂಜೆ ಮಾಡುತ್ತಾರೆ.

ಹೀಗೆ ಗಾಣಿಗರು ತಮ್ಮ ವಾಸಕ್ಕೆ ಅನೇಕ ರೀತಿಯ ಹಂಚಿನ ಮನೆ, ಗುಡಿಸಲು, ಮಣ್ಣಿನ ಮನೆಗಳನ್ನು ನಿರ್ಮಿಸಿಕೊಳ್ಳುವರು. ಅದರಲ್ಲಿಯೇ ದೇವರ ಜಗುಲಿ, ಅಡಿಗೆಯ ಮನೆ, ಉಸಿ, ಬಚ್ಚಲು ಇತ್ಯಾದಿಗಳನ್ನು ಅನುಕೂಲಕ್ಕೆ ತಕ್ಕಂತೆ ಪ್ರತ್ಯೇಕಿಸುತ್ತಾರೆ.

ನಾಗರೀಕತೆಗೆ ಒಗ್ಗಿಕೊಂಡು ಇವರು ಚಪ್ಪರದ ಮನೆಯಿಂದ ಆರ್‌ಸಿಸಿಯ ಮಹಡಿಯ ಮನೆಯನ್ನು ಸಹ ತಮ್ಮ ಅನುಕೂಲಕ್ಕೆ ತಕ್ಕಂತೆ ಕಟ್ಟಿಸುತ್ತಾರೆ. ಶಾಸ್ತ್ರ ಆಯ ಮತ್ತು ವಾಸ್ತುವನ್ನು ಸಹ ಕೆಲವರು ನಂಬುವುದಿಲ್ಲ ಕೆಲವರು ನಂಬುತ್ತಾರೆ. ಅಡುಗೆಯ ಮನೆ, ದೇವರ ಮನೆ, ಮಲಗುವ ಮನೆ, ಮೈಲಿಗೆಯ ಕೋಣೆಗಳನ್ನು ಪ್ರತ್ಯೇಕಿಸಿ ಕಟ್ಟುವರು. ಗೃಹ ಪ್ರದೇಶವನ್ನು ಜಂಗಮರ ಪೂಜೆಯೊಂದಿಗೆ ಮಾಡುತ್ತಾರೆ. ಮನೆಗೆ ಏನಾದರೂ ಒಂದು ಶಾಂತಿ ಮಾಡಿಸುವರು. ಗೃಹ ಪ್ರವಾಸಕ್ಕೆ ಬಂದ ನೆಂಟರಿಗೆ ಮತ್ತು ಅಕ್ಕ ತಂಗಿಯರಿಗೆ ಹೊಸಬಟ್ಟೆ ಕೊಡುತ್ತಾರೆ. ಕೆಲವು ಕಡೆ ಬಂದವರು ಮನೆ ಕಟ್ಟಿಸಿದವರಿಗೆ ಬಟ್ಟೆಯ, ಬಂಗಾರ ಮರ್ಯಾದೆಯನ್ನು ಸಹ ಮಾಡುತ್ತಾರೆ. ಹೊಸ ಮನೆಯ ಒಳಬಾಗಿಲಲ್ಲಿ ಅಂತ್ರಗಾಯಿ ಮತ್ತು ಲಿಂಬಿಹಣ್ಣು ಕಟ್ಟುವರು. ಮನೆಯ ಹೊರಗೆ ದೃಷ್ಟಿ ತಾಗದಿರಲೆಂದು ಕುಂಬಳಕಾಯಿ. ಭೂತದ ಚಿತ್ರವನ್ನು ತೂಗುಹಾಕುವರು. ಹಿಂದೆ ಗಾಣಿಗರು ಮನೆ ದೇವರ, ಮನೆಯ ಹೊಳಗಡೆ ಬಾರದಂತೆ ಕಟ್ಟುಪಾಡುಗಳನ್ನು ಅವರವರ ಮನೆಯ ರಕ್ಷಣೆಗೆಂದು ದೇವರನ್ನು ಪ್ರತ್ಯೇಕವಾದ ಸ್ಥಳದಲ್ಲಿ ಕೂಡಿಸುತ್ತಿದ್ದರು. ಪ್ರಸ್ತುತ ಸಂದರ್ಭದಲ್ಲಿ ಗಾಣಿಗರು ಹಳ್ಳಿ ಮತ್ತು ನಗರ ಪ್ರದೇಶಗಳಲ್ಲಿ ಹೆಚ್ಚಾಗಿ ನೆಲೆಸಿರುವುದರಿಂದ ಈ ತರಹದ ಕಟ್ಟಾಚಾರಗಳು ಕಂಡುಬರುವುದಿಲ್ಲ.

### ೪.೧೧. ರಾಜಕೀಯ ಆರ್ಥಿಕ ಸ್ಥಿತಿಗತಿ

#### ಹಿನ್ನೆಲೆ

ಮಾನವ ಸಂಸ್ಕೃತಿಯ ಅವಿಭಾಜ್ಯ ಅಂಗ ರಾಜಕೀಯ. ಭಾರತ ಭೌಗೋಳಿಕವಾಗಿ ವಿಸ್ತಾರವಾದ ದೇಶವಾಗಿದ್ದು ಅಷ್ಟೇ ವಿಸ್ತಾರವಾದ ರಾಜಕೀಯ ಇತಿಹಾಸವನ್ನು ಅದು ಹೊಂದಿದೆ. ರಾಜಕೀಯ ಇತಿಹಾಸಕ್ಕೆ ದೇಶವನ್ನಾಳಿದ ರಾಜಮಹಾರಾಜರು, ಮಂತ್ರಿಮಾನ್ಯರು, ಪಾಳೆಯಗಾರರೂ ಸ್ಥಾನಿಕ ಪ್ರಭುಗಳು ನೀಡಿದ

ಕೊಡುಗೆ ಅಪಾರವಾಗಿದೆ. ಅವರ ಸಾಂಸ್ಕೃತಿಕ ಕೊಡುಗೆಯೂ ಅಷ್ಟೇ ಮಹತ್ವದ್ದಾಗಿದೆ. ಆದರೆ ಸಮಾಜದಲ್ಲಿ ಮೇಲ್ವರ್ಗಕ್ಕೆ ಸೇರಿದ ಪ್ರತಿಷ್ಠಿತ ವರ್ಗದ ಇವರುಗಳು ಕೊಡುಗೆ ಮಾತ್ರವೇ ಒಂದು ದೇಶದ ಪರಿಪೂರ್ಣ ಇತಿಹಾಸವಾಗುವುದಕ್ಕೆ ಸಾಧ್ಯವಿಲ್ಲ. ಆಳರಸರ ಖಡ್ಗಕ್ಕೆ ಹಿಡಿಯಾದ, ತೋಳಿಗೆ ಬಲವಾದ ಜನಸಾಮಾನ್ಯರ ಬೆಂಬಲ, ರಾಜಕೀಯ ಇಚ್ಛಾಶಕ್ತಿಯೂ ಬಹುಮುಖ್ಯವಾದ ಇತಿಹಾಸದ ಭಾಗವಾಗಿದೆ. ಜನಸಾಮಾನ್ಯರ, ಪ್ರಜಾವರ್ಗದ ಪ್ರಾಮಾಣಿಕ ಬೆಂಬಲವಿಲ್ಲದೆ ರಾಜನ ಸಿಂಹಾಸನ ಸ್ಥಿರವಾಗಿರಲಾರದು. ಕಾಲಕಾಲಕ್ಕೆ ತೆರಿಗೆ ನೀಡಿ ಒತ್ತಾಸೆಯಾಗಿ ನಿಂತು ಅಭಿಮಾನ ತೋರಿ ಆಡಳಿತದ ಸ್ಥಿರತೆಗೆ, ಅವರ ಮೇಲ್ಮೆಗೆ ಕಾರಣರಾದವರು ಜನಸಾಮಾನ್ಯರು. ಭಾರತೀಯ ರಾಜಕೀಯ ಇತಿಹಾಸಕ್ಕೆ ಜನಸಾಮಾನ್ಯರ, ಪ್ರಜಾವರ್ಗದ ಕೊಡುಗೆ ಅನುಪಮವಾಗಿದೆ.

ಭಾರತದಲ್ಲಿ ನೆಲೆನಿಂತ ಅಸಂಖ್ಯಾತ ಜನಸಮುದಾಯಗಳಲ್ಲಿ ಗಾಣಿಗರು ಪ್ರಮುಖರಾಗಿದ್ದು, ಅವರು ತಾವು ನೆಲೆನಿಂತ ಪ್ರದೇಶದ ರಾಜಕೀಯ ಇತಿಹಾಸಕ್ಕೆ ಸಾಕಷ್ಟು ಕೊಡುಗೆಗಳನ್ನು ನೀಡಿದ್ದಾರೆ. ಸಾವಿರಾರು ವರ್ಷಗಳಿಂದ ಗಾಣದ ವೃತ್ತಿ, ವ್ಯವಸಾಯ, ಕೈಗಾರಿಕೆ, ವ್ಯಾಪಾರ, ವಾಣಿಜ್ಯ ಮತ್ತಿತರ ಕ್ಷೇತ್ರಗಳಲ್ಲಿ ವೃತ್ತಿ ನಿರತರಾಗಿದ್ದರೂ ಅವಕಾಶ ಸಿಕ್ಕಾಗ, ಅವಶ್ಯಕವೆನಿಸಿದಾಗ ಸೈನಿಕರಾಗಿ, ಅಧಿಕಾರಿಗಳಾಗಿ, ಸ್ಥಾನಿಕ ಪ್ರಭುಗಳಾಗಿ, ಗ್ರಾಮಾಡಳಿತಗಾರರಾಗಿ ಹೆಚ್ಚಿನ ಸಾಧನೆ ಮಾಡಿದ್ದಾರೆ. ರಾಜಮಹಾರಾಜರಿಗೆ ರಾಜ್ಯ ಕಟ್ಟುವ ಪ್ರಯತ್ನದಲ್ಲಿ ನೆರವು ನೀಡಿದ್ದಾರೆ. ಹೋರಾಟದ ಸಂದರ್ಭಗಳಲ್ಲಿ ದೈರ್ಯ ಕ್ರೌರ್ಯ ಸಾಹಸಗಳನ್ನು ಪ್ರದರ್ಶಿಸಿದ್ದಾರೆ. ನಾಡು ನುಡಿ ಸಂಸ್ಕೃತಿಯ ಸಂರಕ್ಷಣೆ ಮಾಡಿದ್ದಾರೆ. ಮಹಿಳೆಯರ, ಮಕ್ಕಳ, ನೊಂದ ಜನರ ಮಾನ ಪ್ರಾಣ ರಕ್ಷಿಸಿದ್ದಾರೆ. ಅದಕ್ಕಾಗಿ ತಮ್ಮ ಜೀವನವನ್ನು ಬಲಿದಾನಗೈದಿದ್ದಾರೆ. ಇದಕ್ಕೆ ಗಾಣಿಗರು ಅಧಿಕವಾಗಿ ನೆಲೆಸಿರುವ ಪ್ರದೇಶದಲ್ಲಿ ಕಂಡುಬರುವ ಶಾಸನಗಳು, ಮೌಖಿಕವಾಗಿಯೇ ಸಾಕ್ಷಿಯಾಗಿವೆ.[೨]

ಪ್ರಾಚೀನ ಗಾಣಿಗರು ರಾಜಕೀಯವಾಗಿ ಬಹುದೊಡ್ಡ ಸಾಧನೆಯನ್ನು ಮಾಡಿದ್ದಾರೆ. ಆದರೆ ಆ ಸಾಧನೆಯನ್ನು ತಿಳಿಸುವಂತಹ ಆಧಾರಗಳು ಪರಿಪೂರ್ಣವಾಗಿ ಲಭ್ಯವಾಗಿಲ್ಲ. ಶಾಸನಗಳು, ಗ್ರಂಥಗಳು, ತಾಳೆಗರಿ ಓಲೆಗರಿಗಳು ವಿಫಲವಾಗಿಲ್ಲ. ಆಕರಗಳು, ಆಧಾರಗಳ ಕೊರತೆಯಿಂದಾಗಿ ಗಾಣಿಗ ಸಮುದಾಯದ ರಾಜಕೀಯ ಇತಿಹಾಸವನ್ನು ಸಮರ್ಪಕವಾಗಿ ತಿಳಿಯುವುದು ಸಾಧ್ಯವಾಗುತ್ತಿಲ್ಲ. ಇಂತಹ ಆಧಾರಗಳ ಕೊರತೆಯ ನಡುವೆಯೂ ಲಭ್ಯ ಸಾಮಗ್ರಿಯ ಸಹಾಯದಿಂದ ಗಾಣಿಗ ಸಮುದಾಯದ ರಾಜಕೀಯವನ್ನು ಸ್ವಲ್ಪ ಮಟ್ಟಿಗಾದರೂ ತಿಳಿಯಬಹುದಾಗಿದೆ.

ರಾಜಕೀಯವಾಗಿ ರಾಜ್ಯದ ಮತ್ತು ಜಿಲ್ಲೆಯಲ್ಲಿ ಗಾಣಿಗ ಸಮುದಾಯ ಅತ್ಯಂತ ಹಿಂದುಳಿದಿದೆ. ರಾಜಕೀಯ ಹಿಂದುಳಿದಿರುವಿಕೆಯಿಂದಾಗಿ ಆರ್ಥಿಕ ಮತ್ತು ಶೈಕ್ಷಣಿಕ ಪ್ರಗತಿ ಸಾಧ್ಯವಾಗಿಲ್ಲ ಎಂಬುದು ಸತ್ಯವಾದ ಮಾತು. ಸುಮಾರು ವರ್ಷಗಳವರೆಗೆ ಈ ಸಮುದಾಯವು ಯಾವುದೇ ರಾಜಕೀಯ ಪ್ರತಿನಿಧಿಗಳನ್ನು ರಾಷ್ಟ್ರಮಟ್ಟದಲ್ಲಿ ಮತ್ತು ರಾಜ್ಯಮಟ್ಟದಲ್ಲಿ ಹೊಂದಿದ್ದಿಲ್ಲ. ಸ್ವಾತಂತ್ರ್ಯಪೂರ್ವದಲ್ಲೇ ಸಮುದಾಯದ ಸಂಘಟನೆಗೆ ಪ್ರಯತ್ನಗಳು ನಡೆದಿದ್ದರೂ ಆ ಸಂಘಟನೆ ರಾಜಕೀಯ ಪ್ರಗತಿಗೆ ಮುಖ್ಯವಾದ ತಿರುವುಕೊಡಲಿಲ್ಲ

ಎಂಬುದು ಗಮನಾರ್ಹವಾದುದು. ಸ್ವಾತಂತ್ರ್ಯದ ನಂತರದ ದಿನಗಳಲ್ಲಿ ಸಮುದಾಯದ ಮುಖಂಡರು ಆರ್ಥಿಕ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಸಂಘಟಿತ ಪ್ರಯತ್ನ ಮಾಡಿದರಾದರೂ ಅದು ಸಮುದಾಯದ ಜನರಲ್ಲಿ ರಾಜಕೀಯ ಜಾಗೃತಿಯನ್ನು ಮೂಡಿಸಲಿಲ್ಲವೆಂದೇ ಹೇಳಬಹುದು. ಇದಕ್ಕೆ ಪ್ರಮುಖ ಕಾರಣಗಳೆಂದರೆ ಗಾಣಿಗ ಸಮುದಾಯದ ಅತ್ಯಂತ ಹಿಂದುಳಿದಿರುವಿಕೆ ಬಹುತೇಕ ಮಂದಿ ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವುದು ಮೀಸಲಾತಿಯ ಅವಕಾಶ ಇಲ್ಲದಿರುವಿಕೆ ಮುಂತಾದವು.

ರಾಜಕೀಯ ಪ್ರಜ್ಞೆ ಮತ್ತು ರಾಜಕೀಯ ಉನ್ನತಿ ಸಾಧಿಸಿದ ಹೊರತು ಗಾಣಿಗ ಸಮುದಾಯದ ಆರ್ಥಿಕವಾಗಿ ಮತ್ತು ಶೈಕ್ಷಣಿಕವಾಗಿ ಪ್ರಗತಿಯಾಗುವುದು ಕಷ್ಟಸಾಧ್ಯ ಎಂಬ ಸತ್ಯವನ್ನು ಅರಿತ ರಾಜ್ಯದ ಸಮುದಾಯದ ಮುಖಂಡರು ರಾಜ್ಯದೆಲ್ಲೆಡೆ ಸಂಚರಿಸಿ ಸಮುದಾಯವನ್ನು ರಾಜಕೀಯವಾಗಿ ಸಂಘಟಿಸುವ ಪ್ರಯತ್ನ ಮಾಡಿರುವುದನ್ನು ನಾವು ಇತ್ತೀಚಿನ ರಾಜಕೀಯ ಸನ್ನಿವೇಶದಲ್ಲಿ ನೋಡಬಹುದಾಗಿದೆ. ಇದಕ್ಕೆ ಸಮುದಾಯ ಸಂಘಗಳು ಅಡಿಪಾಯವನ್ನು ಹಾಕಿ ರಾಜಕೀಯ ಸಂಘಟನೆಗೆ ಮತ್ತು ಜಾಗೃತಿಗೆ ಕಾರಣವಾದವು ಎಂಬುವುದರಲ್ಲಿ ಆಶ್ಚರ್ಯವಿಲ್ಲ. ಜೊತೆಗೆ ಇದೊಂದೇ ಕಾರಣವಾಗದೆ ಪಂಚಾಯತ್ ರಾಜ್ಯವ್ಯವಸ್ಥೆಯು ರಾಜಕೀಯ ಪ್ರಾತಿನಿಧ್ಯವನ್ನು ದೊರಕಿಸಿ ಕೊಡುವಲ್ಲಿ ಪ್ರಮುಖ ಪಾತ್ರವಹಿಸಿದೆ. ರಾಜ್ಯದ ಮತ್ತು ಜಿಲ್ಲೆಯ ಗಾಣಿಗ ಸಮುದಾಯದಲ್ಲಿ ಇತ್ತೀಚೆಗೆ ರಾಜಕೀಯ ಪ್ರಜ್ಞೆ ಹೆಚ್ಚುತ್ತಿದ್ದು ಸ್ಥಳೀಯ ಸಂಸ್ಥೆಗಳೂ ಸೇರಿದಂತೆ ವಿಧಾನಸಭೆ ಮತ್ತು ಲೋಕಸಭೆಗೆ ಸ್ಪರ್ಧಿಸಲು ಪ್ರಾರಂಭಿಸಿದ್ದಾರೆ. ಕೆಲವರು ವಿಧಾನಸಭೆಯ ಸದಸ್ಯರಾಗಿ, ಮಂತ್ರಿಗಳಾಗಿ, ಲೋಕಸಭೆಯ ಸದಸ್ಯರಾಗಿ ಆಯ್ಕೆಯಾಗಿ ಸೇವೆ ಸಲ್ಲಿಸಿದ್ದಾರೆ.

ರಾಮಮನೋಹರ ಲೋಹಿಯಾರವರು ಹೀಗೆ ತಿಳಿಸುತ್ತಾರೆ. "ರಾಜಕೀಯ ಪಕ್ಷಗಳಲ್ಲಿ ಅಧಿಕಾರದ ಹುದ್ದೆಗಳನ್ನು ಸೂಕ್ತ ಪ್ರಮಾಣದಲ್ಲಿ ನೀಡಬೇಕಾಗಿದೆ. ಸಮಿತಿಗಳನ್ನು ರಚಿಸುವಾಗ ಶೂದ್ರ, ಹರಿಜನ ಮತ್ತು ಮುಸಲ್ಮಾನರಿಗೆ ಹೆಚ್ಚಿನ ಪ್ರಾತಿನಿಧ್ಯವನ್ನು ನೀಡಬೇಕಾಗಿದೆ. ಗಾಣಿಗ, ಕಮ್ಮಾರ, ಕ್ಷೌರಿಕ, ಅಗಸ ಮತ್ತು ಇತರ ಹಿಂದುಳಿದ ಜಾತಿಗಳಲ್ಲಿ ನೂರಾರು ಬಗೆಯ ಸಮಸ್ಯೆಗಳಿವೆ. ಪೋಲೀಸರ ದಬ್ಬಾಳಿಕೆ ಇವರ ಮೇಲೆ ನಿಲ್ಲಬೇಕು. ಇವರಿಗೆ ಎಲ್ಲಾ ಮೂಲಭೂತ ಸೌಲಭ್ಯಗಳನ್ನು ದೊರಕಿಸಿಕೊಟ್ಟು ಆ ಮೂಲಕ ಅವರ ವಿಶ್ವಾಸವನ್ನು ಗಳಿಸಿಕೊಂಡು ಈ ನತದೃಷ್ಟ ಜಾತಿಗಳ ಸಂಘಟನೆಯನ್ನು ರಾಜಕೀಯ ಕ್ಷೇತ್ರದೊಳಗೆ ತರುವುದರಿಂದ ಬಹುಜನ ಸಮಾಜ ರೂಪಿತವಾಗಬಲ್ಲದು"[೯].

ಬಹುತೇಕ ನಿರ್ಲಕ್ಷಿತ ಜಾತಿ ಬುಡಕಟ್ಟುಗಳು ಭಾರತದಲ್ಲಿ ಇನ್ನು ಅನೇಕವಾಗಿವೆ. ಅವುಗಳು ಇರುವ ಕುರಿತು ಸರ್ಕಾರ ಗಮನ ಹರಿಸುತ್ತಿಲ್ಲ. ಅಂತಹ ನಿರ್ಭಾಗ್ಯ ಜಾತಿ ಬುಡಕಟ್ಟುಗಳು ಸ್ವತಃ ತಾವು ನಿರ್ಲಕ್ಷಿತರು ಎಂದು ಹೇಳಿಕೊಳ್ಳಲು ಗಂಟಲಿಲ್ಲದ ಅಸಹಾಯಕರಾಗಿದ್ದಾರೆ. ನಾಗರೀಕತೆಯ ಪ್ರಭಾವದಿಂದಾಗಿ ಸ್ವಲ್ಪ ಸುಧಾರಿಸಿಕೊಳ್ಳುತ್ತಿರುವ ಸಮುದಾಯಗಳು ತಮ್ಮ ಮೂಲ ವೃತ್ತಿ ಬದುಕಿನ ಜಂಜಾಟಗಳಲ್ಲೆ ಕಾಲ ಕಳೆಯುತ್ತಿವೆ. ಈ ಸಮುದಾಯಗಳಿಗೆ ಅನಕ್ಷರತೆಯು ಬಹುದೊಡ್ಡ ಶಾಪವಾಗಿದೆ. ಮೊದಲೇ ಆರ್ಥಿಕವಾಗಿ ಹಿಂದುಳಿದ ಈ ಸಮುದಾಯ ಅನಕ್ಷರತೆಯಿಂದ ಇನ್ನಷ್ಟು ಹಿಂದುಳಿದು, ರಾಜಕೀಯ ಜ್ಞಾನ ಪಡೆಯುವಲ್ಲಿ ಎಷ್ಟು ಕಾಲ ಹಿಡಿಯುತ್ತದೆಯೋ?

ಇಂದು ಭಾರತ ರಾಜಕೀಯ ಸ್ತಂಭ ನಿಂತಿರುವುದೇ ಜಾತಿಗಳ ಆಧಾರದ ಮೇಲೆ. ಜನಸಂಖ್ಯಾ ದೃಷ್ಟಿಯಿಂದ ಪ್ರಭಾವವಾಗಿರುವ ಬಹುಸಂಖ್ಯಾತ ಜಾತಿಗಳು ಸರ್ಕಾರದಿಂದ ಸಿಗುವ ಅಲ್ಪ ಅವಕಾಶಗಳನ್ನು ತಮ್ಮದಾಗಿಸಿಕೊಳ್ಳುತ್ತಿವೆ ಮತ್ತು ಅಂತಹ ಸಮುದಾಯದವರು ಇಂದು ತುಂಬ ಪ್ರಜ್ಞಾವಂತರಾಗಿದ್ದು ತಾವು 'ಮತಗಳ ಠೇವಣಿ' (Voting Bank) ಎಂಬುದನ್ನು ಸೂಚ್ಯವಾಗಿ ಆಡಳಿತ ರೂಢ ರಾಜಕೀಯ ಪಕ್ಷಗಳಿಗೆ ಎಚ್ಚರಿಕೆ ಕೊಡುವುದರ ಮೂಲಕ ತಮಗೆ ಬೇಕಾದ ಸೌಲಭ್ಯಗಳನ್ನು ಹೊಂದುವ ಗುಣಗಳನ್ನು ಪಡೆದಿವೆ.

ಲೋಹಿಯಾರವರು ಗುರುತಿಸಿರುವಂತೆ "ವೃತ್ತಿ ಮೂಲ ಸಮುದಾಯಗಳು ಜನಸಂಖ್ಯಾ ದೃಷ್ಟಿಯಿಂದ ತೀರಾ ಅಲ್ಪವಾಗಿರುವುದರ ಕಾರಣವಾಗಿ ಅವುಗಳನ್ನು ಆಡಳಿತಾರೂಢ ಸರ್ಕಾರಗಳು ಅಲಕ್ಷಿಸುವ ಅಪಾಯವಿರುವುದನ್ನು ಕಾಣಬಹುದಾಗಿದೆ." ಧ್ವನಿ ಕಳೆದುಕೊಂಡಿರುವ ಈ ಸಮುದಯಗಳು ಇಂದು ತನ್ನ ಮಕ್ಕಳ ಮುಂದಿನ ಭವಿಷ್ಯಕ್ಕಾಗಿ ಸರ್ಕಾರದಿಂದ ಸೌಲಭ್ಯಗಳನ್ನು ಪಡೆಯಲು ಹಾತೊರೆಯುತ್ತಿವೆ. ವಿದ್ಯಾಭ್ಯಾಸಕ್ಕಾಗಿ ಮೀಸಲಾತಿ ಹಾಗೂ ವೃತ್ತಿಯಲ್ಲಿ ಪಾಲುಪಡೆಯುವಲ್ಲಿ ಈ ಸಮುದಾಯಗಳು ಪಡುತ್ತಿರುವ ಕಷ್ಟ ಹೇಳತೀರದ್ದಾಗಿದೆ.

ಈ ಜಿಲ್ಲೆಯಲ್ಲಿ ಎಂ.ಎಲ್.ಎ., ಎಂ.ಪಿ.ಗಳು ಈ ಸಮುದಾಯಗಳಲ್ಲಿ ಕಂಡುಬರುವುದಿಲ್ಲ. ಎಲ್ಲೋ ಒಂದು ಕಡೆ ಜಿಲ್ಲಾ ಪಂಚಾಯತ್ ಅಧ್ಯಕ್ಷರಾಗಿ, ಗ್ರಾಮ ಪಂಚಾಯತಿಗಳಲ್ಲೋ ಬೆರಳೆಣಿಕೆಯ ಸಂಖ್ಯೆಯಲ್ಲಿ ಒಬ್ಬರೊ ಇಬ್ಬರೋ ಸದಸ್ಯರಾಗಿ ಕಂಡು ಬರುವವರಾಗಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಇವರು ಮುಂದುವರೆಯುವುದು ತುಂಬ ಕಷ್ಟವಾಗಿದೆ.

ಇಡೀ ಕ್ಷೇತ್ರಕಾರ್ಯದಿಂದ ತಿಳಿದು ಬರುವುದೇನೆಂದರೆ ರಾಜಕೀಯದಲ್ಲಿ ಗಾಣಿಗರ ಪಾತ್ರ ಕೇವಲ ಹಣವಂತ ಮೇಲ್ಜಾತಿಯವರು ಹೇಳುವ ಪಕ್ಷ ಅಥವಾ ವ್ಯಕ್ತಿಗೆ ಮತ ಚಲಾಯಿಸುವ ಮಟ್ಟಕ್ಕೆ ಸೀಮಿತಗೊಂಡಿದೆ. ಹಾಗೆ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ರಾಜಕೀಯ ಕ್ಷೇತ್ರದಲ್ಲಿಯೂ ಇವರ ಪಾತ್ರ ಶೂನ್ಯವಾಗಿರುವುದನ್ನು ಕಾಣಬಹುದು. ಯಾವುದೇ ಒಂದೆರಡು ಪ್ರದೇಶಗಳಲ್ಲಿ ಜನಸಂಖ್ಯೆ ಸ್ಥಿತಿಯು ಹೆಚ್ಚಾಗಿರುವ ಕಡೆಯಲ್ಲಿ ಇವರ ತಾಲ್ಲೂಕು ಪಂಚಾಯಿತಿ ಹಾಗೂ ಗ್ರಾಮ ಪಂಚಾಯಿತಿಗಳಲ್ಲಿ ಸಣ್ಣ ಪುಟ್ಟ ಸ್ಥಾನಗಳನ್ನು ಪಡೆದಿರುವುದು ಕಂಡರೆ, ಮತ್ಯಾವುದರಲ್ಲಿ ಇವರು ಪ್ರವೇಶವಿಲ್ಲದಿರುವುದು ಕಂಡುಬರುತ್ತದೆ. ಆದರೆ ಈ ಗಾಣಿಗ ಸಮುದಾಯದವರಲ್ಲಿ ಅನಕ್ಷರತೆ, ಬಡತನಗಳು ಹೋಗುವವರೆಗೂ ಇವರ ಸ್ಥಿತಿ ಚಿಂತಾಜನಕವೆಂದೆನಿಸುತ್ತದೆ. ಇವರು ಸಮಾಜದ ಮುಖ್ಯವಾಹಿನಿಯಲ್ಲಿ ಬರಲು ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರ ಮತ್ತು ಸ್ವಯಂ ಸೇವಾ ಸಂಘಗಳು ನಿಸ್ವಾರ್ಥವಾಗಿ ಕಾರ್ಯ ನಡೆಸಿದಲ್ಲಿ ಮಾತ್ರ ಈ ಗಾಣಿಗ ಸಮುದಾಯದಂತಹ ಕನಿಷ್ಟ ಮಟ್ಟದ ಸಮುದಾಯಗಳು ತಮ್ಮ ಕಾಲಮೇಲೆ ತಾವು ನಿಂತು, ಧ್ವನಿ ತೆರೆದು ತಮ್ಮ ಹಕ್ಕುಗಳನ್ನು ಕೇಳಲೂ ಶಕ್ತವಾಗುತ್ತವೆ ಎಂದೆನಿಸುತ್ತದೆ.

**ಆರ್ಥಿಕತೆ**

ಯಾವುದೇ ಒಬ್ಬ ವ್ಯಕ್ತಿಯ ಅಥವಾ ಸಮುದಾಯದ ಸಾಮಾಜಿಕ ಸ್ಥಾನಮಾನ ನಿರ್ಧರಿಸುವಲ್ಲಿ ಆರ್ಥಿಕ

ಸ್ಥಿತಿಗತಿ ಮುಖ್ಯ ಪಾತ್ರವಹಿಸುತ್ತದೆ. ಸಮಾಜದಲ್ಲಿ ಜಾತಿ ಜಾತಿಗಳ ನಡುವೆ ಮೇಲು ಕೀಳು ಎಂಬ ಭೇದಗಳಿರುವಂತೆ ಸಮುದಾಯದಲ್ಲೂ ಸಹ ಶ್ರೀಮಂತ ಬಡವ ಎಂಬ ಶ್ರೇಣೀಕರಣಗಳಿರುವುದು ಎಲ್ಲರಿಗೂ ತಿಳಿದ ಸತ್ಯ ಸಂಗತಿ.

ದೇಶದ ಆರ್ಥಿಕ ಸ್ಥಿತಿಗತಿ, ವರಮಾನ, ಜನರ ಜೀವನಮಟ್ಟ, ಬದುಕುವ ಬವಣೆ, ಏಳು ಬೀಳು ಎಲ್ಲವೂ ಕೃಷಿಯ ಮೇಲೆ ಅವಲಂಬಿತವಾಗಿದೆ. ಇಂಡಿಯಾದ ಸಾವಿರಾರು ಜಾತಿಗಳಲ್ಲಿ ಒಂದಾಗಿರುವ ಗಾಣಿಗ ಸಮುದಾಯದ ಆರ್ಥಿಕತೆಯೂ ಈ ಪರಿಸ್ಥಿತಿಗೆ ಹೊರತಾಗಿಲ್ಲ.

ಗಾಣಿಗರ ಪ್ರಧಾನ ಆರ್ಥಿಕ ಉತ್ಪತ್ತಿಯೂ ಭೂಮಿಯಾಗಿದೆ. ಅವರು ಕೃಷಿಕರು, ಕೃಷಿಕಾರ್ಮಿಕರು ಮತ್ತು ಸಣ್ಣ ವ್ಯಾಪಾರಸ್ಥರಾಗಿದ್ದಾರೆ. ಆದರೆ ಅವರ ಸಂಪ್ರದಾಯಸ್ಥ ವ್ಯಾಪಾರವು ಎಣ್ಣೆ ತೆಗೆಯುವುದಾಗಿದೆ. ಆದರೆ ಇತ್ತೀಚಿಗೆ ಎಣ್ಣೆ ಗಿರಾಣಿಗಳು ಪ್ರಾರಂಭವಾದುದರಿಂದ ತಮ್ಮ ಮೂಲ ವೃತ್ತಿಯನ್ನೇ ಅವಂಲಬಿಸಿಲ್ಲ. ಹಳ್ಳಿಗಳಲ್ಲಿ ಎಲ್ಲೋ ಎಣ್ಣೆ ಗಾಣಿಗಳಿದ್ದರೂ ಅದನ್ನು ಅವರು ಎರಡನೆಯ ಉದ್ಯೋಗವನ್ನಾಗಿ ಬಳಸಿಕೊಂಡಿದ್ದಾರೆ. ಗ್ರಾಮಾಂತರ ಪ್ರದೇಶದ ವಿದ್ಯಾವಂತ ಗಾಣಿಗರು ಸಣ್ಣ ವ್ಯವಹಾರಗಳನ್ನು ಆಶ್ರಯಿಸಿದ್ದಾರೆ. ಕೆಲವರು ಉನ್ನತ ಹುದ್ದೆಗಳನ್ನು ಬಯಸಿದ್ದಾರೆ.[೧೪]

ಈ ಸಮುದಾಯದಲ್ಲಿ ಹಲವು ವಿಶಿಷ್ಟ ಲಕ್ಷಣಗಳಿವೆ. ಅವರೆಂದೂ ಸೋಮಾರಿಗಳಾಗಿಲ್ಲ. ದುಂದುಗಾರರಾಗಿಲ್ಲ. ಅದಕ್ಕೆ ಬದಲಾಗಿ ಬುದ್ದಿವಂತರೂ, ವ್ಯವಹಾರ ಚತುರರೂ ವೃತ್ತಿ ಜಾಣ್ಮೆಯವರೂ ಆಗಿದ್ದಾರೆ. ಎಷ್ಟೇ ಕಷ್ಟಕಾರ್ಪಣ್ಯಗಳು, ತೊಂದರೆ ತಾಪತ್ರಯಗಳು ಎದುರಾದರೂ ಕಷ್ಟಪಟ್ಟು ದುಡಿದು ಜೀವನ ನಡೆಸಿದ ಸ್ವಾಭಿಮಾನಿಗಳು. ಹಾಗೆಯೇ ಸಾಹಸಶೀಲರೂ ಹೌದು. ದುಡಿಮೆಯನ್ನು ಪ್ರಾಮಾಣಿಕವಾಗಿ ಶ್ರದ್ಧೆಯಿಂದ ಮಾಡುತ್ತಾ ಬಂದವರು. ತಾವು ಹಿಡಿದ ಯಾವುದೇ ವೃತ್ತಿಯಲ್ಲಿ ಶ್ರೇಷ್ಠತೆಯನ್ನು ಸಾಧಿಸಲು ಸದಾ ಪ್ರಯತ್ನಿಸುವವರು. ಈ ಕಾರಣಗಳಿಂದಾಗಿ ಅವರು ಇತರೆ ಸಮುದಾಯಗಳಿಗಿಂತ ಮುಂದುವರಿದಿದ್ದಾರೆ. ತಮ್ಮ ಮಕ್ಕಳನ್ನು ಆಲಸಿಗಳಾಗಲು ಬಿಡುವುದಿಲ್ಲ. ಯಾವುದಾದರೂ ಕೆಲಸದಲ್ಲಿ ತೊಡಗಿಸಿ ಬೆವರಿನ ಬೆಲೆಯ ಕಷ್ಟ ಏನೆಂಬುದನ್ನು ಮನವರಿಕೆ ಮಾಡಿಕೊಡುತ್ತಾರೆ. ಕೆಲಸವಿಲ್ಲದೆ ವ್ಯರ್ಥವಾಗಿ ಅಲೆಯುತ್ತಿದ್ದರೆ ಹೊಲದಲ್ಲಿ ಕೂಲಿ ಕೆಲಸಕ್ಕೆ ಅವರನ್ನು ಕಳಿಸುತ್ತಾರೆ. ಹತ್ತು ಹನ್ನೆರಡು ವರ್ಷದ ಮಕ್ಕಳು ಕೈಗೆ ಬಂದರೆ ಸಾಕು ಅವರು ತಮ್ಮೊಂದಿಗೆ ದುಡಿದು ಸಹಕರಿಸುತ್ತಾರೆಂದು ಸಂತೋಷ ಪಡುತ್ತಾರೆ. ತಮಗೆ ಮಕ್ಕಳಿದ್ದಷ್ಟು ಒಳ್ಳೆಯದೆಂದು ಭಾವಿಸುವರು. ಅವರೆಲ್ಲ ಕೆಲಸ ಮಾಡಲು ಕೈಗೆ ಬಂದರೆ ಬಡತನ ನಿವಾರಣೆಯಾಗುತ್ತದೆಂಬ ಭಾವನೆ ಇವರಲ್ಲಿ ಕಂಡುಬರುತ್ತದೆ. 'ಹುಟ್ಟಿಸಿದ ಶಿವ ಹುಲ್ಲು ಮೇಯಿಸುತ್ತಾನೆಯೇ' ಎಂಬ ನಾಣ್ಣುಡಿ ಅವರ ತಲೆಯಲ್ಲಿದೆ. ಅಂದರೆ ಶಿವನು ಹುಟ್ಟಿದ ಮಕ್ಕಳಿಗೆ ಅನ್ನ ಕೊಟ್ಟೆ ಕಳಿಸುತ್ತಾನೆಂಬುದು ಅವರ ನಂಬಿಕೆ. ಹೀಗಾಗಿ ಅವರು ಚಳಿ, ಗಾಳಿ, ಮಳೆ, ಬಿಸಿಲೆನ್ನದೆ ಬೆವರು ಸುರಿಸಿ ಬದುಕನ್ನು ಸಾಗಿಸುತ್ತಾರೆ.

"ಕೈಗಾರಿಕೀಕರಣ ಮತ್ತು ಆಧುನಿಕ ಶಿಕ್ಷಣಗಳಿಂದ ಶ್ರೇಣೀಕೃತ ಜಾತಿ ವ್ಯವಸ್ಥೆ ಮತ್ತು ವೃತ್ತಿ ರಚನೆಗಳ ನಡುವಿನ ಅಪಸರಣ ಕ್ಷೀಣಿಸಿ ಜಾತ್ಯತೀತ ಕಸುಬುಗಳ ಹುಟ್ಟಿಗೆ ಕಾರಣವಾಯಿತು. ಮುಂದೆ ಅದು ಮಾನವ

ಸಮುದಾಯಕ್ಕೆ ಹೊಸ ಬಗೆಯ ಜ್ಞಾನ ಮತ್ತು ಕೌಶಲ್ಯಗಳನ್ನು ದೊರಕಿಸಿಕೊಡಲು ಸಹಾಯಕವಾಯಿತು. ಔದ್ಯೋಗಿಕ ಶೋಧಗಳು ಸಮಾಜದ ಕೆಳಗಿನ ಸ್ತರದ ಜನರು ಸುಲಭವಾಗಿ ನಿರ್ವಹಿಸಲು ಸಾಧ್ಯವಾಗುವ ಉದ್ಯೋಗಾವಕಾಶಗಳನ್ನು ಕಲ್ಪಿಸಿದವು. ಜೊತೆ ಜೊತೆಯಲ್ಲೇ ಹೊಸ ಸ್ಥಾನಮಾನವನ್ನು ಸೃಷ್ಟಿಸಿದವು. ಇದು ಪ್ರತಿಯೊಂದು ಮಾನವ ಗುಂಪು ಕೂಡ ಜಾತಿ ಕಸುಬಿನಿಂದ ಜಾತ್ಯತೀತ ಕಸಬಿಗೆ ಹೋಗಲು ಅನುವು ಮಾಡಿಕೊಟ್ಟಿತು." (ಅಂಬಳಿಕೆ, ಹಿರಿಯಣ್ಣ ೧೯೯೪, ೮೧-೮೨). ಕೈಗಾರಿಕೀಕರಣದಿಂದಾಗಿ ಜಾತಿ ಕಸುಬಿನಿಂದ ಜಾತ್ಯತೀತ ಕಸುಬಿಗೆ ಹೋಗಲು ಅನುವಾಯಿತು. ವಂಶಪರಂಪರಾಗತದಿಂದ ಬಂದಂಥ ವೃತ್ತಿಗಳನ್ನು ಕೈ ಬಿಟ್ಟು ಹೊಸ ವೃತ್ತಿಯನ್ನು ಅವಲಂಬಿಸಲು ಪ್ರಾರಂಭಿಸಿದರು. ಇದರಿಂದ ಉನ್ನತ ವರ್ಗದವರಿಗೆ ಸಿಗುತ್ತಿದ್ದ ಸ್ಥಾನಮಾನಗಳು ಕೆಳವರ್ಗದವರಿಗೆ ಆಗುವಂತಾಯಿತು. ಈ ಸಾಮಾಜಿಕ ಚಲನೆಗೆ ಶಿಕ್ಷಣವೇ ಕಾರಣ. ಅದು ಹೊಸ ಮೌಲ್ಯಗಳನ್ನು ಒದಗಿಸುವುದರ ಜೊತೆಗೆ ಹೊಸ ಕೌಶಲ್ಯಗಳನ್ನು ನೀಡಿತು. ಸಾಮಾಜಿಕ ಮತ್ತು ಆರ್ಥಿಕ ಕ್ಷೇತ್ರದಲ್ಲಿ ನಡೆದ ಈ ಬದಲಾವಣೆ ಉನ್ನತ ಸ್ಥಾನ ಪಡೆಯಲು ಪ್ರೇರಣೆ ನೀಡಿತು.

ಇತ್ತೀಚೆಗೆ ಗಾಣಿಗ ಸಮುದಾಯದವರು ರೈತರ ಆಳಾಗಿ ದುಡಿಯುತ್ತಾರೆ. ದಿನಗೂಲಿಗಳಾಗಿ ಒಂಟಿಯಾಗಿ ಹೋಗಿ ದುಡಿಯುತ್ತಿದ್ದಾರೆ. ಇವರು ಹೀಗೆ ಕೃಷಿ ಕಾರ್ಮಿಕರಾಗಿದ್ದು ದುಡಿಯುವುದರ ಉದ್ದೇಶ ಮುಂದೆ ಜೀವನಕ್ಕೆ ಬೇಕಾದ ದವಸ ಧಾನ್ಯಗಳನ್ನು ಶೇಖರಿಸಿಟ್ಟುಕೊಳ್ಳುವುದು. ಕೆಲವೊಂದು ಸಂದರ್ಭದಲ್ಲಿ ತಮ್ಮ ಊರಿನ ಕೂಲಿ ಕೆಲಸ ಸಿಗದಿದ್ದರೆ ಬೇರೆ ಊರಿಗೆ ವಲಸೆ ಹೋಗುತ್ತಾರೆ. ಅಲ್ಲಿಯ ರೈತರಲ್ಲಿ ಸಾಲವನ್ನು ಮಾಡಿ ಅವರಲ್ಲಿಯೇ ಆಳಾಗಿ ದುಡಿಯುತ್ತಿರುವುದು ಕಾಣಬಹುದು. "ಆಳಾಗಿ ದುಡಿದು ಅರಸನಾಗಿ ಉಣ್ಣು" ಎಂಬ ಗಾದೆ ಪ್ರಸ್ತುತ ಬಡ ಜನತೆಗೆ ಅನ್ವಯಿಸಲಾರದ ಪರಿಸ್ಥಿತಿ ಬಂದೊದಗಿದೆ. ಗಾಣಿಗರು ಅಧಿಕವಾಗಿ ವಾಸಿಸುವ ಪ್ರದೇಶ ಖುಷ್ಕಿ ಭೂಮಿಯಾಗಿದ್ದು ಮಳೆಯನ್ನು ನಂಬಿ ಕೃಷಿ ಮಾಡುವ ಬದುಕು ರೂಪಿಸಿಕೊಳ್ಳುವ ಪರಿಸ್ಥಿತಿ ಇದೆ. ಇಂತಹ ಪರಿಸ್ಥಿತಿಯಲ್ಲೂ ಸದಾ ಬರದ ದವಡೆಯಲ್ಲಿ ನಲುಗಿದರೂ ಗಾಣಿಗರು ಬೆವರು ಸುರಿಸಿ ದುಡಿದು ಬದುಕಿದವರು. ದೇಶದ ಸಂಪತ್ತನ್ನು ವೃದ್ಧಿಪಡಿಸಿದವರು. ತುಂಡು ಬಟ್ಟೆಯಲ್ಲಿಯೂ ತೃಪ್ತಿಯಿಂದ ಶ್ರೀಮಂತರಂತೆ ಬಾಳಿದರು.

ಗಾಣಿಗರ ಮೂಲವೃತ್ತಿ ಗಾಣ ಆಡಿಸುವುದು, ಗಾಣದ ಮೂಲಕ ಎಣ್ಣೆ ತೆಗೆದು ಮಾರುವುದಾಗಿದೆ. ಕಾಲ ಬದಲಾದಂತೆ ಗಾಣದ ವೃತ್ತಿಯು ಇಲ್ಲದಾಗಿದೆ. ಗಾಣವನ್ನು ನೋಡಬೇಕೆಂದರೂ ಅದರ ಅವಶೇಷಗಳು ಕಾಣಸಿಗುವುದಿಲ್ಲ. ಆಧುನಿಕತೆಯಿಂದಾಗಿ ಎತ್ತಿನ ಗಾಣದ ಬದಲಿಗೆ ಯಾಂತ್ರೀಕೃತ ವಿದ್ಯುತ್ ಚಾಲಿತ ಗಾಣಗಳು ಹುಟ್ಟಿಕೊಂಡವು. ಆದರೆ ಅವುಗಳ ಉತ್ಪಾದನೆ ಸಾಮರ್ಥ್ಯ ಅಲ್ಪ ಪ್ರಮಾಣದ್ದಾಗಿತ್ತು. ವಿದ್ಯುತ್ ಚಾಲಿತ ಗಾಣಗಳು ಕೇವಲ ಕುಸುಬೆ ಎಣ್ಣೆ ಉತ್ಪಾದನೆಗೆ ಮಾತ್ರ ಸೀಮಿತವಾದವುಗಳಾಗಿವೆ. ಜನಸಂಖ್ಯೆ ಬೆಳೆದಂತೆಲ್ಲಾ ಎಣ್ಣೆಯ ಬೇಡಿಕೆ ಹೆಚ್ಚಾಯಿತು. ಅದರ ಪರಿಣಾಮವಾಗಿ ಆಯಿಲ್ ಮಿಲ್ಸ್ ಆರಂಭವಾದವು. ಇದರೊಂದಿಗೆ ಎಣ್ಣೆ ಉತ್ಪಾದನೆ ಒಂದು ದೊಡ್ಡ ಉದ್ಯಮವಾಗಿ ಪರಿವರ್ತಿತವಾಯಿತು. ಎಣ್ಣೆ ಉದ್ಯಮವನ್ನು ಸ್ಥಾಪಿಸಿದವರು ಗಾಣಿಗರಲ್ಲ. ಬೇರೆ ಬೇರೆ ಜನಾಂಗದ ಬಂಡವಾಳದಾರರು ಮಿಲ್ಸ್‌ಗಳನ್ನು ಸ್ಥಾಪಿಸಿದರು.

ಕೆಲವರು ಉತ್ಪಾದನೆ ವ್ಯವಹಾರಗಳಲ್ಲಿ ಮೇಲುಗೈ ಸಾಧಿಸಿ "ಆಯಿಲ್ ಕಿಂಗ್" ಎಂಬ ಪ್ರಶಸ್ತಿಗೆ ಪಾತ್ರರಾದರು. ಆಯಿಲ್ ಮಿಲ್ ಆರಂಭಿಸಲು ಸಾಕಷ್ಟು ಬಂಡವಾಳಬೇಕು. ಲಿಂಗಾಯತ ಗಾಣಿಗರು ಅಷ್ಟೊಂದು ಬಂಡವಾಳ ಹಾಕುವ ಆರ್ಥಿಕ ತಾಕತ್ತಿಲ್ಲದವರು ಮತ್ತು ವ್ಯಾವಹಾರಿಕವಾಗಿ ಪರಿಣತಿ ಹೊಂದಿದವರಾಗಿಲ್ಲವಾದ್ದರಿಂದ ಆಧುನಿಕ ಯುಗದಲ್ಲಿ ಯಾವ ಲಿಂಗಾಯತ ಗಾಣಿಗನೂ ತನ್ನ ಮೂಲ ವೃತ್ತಿಯನ್ನು ಆಧುನೀಕರಣಕ್ಕೆ ಅನುವುಗೊಳಿಸಿ ಹೆಸರು ಮಾಡಿದ ಉದಾಹರಣೆಗಳಿಲ್ಲ. ಮೂಲ ಗಾಣಿಗರು ಗಾಣದ ವೃತ್ತಿಯನ್ನು ಕೈ ಬಿಟ್ಟಿದ್ದಾರೆ. ಹೆಚ್ಚಾಗಿ ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ.[೨೫]

**ವ್ಯವಸಾಯ**

ಗಾಣಿಗರು ಗಾಣದ ವೃತ್ತಿಯನ್ನು ಕೈಬಿಟ್ಟು ಮುಖ್ಯ ಉದ್ಯೋಗ ಕೃಷಿ ಮತ್ತು ಪಶುಪಾಲನೆ ಇವೆರಡೂ ವೃತ್ತಿಗಳೂ ಸಮುದಾಯದ ಆರ್ಥಿಕ ಕಣ್ಣುಗಳಾಗಿದ್ದು ಹಲವು ಶತಮಾನಗಳಿಂದ ಸಮಾಜವನ್ನು ಕೈ ಹಿಡಿದು ಮುನ್ನಡೆಸಿಕೊಂಡು ಬಂದಿದೆ. ಸದಾ ಮಳೆ ಬೆಳೆಯನ್ನು ಕುರಿತು ಮಾತನಾಡುತ್ತಾ ಯೋಚಿಸುತ್ತಾ ನೂರಾರು ತಲೆಮಾರುಗಳ ಸಾವಿರಾರು ವರ್ಷಗಳನ್ನು ಸವೆಸಿ ಬಂದಿರುವ ಗಾಣಿಗರು. ತಾವು ನೆಲೆನಿಂತ ಪ್ರದೇಶದಲ್ಲಿ ಮೃಗ ಜಂತುಗಳಿಗೆ ಅಂಜದೆ ದಟ್ಟವಾದ ಕಾಡು ಕಡಿದು ನಾಡನ್ನು ಮಾಡಿದ್ದಾರೆ. ಕೃಷಿಯೋಗ್ಯ ಭೂಮಿಯನ್ನಾಗಿ ಮಾಡಿದ್ದಾರೆ. ಪ್ರಕೃತಿಯ ಮಡಿಲಲ್ಲಿ ಗ್ರಾಮ ಹಳ್ಳಿ ನಗರ ಕೇರಿಗಳನ್ನು ನಿರ್ಮಿಸಿಕೊಂಡು ವಾಸಿಸುತ್ತಾ ಈ ಜನರು ಬೇಸಾಯ, ವ್ಯವಸಾಯ, ಆರಂಭ ಎಂದು ವಿವಿಧ ಹೆಸರುಗಳಿಂದ ಕರೆಯುವ ಕೃಷಿಯನ್ನು ಪ್ರೀತಿಯಿಂದ ಮಾಡುತ್ತಾ ಬಂದಿದ್ದಾರೆ. ಮಣ್ಣಿನ ಮಕ್ಕಳಾದ ಗಾಣಿಗರು ಮಳೆದ ಆಶ್ರಯದಲ್ಲಿ ವರ್ಷಕ್ಕೆ ಎರಡು ಬೆಳೆಗಳನ್ನು ಬೆಳೆಯುತ್ತಾ ಬಂದಿದ್ದಾರೆ. ನೀರಾವರಿ ಸೌಕರ್ಯವಿದ್ದ ಕಡೆ ವರ್ಷಕ್ಕೆ ಎರಡು ಬೆಳೆಗಳನ್ನು ಬೆಳೆಯುತ್ತಾ ಬಂದಿದ್ದಾರೆ. ನೀರಾವರಿ ಸೌಕರ್ಯವಿದ್ದ ಕಡೆ ವರ್ಷಕ್ಕೆ ಮೂರು ಬೆಳೆಗಳನ್ನು ಕಡ್ಡಾಯವಾಗಿ ಬೆಳೆಯುತ್ತಾರೆ. ಬಳ್ಳಾರಿ ಜಿಲ್ಲಾ ವಿಶಾಲ ಪ್ರದೇಶದಲ್ಲಿ ಹರಡಿರುವ ಗಾಣಿಗರು ಅಲ್ಲಿನ ಪರಿಸರ ಸನ್ನಿವೇಶಗಳಿಗೆ ತಕ್ಕಂತೆ ವಿವಿಧ ರೀತಿಯ ಬೆಳೆಗಳನ್ನು ಕಡ್ಡಾಯವಾಗಿ ಬೆಳೆಯುತ್ತಾರೆ. ಜೋಳ, ಶೇಂಗಾ, ಸೂರ್ಯಕಾಂತಿ, ತೊಗರಿ, ಸಜ್ಜಿ, ನವಣೆ, ಅಲಸಂದಿ, ಕಬ್ಬು, ಬ್ಯಾಡಿಗಿ ಮತ್ತು ಭತ್ತ ಈ ಬೆಳೆಗಳನ್ನು ಬೆಳೆಯುತ್ತಾರೆ. ದಕ್ಷಿಣ ಕರ್ನಾಟಕದ ಜನರ ಮುಖ್ಯ ಬೆಳೆ ರಾಗಿಯಾದರೆ ಜೋಳ ಉತ್ತರ ಕರ್ನಾಟಕ ವಿವಿದೆಡೆ ಗಾಣಿಗರ ಮುಖ್ಯ ಬೆಳೆಯಾಗಿದೆ. ಭತ್ತವನ್ನು ಕೆರೆ ನದಿ ನೀರಾವರಿ ಸೌಕರ್ಯವಿದ್ದ ಪ್ರದೇಶದಲ್ಲಿ ಬೆಳೆಯುತ್ತಾರೆ. ಈ ಧಾನ್ಯಗಳು ಜನರ ಮುಖ್ಯ ಆಹಾರವೂ ಆಗಿದೆ. ಬೆಳೆಗಳಲ್ಲಿ ಬಹಳ ಮುಖ್ಯವಾದ್ದು ಜೋಳ. ಇದು ರೈತರಿಗೆ ಭಾಷೆ ಕೊಟ್ಟ ದಾನ್ಯ ಎಂತಹ ಬರಗಾಲದ ಸಂದರ್ಭದಲ್ಲಿಯೂ ಅಲ್ಪಸ್ವಲ್ಪ ಮಟ್ಟಿಗಾದರೂ ಬೆಳೆಯಾಗಿ ನಂಬಿದ ಜನರನ್ನು ಸಲಹುತ್ತದೆ. ರೊಟ್ಟಿ, ಮುದ್ದಿ ನೀಡುತ್ತದೆ. ಹಡಗಲಿ, ಹೆಚ್.ಬಿ. ಹಳ್ಳಿ, ಹೊಸಪೇಟೆ ಮತ್ತಿತರ ಕಡೆಗಳಲ್ಲಿ ನದಿತೀರದ ರೈತರು ತರಕಾರಿ ಕಾಯಿಪಲ್ಯಗಳನ್ನು ಬೆಳೆಯುತ್ತಾರೆ. ಜೊತೆಗೆ ಮತ್ತಿತರ ಬೆಳೆಗಳನ್ನು ತೋಟಗಳಲ್ಲಿ ವಿಶೇಷವಾಗಿ ಬೆಳೆಯುತ್ತಾರೆ.

ಕೋಟಿ ವಿದ್ಯೆಗಿಂತಲೂ ಮೇಟಿ ವಿದ್ಯೆಯೇ ಮೇಲು ಎಂದು ತಿಳಿದಿರುವ ಗಾಣಿಗ ಸಮುದಾಯದ ರೈತರು ಈ ಎಲ್ಲಾ ಮುಖ್ಯ ಬೆಳೆಗಳೊಂದಿಗೆ ತೆಂಗು, ಬಾಳೆ, ಮಾವು, ಮತ್ತಿತರ ಕೃಷಿ ಮಾಡುತ್ತಾರೆ. ನಗರ ಪ್ರದೇಶಗಳಿಗೆ ಸಮೀಪವಿರುವ ರೈತರು ಟೊಮೇಟೋ, ಬದನೆಕಾಯಿ, ಮೆಣಸಿನಕಾಯಿ, ಸೌತೆ, ಬೆಂಡೆ, ಮೂಲಂಗಿ ಇತ್ಯಾದಿ ಸೊಪ್ಪು ತರಕಾರಿಗಳನ್ನು ಬೆಳೆಯುತ್ತಾರೆ. ಅಲ್ಲದೆ ರೇಷ್ಮೆ, ಕಬ್ಬು, ಹತ್ತಿ ಮೊದಲಾದವುಗಳನ್ನು ಸಹ ಬೆಳೆಯುತ್ತಾರೆ. ಕುಟುಂಬ ಜೀವನಕ್ಕೆ ಅಗತ್ಯವಾದ ಎಲ್ಲಾ ದವಸಧಾನ್ಯ ಕಾಳುಕಡ್ಡಿ ಪದಾರ್ಥಗಳನ್ನು ರೈತರು ಬೆಳೆಯುತ್ತಾ ಬಂದಿದ್ದಾರೆ. ಇದರಿಂದಾಗಿ ಎಲ್ಲಾ ಹಳ್ಳಿಗಳು ಮತ್ತು ಹಳ್ಳಿಯ ಕುಟುಂಬಗಳು ಸ್ವಾವಲಂಬಿಯಾಗಿದ್ದವು.

### ವ್ಯವಸಾಯ ಚಕ್ರ

ದವಸ ಧಾನ್ಯ ಬೆಳೆಯುವ ಪವಿತ್ರ ಕಾಯಕವಾದ ವ್ಯವಸಾಯ ಗಾಣಿಗ ರೈತನಿಗೆ ಕೇವಲ ಒಂದು ವೃತ್ತಿ ಅಲ್ಲ. ಅದು ಅವನ ಧರ್ಮವು ಆಗಿದೆ. ಪ್ರಾಯಶಃ ರೈತನಾದವನು ತಾನು ಮಾಡುವ ವ್ಯವಸಾಯವನ್ನು ಬಿಟ್ಟು ಇತರೆ ವಿಷಯವನ್ನು ಮಾತನಾಡುವುದೇ ಕಡಿಮೆ. ಎಲ್ಲ ಮಾತು, ವರ್ತನೆ ಅದರ ಸುತ್ತಲೇ ಸುತ್ತುತ್ತಿರುತ್ತದೆ. ರೈತರ ವ್ಯವಸಾಯ ಚಕ್ರ ಯುಗಾದಿ ಹಬ್ಬದಿಂದ ಆರಂಭವಾಗುತ್ತದೆ. ಭಾರತೀಯರಿಗೆ ಯುಗಾದಿ ಅತ್ಯಂತ ಮಹತ್ವದ ಹಬ್ಬ. ಹೊಸವರ್ಷದ ಮೊದಲ ದಿನ ಮುಂಗಾರು ಮಳೆಯ ಆರಂಭವೂ ಅಂದೇ ಆಗಿರುತ್ತದೆ. ಆ ಸಂದರ್ಭದಲ್ಲಿ ಮಳೆ ಬಿದ್ದೆ ಬೀಳುತ್ತದೆ. ಚೈತ್ರ, ಜೇಷ್ಠ, ವೈಶಾಖಗಳಲ್ಲಿ ಬೀಳುವ ಮಳೆಗೆ ಭೂಮಿಯನ್ನು ಹದ ಮಾಡುವ ಕಾರ್ಯ ಕೈಗೊಳ್ಳುತ್ತಾರೆ. ವ್ಯವಸಾಯಕ್ಕೆ ಅಗತ್ಯವಾದ ಕೂರಿಗೆ, ಸೆಡ್ಡಿ, ಮರಮುಟ್ಟು, ಆಳುಕಾಳು, ದನಕರು, ಹಗ್ಗಹುರಿ, ಕುಡಗೋಲು, ಗೊಬ್ಬರ, ಬೀಜಬಿತ್ತ ಮೊದಲಾದ ಪರಿಕರಗಳನ್ನು ಸಜ್ಜುಗೊಳಿಸಿಕೊಳ್ಳುತ್ತಾರೆ. ಉತ್ತಮ ತಳಿಯ ಎತ್ತು, ಹೋರಿಗಳ ಜೊತೆಗೆ ಕೂರಿಗೆ, ಕುಂಟೆ, ಸಡ್ಡೆ, ಹೆಗ್ಗುಂಟೆ, ಗುದ್ದಲಿ, ಸಲಿಕೆ, ಹಾರೆ, ಕುಡಗೋಲು, ಪಿಕಾಸಿ, ಕೊಡಲಿ, ಬಾಚಿ ಇತ್ಯಾದಿ ಪರಿಕರಗಳನ್ನು ಹೊಂದಿಸಿಕೊಳ್ಳುತ್ತಾರೆ.

ಮುಂಗಾರು ಮಳೆಗೆ ಉಕ್ಕಿ ಹೊಡೆದು ಭೂಮಿಯನ್ನು ಹದಗೊಳಿಸಿ ಜೇಷ್ಠ ಆಷಾಢ ಮಾಸದಲ್ಲಿ ಬಿತ್ತನೆ ಆರಂಭಿಸುತ್ತಾರೆ. ಮುಖ್ಯ ಬೆಳೆಯಾದ ಜೋಳವನ್ನು ಬೆಳೆಯುತ್ತಾರೆ. ಒಳ್ಳೆಯ ಮಳೆಯಾದರೆ ಮಹರ್ನಾಮಿ ಹಬ್ಬದ ಹೊತ್ತಿಗೆ ಮಾರುದ್ದ ಹೊಡೆ ಬಂದಿರುತ್ತದೆ. ಕಾಲಕಾಲಕ್ಕೆ ಬರುವ ಮಳೆಯಿಂದಾಗಿ ಜೋಳ ಹೊಲದಲ್ಲಿ ಅಕ್ಕಡಿಸಾಲು ಚೆನ್ನಾಗಿ ಬೆಳೆಯುತ್ತದೆ. ಐದು ಅಥವಾ ಆರು ಅಡಿಗಳ ಅಂತರದಲ್ಲಿರುವ ಈ ಅಕ್ಕಡಿ ಸಾಲಿನಲ್ಲಿ ಅಲಸಂದಿ, ತೊಗರಿ, ಸಾಸಿವೆ, ಔಡಲ ಬೆಳೆಯುತ್ತಾರೆ. ಹೊಲದ ಸುತ್ತಲೂ ಬದುವಿನ ಪಕ್ಕದಲ್ಲಿ ಸಜ್ಜೆ, ಪುಂಡಿ, ಎಳ್ಳು ಸಾಲುಗಳು ಇರುತ್ತದೆ. ಉತ್ತಮವಾದ ಗೊಬ್ಬರ, ಹದವಾದ ಮಳೆ, ಒಳ್ಳೆಯ ಆರೈಕೆಯಿಂದ ನವೆಂಬರ್ ಅಥವಾ ಡಿಸೆಂಬರ್ ತಿಂಗಳ ವೇಳೆಗೆ ಮಾಗಿ ಒಣಗಿ ಕಟಾವಿಗೆ ಬರುತ್ತದೆ.

ಸುಗ್ಗಿಯ ಕಾಲದಲ್ಲಿ ರೈತರ ಸಂಭ್ರಮ ಮುಗಿಲು ಮುಟ್ಟುತ್ತದೆ. ವರ್ಷದ ಪರಿಶ್ರಮಕ್ಕೆ ಭೂಮಿತಾಯಿ ಒಳ್ಳೆಯ ಫಸಲನ್ನು ನೀಡಿರುತ್ತಾಳೆ. ಜೋಳ ಕುಯ್ದು ಬಣವೆ ಹಾಕುತ್ತಾರೆ. ಕಣ ಮಾಡಿ ಹರಿ ಹರಡಿ

ರೋಣಗುಂಡು ಹೊಡೆದು ತೆನೆಯಿಂದ ಜೋಳವನ್ನು ಬೇರ್ಪಡಿಸುತ್ತಾರೆ. ಧಾನ್ಯವನ್ನು ರಾಶಿಮಾಡಿ ಆಯಗಾರರು ದೇವರುಗಳಿಗೆ ನಿಯಮಾನುಸಾರ ಪಡಿಯನ್ನು ನೀಡಿ, ಬೇಡಿ ಬಂದವರಿಗೆ ಒಂದಷ್ಟು ಧಾನ್ಯವನ್ನು ಭಿಕ್ಷೆಯ ರೂಪದಲ್ಲಿ ನೀಡಿ ಉಳಿದದ್ದನ್ನು ಮನೆಗೆ ಸಾಗಿಸುತ್ತಾರೆ. ಹಗೇವು ಅಥವಾ ಮಾರಾಟಕ್ಕೆ ಕೊಡುತ್ತಾರೆ. ಕಾಳು ಬೇರ್ಪಟ್ಟ ಒಣಹುಲ್ಲು ಅತ್ಯಮೂಲ್ಯವಾಗಿದ್ದು ಜಾನುವಾರಗಳಿಗಾಗಿ ಹಿತ್ತಲಲ್ಲಿ ಅಥವಾ ಹೊಲದಲ್ಲಿ ಬಣವೆ ಹಾಕಿ ಸಂಗ್ರಹಿಸುತ್ತಾರೆ. ಅಲ್ಲಿಗೆ ರೈತರ ಶ್ರಮ ಸಾರ್ಥಕವಾಗುತ್ತದೆ. ನೆಮ್ಮದಿಯ ಉಸಿರು ಬಿಡುತ್ತಾರೆ. ಉಳಿದ ಒಂದೆರಡು ತಿಂಗಳು ಅವರಿಗೆ ರಜೆಯ ಕಾಲ. ಹಬ್ಬ ಹರಿದಿನ ಜಾತ್ರೆ ಉತ್ಸವಗಳಲ್ಲಿ, ಮದುವೆ ಮತ್ತಿತರ ಶುಭ ಕಾರ್ಯಗಳಿಗೆ ಆ ಕಾಲವನ್ನು ಸದ್ವಿನಿಯೋಗ ಮಾಡುತ್ತಾರೆ. ಇದು ಜೋಳ ಬೆಳೆಯುವ ವ್ಯವಸಾಯದ ಚಿತ್ರ ಮಾತ್ರವೇ ಅಲ್ಲ. ರೈತರು ಬೆಳೆಯುವ ಎಲ್ಲಾ ಬೆಳೆಗಳಿಗೂ ಇದು ಅನ್ವಯಿಸುತ್ತದೆ. ಭತ್ತ, ಜೋಳ, ಕಾಳುಕಡಿ ಜೀವನಾವಶ್ಯಕವಾದ ಎಲ್ಲಾ ಕೃಷಿ ಉತ್ಪನ್ನಗಳ ಸಂದರ್ಭದಲ್ಲಿಯೂ ರೈತರು ಇದೇ ಮುತುವರ್ಜಿಯಿಂದ ಕಾರ್ಯೋನ್ಮುಖರಾಗುತ್ತಾರೆ.[೯]

ವ್ಯವಸಾಯದಂತೆ ಪಶುಪಾಲನೆಯೂ ಸಹ ಗ್ರಾಮೀಣ ಗಾಣಿಗ ರೈತರ ಜೀವನದ ಅವಿಭಾಜ್ಯ ಅಂಗ. ಕೃಷಿಗೆ ಪೂರಕವಾದ ಉಪವೃತ್ತಿಯಂತೆ ಪಶುಪಾಲನೆ ಇದ್ದರೂ ಅವರ ಏಳಿಗೆ, ಆರ್ಥಿಕ ಭದ್ರತೆಗೆ, ಜೀವನ ಮಟ್ಟಕ್ಕೆ ಜಾನುವಾರಗಳು ಸಹ ಕಾರಣವಾಗಿದ್ದವು. ಎತ್ತು, ಹೋರಿ, ಎಮ್ಮೆ, ಹಸು, ಆಕಳು, ಪಶುಪಾಲನೆಯಲ್ಲಿ ಮುಖ್ಯವಾಗಿದ್ದವು. ಗಾಣಿಗ ರೈತರು ಹೋರಿಗಳನ್ನು ಖುಷಿಗಾಗಿ ಸಾಕಿದರೆ ಎತ್ತುಗಳನ್ನು ಹೊಲ ಗದ್ದೆಗಳನ್ನು ಉಳುಮೆ ಮಾಡಲು, ಗಾಡಿ ಹೊಡೆಯಲು ಸಾಕುತ್ತಿದ್ದರು. ಪಶುಪಾಲನೆ ಇದ್ದರೂ ಅವರ ಏಳಿಗೆ, ಆರ್ಥಿಕ ಭದ್ರತೆಗೆ, ಜೀವನ ಮಟ್ಟಕ್ಕೆ ಜಾನುವಾರಗಳು ಸಹ ಕಾರಣವಾಗಿದ್ದವು. ಒಂದು ಕುಟುಂಬದ ಆರ್ಥಿಕ ಮಟ್ಟವನ್ನು ಆ ಮನೆಯ ಜಾನುವಾರಗಳು ನಿರ್ಧರಿಸುತ್ತಿದ್ದವು. ಎತ್ತು, ಹೋರಿ, ಎಮ್ಮೆ, ಹಸು, ಆಕಳು, ಪಶುಪಾಲನೆಯಲ್ಲಿ ಮುಖ್ಯವಾಗಿದ್ದವು. ಗಾಣಿಗ ರೈತರು ಹೋರಿಗಳನ್ನು ಖುಷಿಗಾಗಿ ಸಾಕಿದರೆ ಎತ್ತುಗಳನ್ನು ಹೊಲಗದ್ದೆಗಳನ್ನು ಉಳುಮೆ ಮಾಡಲು, ಗಾಡಿ ಹೊಡೆಯಲು ಸಾಕುತ್ತಿದ್ದರು. ವ್ಯವಸಾಯದಲ್ಲಿ ರೈತನ ಶ್ರಮದಷ್ಟೇ ಶ್ರಮವನ್ನು ಎತ್ತುಗಳು ಹಾಕುತ್ತಿದ್ದವು. ಪಶುಪಾಲನೆಯಲ್ಲಿ ಪ್ರಮುಖವಾಗಿದ್ದ ಎಮ್ಮೆ ಆಕಳುಗಳು ಹೈನುಗಾರಿಕೆಯಲ್ಲಿ ಬಹು ದೊಡ್ಡ ಪಾತ್ರ ವಹಿಸುತ್ತಿದ್ದವು. ಹೈನುಗಾರಿಕೆ ಜನರ ದೈಹಿಕ ಮತ್ತು ಕೌಟುಂಬಿಕ ಪ್ರಗತಿಗೆ ಪೂರಕವಾಗಿತ್ತು. ಹಾಲು ಮೊಸರು ಮಜ್ಜಿಗೆ ಬೆಣ್ಣೆ ತುಪ್ಪ ಗಿಣ್ಣು ಇತ್ಯಾದಿ ಉತ್ಪನ್ನಗಳು ರೈತರಿಗೆ ವರದಾನವಾಗಿದ್ದವು. ಭಾರತೀಯ ಪರಂಪರೆಯಲ್ಲಿ ಹಸುವಿಗೆ ಬಹಳ ಪವಿತ್ರ ಭಾವನೆ ಗೌರವ ಇದೆ. ಹಸುವನ್ನು ಗೋವು ಗೋಮಾತೆ ಎಂದು ಹಿಂದಿನಿಂದಲೂ ಪೂಜಿಸುತ್ತಾ ಬರಲಾಗಿದೆ. ಗೋವುಗಳು ಗ್ರಾಮೀಣ ಗಾಣಿಗರ ಬದುಕಿನಲ್ಲಿ ಸಹಜೀವಿಗಳಾಗಿ ಅನನ್ಯ ಸಂಬಂಧ ಹೊಂದಿದ್ದವು. ಹೀಗೆ ಕೃಷಿ ಮತ್ತು ಪಶುಪಾಲನೆ ಗಾಣಿಗ ರೈತರನ್ನು ತಲೆಮಾರಿನಿಂದ ತಲೆಮಾರಿಗೆ ಕೈಹಿಡಿದು ನಡೆಸಿಕೊಂಡು ಬಂದಿವೆ.

### ೪.೧೨. ವಿಧಿ ನಿಷೇಧಗಳು

ವಿಧಿ ಎಂದರೆ ಮಾಡಲೇಬೇಕಾದ ಅಥವಾ ಅನುಸರಿಸಲೇಬೇಕಾದ ಆಜ್ಞೆ. ಅದೇ ರೀತಿ ಇಂಥದನ್ನು

ಮಾಡಕೂಡದು; ಮಾಡಬಾರದು ಎನ್ನುವುದು ನಿಷೇಧ. ಯಾವುದೇ ಸಮುದಾಯದ ಆಚರಣೆಗಳು ವಿಧಿಗಳೆನಿಸುತ್ತವೆ. ಒಂದು ಅರ್ಥದಲ್ಲಿ ಅವು ಆಯಾ ಸಮುದಾಯಗಳು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದ ಮಾನಸಿಕ ಭಾವನೆಗಳಾಗಿವೆ. ಈ ಕಾರಣದಿಂದ ಪ್ರತಿಯೊಂದು ಸಮುದಾಯದ ವಿಧಿ ನಿಷೇಧಗಳು ಅವರವರ ವ್ರತ ನಂಬಿಕೆಗಳಿಗೆ ಆಧಾರ ಮತ್ತು ಆಕರ.[೭]

ಜನನದಿಂದ ಮರಣದವರೆಗೂ ಬಹುಬಗೆಯ ಕಟ್ಟುನಿಟ್ಟಾದ ವಿಧಿ ನಿಷೇಧಗಳು ಗಾಣಿಗರಲ್ಲಿ ಪ್ರಚಲಿತದಲ್ಲಿವೆ. ಇವರು ಮೊದಲಿನಿಂದಲೂ ಸಂಪ್ರದಾಯನಿಷ್ಠರು. ತಮ್ಮ ಪ್ರತಿಯೊಂದು ಆಚರಣೆಗಳಿಗೂ ವಿಧಿ ನಿಷೇಧಗಳ ಸಂಬಂಧ ಕಲ್ಪಿಸುತ್ತಾರೆ. ಇವು ಅವರ ದೈನಂದಿನ ಬದುಕಿನ ಸಮಸ್ಯೆಗಳನ್ನು ನಿವಾರಿಸಲು ಕೂಡ ಬಳಸುವ ಒಂದು ಬಗೆಯ ವಿಧಾನಗಳಾಗಿಯೇ ಮುಂದುವರೆದಿವೆ. ವಿವಿಧ ಗಾಣಿಗ ಗುಂಪುಗಳಲ್ಲಿರುವ ಈ ಬಗೆಯ ನಂಬುಗೆ ಮತ್ತು ಆಚರಣೆಗಳನ್ನು ಗುರುತಿಸುವುದು ಮೇಲುನೋಟಕ್ಕೆ ಕಾಣುವಷ್ಟು ಸುಲಭವಲ್ಲ. ಈಗಾಗಲೇ ಅನೇಕ ವಿಧಿ ನಿಷೇಧಗಳು ಕಣ್ಮರೆಯಾಗಿವೆ ಅಥವಾ ಕಲಸು ಮೇಲೋಗರವಾಗಿದೆ. ಅನೇಕ ಸಲ ಶ್ರೇಣೀಕೃತ ಸಮಾಜದ, ವಿಶೇಷತಃ ಮೇಲುವರ್ಗದ ಸಮುದಾಯದ ಆಚರಣೆಗಳು ಅಂಧಾನುಕರಣೆಯೂ ಇದಕ್ಕೆ ಕಾರಣವಾಗಿರಬಹುದು. ಸದ್ಯದಲ್ಲಿ ಗಾಣಿಗರಲ್ಲಿ ಕಾಣುವ ಕೆಲವು ನಂಬಿಕೆ ಆಚರಣೆಗಳನ್ನು ಈ ಕೆಳಗಿನಂತೆ ಗುರುತಿಸಲಾಗಿದೆ.

ಲಿಂಗಾಯಿತ ಗಾಣಿಗರು ತಮ್ಮ ಹತ್ತಿರ ಇರುವ ಹಂದರ ಗಾಯಿಯನ್ನು ಕೆಳಗೆ ಬೀಳಂಗಿಲ್ಲ, ಇತರರಿಗೆ ಕೊಡುವುದಿಲ್ಲ. ಹಾಗೇನಾದರೂ ಕೆಳಗೆ ಬಿದ್ದರೆ, ಅದನ್ನು ಕೊಟ್ಟರೆ, ಮಾರಿಕೊಂಡರೆ ಅಥವಾ ಕಳೆದುಕೊಂಡರೆ ಅವರಿಗೆ ಕಾಡಾಟ ಪ್ರಾರಂಭವಾಗುತ್ತದೆಂದು ಅವರ ನಂಬಿಕೆ. ಆದ್ದರಿಂದ ಅವರು ಹಂದರಗಾಯಿಯನ್ನು ಬಲು ಜಾಗರೂಕತೆಯಿಂದ ಜಂತಿಗೆ ಕಟ್ಟಿರುತ್ತಾರೆ.

ಶುಭ ಕಾರ್ಯಕ್ಕೆ ಹೊರಟಾಗ ಮೂವರು ಕೂಡಿಕೊಂಡು ಹೋಗುವುದಿಲ್ಲ. ಕಾಗೆ, ಬೆಕ್ಕು ಅಡ್ಡಬಂದರೆ ಅಶುಭ. ಖಾಲಿ ಕೊಡ ಹಲ್ಲಿ ಮೈ ಮೇಲೆ ಬಿದ್ದರೆ ಅಶುಭ. ಮುತ್ತೈದೆಯರು, ಸತ್ತವರು ಎದುರಾದರೆ ಶುಭ. ನರಿ ಕಾಣಿಸಿದರೆ ಹೋಗಿದ್ದ ಕೆಲಸ ನೆರವೇರುತ್ತದೆ. ಕಸಬರಿಗೆಯನ್ನು ಕಾಲಿನಿಂದ ಒದೆಯ ಬಾರದು. ಮಲಗಿದ ಕೂಸು ದಾಟ ಬಾರದು, ಕೂಸಿನ ಸುತ್ತಲೂ ಕುಂದ್ರುಬಾರದು, ಊಟದ ತಟ್ಟೆದಾಟಬಾರದು, ದೇವರ ಗಿಡದ ಕಟ್ಟಿಗೆಗಳನ್ನು ಉರಿಸಬಾರದು. ಸೋಮವಾರ ಗಳೇವು ಊಡಬಾರದು. ಎತ್ತುಗಳನ್ನು ಕಾಲಿನಿಂದ ಒದೆಯಬಾರದು. ಮೈಲಿಗೆಯಿಂದ ದೇವರ ಕೋಣೆಗೆ ಹೋಗಬಾರದು ಇಂತಹ ಹಲವಾರು ನಂಬಿಕೆಗಳು ಇವತ್ತಿಗೂ ಗಾಣಿಗರಲ್ಲಿ ರೂಢಿಯಲ್ಲಿದೆ.

ಸತ್ತವರನ್ನು ಹುಗಿಯುವ ಮತ್ತು ಸುಡುವ ಎರಡೂ ಪದ್ಧತಿ ರೂಢಿಯಲ್ಲಿದೆ. ತೊನ್ನು ಮತ್ತು ಬಾಣಂತಿಯನ್ನು ಸುಡುತ್ತಾರೆ. ಒಂದು ವೇಳೆ ಹುಗಿದರೆ ಮಳೆ ಬರುವುದಿಲ್ಲ. ಬಾಣಂತಿಯ ಕೈಗಳನ್ನು ತೆಗೆದುಕೊಂಡು ಮಾಟ ಮಾಡುತ್ತಾರೆ ಎಂಬುದು ಇವರ ನಂಬಿಕೆ. ಬಿದಿರಿನ ಚಟ್ಟದ ಮೇಲೆ ಮಂಟಪ ಮಾಡಿ ಸ್ಮಶಾನಕ್ಕೆ ಒಯ್ಯುತ್ತಾರೆ.

ಸತ್ತವರು ಭೂತ ಪ್ರೇತಾದಿಗಳಾಗುತ್ತಾರೆಂದು, ಅವರ ಪ್ರೀತಿಯ ಚಟದ ವಸ್ತುಗಳನ್ನು "ಮೂರುಕೂಳು" ಹಾಕುವ ದಿವಸ ಇಡುತ್ತಾರೆ. ಪ್ರತಿ ವರ್ಷ ಯುಗಾದಿ ಮತ್ತು ಮಹಾನವಮಿಗೆ ಅಥವಾ ತಮಗೆ ಒಳ್ಳೆಯದಿನದಾಗ ಸತ್ತು ಹೋದ ಪೂರ್ವಿಕರ ಹೆಸರಿನ ಮೇಲೆ 'ಹಿರೇರ ಹಬ್ಬ' ಆಚರಿಸುತ್ತಾರೆ.

"ಕೆಲವು ನಂಬಿಕೆಗಳು ಧಾರ್ಮಿಕ ಸ್ವರೂಪದವು ಆಗಿದ್ದರೂ, ಆ ನಂಬಿಕೆಗಳಲ್ಲಿನ ಕ್ರಿಯೆ ಲೌಕಿಕವಾಗಿರುತ್ತದೆ. ಮೂಲತಃ ಲೌಕಿಕವಾದ ಒಂದು ಕ್ರಿಯೆಯನ್ನು ಸಮರ್ಪಕವಾಗಿ ಮಾಡಿಸುವುದಕ್ಕಾಗಿ ಅಥವಾ ನಿಷೇಧಿಸುವುದಕ್ಕಾಗಿ ಇಂತಹ ನಂಬಿಕೆಗಳು ಹುಟ್ಟಿಕೊಂಡಿರಬಹುದು ಉದಾ ಕಾಲುಗಳನ್ನು ತೊಳೆಯುವಾಗ ಹಿಮ್ಮಡಿ ಪೂರ್ತಿ ನೆನೆಯಬೇಕು ಇಲ್ಲದಿದ್ದರೆ ಶನಿ ಹಿಡಿದುಕೊಳ್ಳುತ್ತದೆ."

...ಇಲ್ಲಿ ಕಾಲಿನ ಹಿಮ್ಮಡಿ ಸಹಿತ ಸರಿಯಾಗಿ ತೊಳೆದುಕೊಳ್ಳಬೇಕು ಎನ್ನುವುದು ಶುಚಿತ್ವದ ದೃಷ್ಟಿಯಿಂದ ಅಗತ್ಯವಾದ ಸಂಗತಿ. ಆದರೆ ಬುದ್ಧಿವಾದವನ್ನು ಕೇಳದ ಜನರನ್ನು ಸರಿಯಾಗಿ ಕೆಲಸ ಮಾಡಿಸಲು ಶನಿಯ ಹೆದರಿಕೆಯನ್ನು ಉಂಟುಮಾಡಿರಬೇಕು.

...ಈ ದೃಷ್ಟಿಯಿಂದ 'ಜನಪದ ನಂಬಿಕೆಗಳು' ಅನೇಕ ಸಲ ನಿಷಿದ್ಧಗಳು (Taboos) ಆಗಿರುವುದನ್ನು ಗಮನಿಸಬಹುದು."[೧೮]

**ಕೆಲವು ಮಹತ್ವದ ನಿಷೇಧಗಳು**

ಮಗುವನ್ನು ಬಂಜೆಯರ ಕೈಯಲ್ಲಿ ಕೊಡಬಾರದು.

ಸಣ್ಣ ಮಗುವನ್ನು ದುರಗುಟ್ಟಿ ನೋಡಿದರೆ ದೃಷ್ಟಿ ಆಗುತ್ತದೆ. ಯಾರಾದರೂ ಹಾಗೆ ನೋಡಿದರೆ ಮುಖದ ಮೇಲೆ ಮೂರು ಸಾರಿ ಉಗುಳಬೇಕು.

ಬಂಜೆಯರು ಮತ್ತು ಕೆಟ್ಟ ಕಣ್ಣಿನವರ ಎದುರಿಗೆ ಮೊಲೆ ಉಣಿಸಬಾರದು.

ಮುಸ್ಸಂಜೆಯ ಹೊತ್ತು ಮಗುವನ್ನು ಬೀದಿಗೆ ಕರೆತರಬಾರದು. ಭೂತಗಳು ಕಾಡುತ್ತವೆ.

ಮಕ್ಕಳು ಇಲ್ಲದವರು ಮಗುವಿನ ಹೊಕ್ಕಳು ಬಳ್ಳಿಯನ್ನು ತಿಂದರೆ, ಮಕ್ಕಳಾಗುತ್ತವೆ.

ಹೆರಿಗೆಯ ನೋವು ಪ್ರಾರಂಭವಾದ ತಕ್ಷಣ ಮನೆದೇವರಿಗೆ ಮುಡುಪು ಕಟ್ಟಿ ಇಡುವರು.

ಏಳು, ಎಂಟನೆ ತಿಂಗಳಲ್ಲಿ ಹೆರಿಗೆ ಆಗಬಾರದು.

ಮಂಗಳವಾರ, ಶುಕ್ರವಾರ, ಅಮವಾಸ್ಯೆ, ಹುಣ್ಣಿಮೆಯ ದಿನ ಹೆಣ್ಣು ಮಗು ಜನಿಸಿದರೆ ಶುಭ.

ಬುಧವಾರ ಹೆಣ್ಣು ಮಗು ಜನಿಸಿದರೆ, ಗಂಗಮ್ಮ ಎಂದು ಹೆಸರಿಡಬೇಕು.

ಗರ್ಭಿಣಿ ಹೆಂಗಸು ರಾತ್ರಿ ಬೆಳದಿಂಗಳಲ್ಲಿ ಹೊರಗೆ ಮಲಗಬಾರದು. ಹಕ್ಕಿಯ ನೆರಳು ಬೀಳುತ್ತದೆ.

ಹುಣ್ಣಿಮೆ, ಅಮವಾಸ್ಯೆ ಮತ್ತು ಗ್ರಹಣ ಕಾಲದಲ್ಲಿ ಗರ್ಭಿಣಿ ಹೆಂಗಸು ಹೊರಗೆ ಸಂಚರಿಸಬಾರದು.

ಮುಟ್ಟಿನ ಬಟ್ಟೆಯನ್ನು ಗಂಡಸು ಮುಟ್ಟಬಾರದು. ಋತುಮತಿ ಆದವಳು ಅರಿಶಿಣ ಮೈಲಿಗೆಯನ್ನು ತೆಗೆಯುವ ತನಕ, ಮೈಲಿಗೆಯ ಗುಡಿಸಲಲ್ಲಿ, ಇಲ್ಲವೇ ಪ್ರತ್ಯೇಕ ಕೋಣೆಯ್ಲಿರಬೇಕು.

ಅರಿಶಿಣ ಬಟ್ಟೆಯನ್ನು ಧರಿಸುವುದರಿಂದ, ಮೈಗೆ ನಂಜು ಆಗುವುದಿಲ್ಲ.

ಮನೆಯಲಿ ಕೆಂಜಿಗಿ ಮತ್ತು ಕೆಂಪಿರಿಬಿ ಜಾಸ್ತಿ ಆದರೆ, ಅಮ್ಮನ ಗುಡಿಗೆ ಹೋಗಿ ಎಣ್ಣೆ ಬತ್ತಿಯನ್ನು ಕೊಡಬೇಕು.

ಸಾವಿನ ಸೂತಕ ಸಂದರ್ಭದಲ್ಲಿ ಕಸುಬು ಮತ್ತು ಶುಭ ಕಾರ್ಯ ಮಾಡಕೂಡದು.

ಮನೆಯ ಸೂತಕ ಹೋಗಲು, ದೇವರ ತೀರ್ಥ ಮತ್ತು ಪುಣ್ಯಾಹ ಮಾಡಿಸಬೇಕು.

ಮೆಳ್ಳುಗಣ್ಣು, ಕೆಟ್ಟಸುಳಿ, ಕುಳ್ಳಿ ಇದ್ದ ಹೆಣ್ಣನ್ನು ಮದುವೆಯಾಗಬಾರದು.

ರಂಡೆತನ ತೆಗೆದವಳ ಮುಖವನ್ನು ಕೆಲವು ದಿನಗಳವರೆಗೆ ಮುತ್ತೈದೆಯರು ನೋಡಬಾರದು.

ಹೆಂಡತಿ ಗರ್ಭವತಿ ಇದ್ದರೆ ಋಣ ಕೊಡಕೂಡದು.

ತೊನ್ನು ಇದ್ದವರು, ಬಾಣಂತಿ ಮತ್ತು ಜೋಗಮ್ಮನವರು ಸತ್ತರೆ ಸುಡಬೇಕು.

ಮದುವೆ ಆಗದ ಯುವಕರು ಸತ್ತರೆ, ಬೋರಲು ಹುಗಿಯಬೇಕು.

ಕುಲದೇವತೆಯ ಹಬ್ಬದ ದಿವಸ, ಮನೆಯಲ್ಲಿ ಮಕ್ಕಳಿಗೆ ಅಮ್ಮ ಕಾಣಿಸಿಕೊಂಡಾಗ ಗಂಡ ಹೆಂತಿಯ ಜೊತೆಗಿರಬಾರದು.

ಬನ್ನಿಗಿಡ ಸುಡಬಾರದು.

## ೪.೧೩. ಸಂಘ ಸಂಸ್ಥೆಗಳು

ಮನುಷ್ಯ ನಾಗರೀಕತೆಯ ಪ್ರಬಾವಕ್ಕೆ ಒಳಗಾದಂತೆಲ್ಲಾ ಸಮಾಜ ಸಂಕೀರ್ಣವಾಗಿ, ಬೇಡಿಕೆಗಳು ಹೆಚ್ಚಿ, ಜೀವಿಸುವುದು ತುಂಬಾ ಕಷ್ಟಕರವಾಗಿದೆ. ಈ ಕಷ್ಟಕರವಾದ ಜೀವನ ನಡೆಸಲು ಮತ್ತು ತನಗೆ ಅಗತ್ಯವಾದ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು, ಒಬ್ಬ ವ್ಯಕ್ತಿಯಿಂದ ಸಾಧ್ಯವಾಗದಿದ್ದಾಗ, ಹಲವಾರು ವ್ಯಕ್ತಿಗಳು ಸೇರಿ ಸಂಘ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಇಂತಹ ಸಂಘ ಸಂಸ್ಥೆಗಳಿಗೆ ತಮ್ಮದೇ ಆದ ನಿರ್ದಿಷ್ಟವಾದ ಉದ್ದೇಶಗಳಿರುತ್ತವೆ. ಅಂದರೆ ಸಂಘ ಸಂಸ್ಥೆಗಳು ತದೇಕವಾದ ಅಥವಾ ಅನೇಕ ಬಯಕೆಗಳನ್ನು ಪೂರೈಸಿಕೊಳ್ಳಲು ಅನೇಕ ವ್ಯಕ್ತಿಗಳು ಒಟ್ಟಾಗಿ ಸೇರಿ ಕೆಲವು ನಿಯಮಗಳೊಡನೆ ಏರ್ಪಡಿಸಿಕೊಂಡ ವ್ಯವಸ್ಥೆ.

ಈ ರೀತಿಯ ಸಂಘ ಸಂಸ್ಥೆಗಳು ಮಾನವ ಸಮಾಜದ ಕೆಲವೇ ವ್ಯಕ್ತಿಗಳ ಅಥವಾ ಒಂದೇ ತಲೆಮಾರಿನ ಪ್ರತಿಫಲವೇನಲ್ಲ. ಭೂತ, ವರ್ತಮಾನಗಳ ತಲೆಮಾರುಗಳ ಅನುಭವದ ಚಾರಿತ್ರಿಕ ಬೆಳವಣಿಗೆಯ ಪ್ರಕ್ರಿಯೆಯಲ್ಲಿ ಮೂಡಿ ಬರುವಂತಹದ್ದು. ಸಾಮಾಜಿಕ ಚಳುವಳಿಯ ಒಂದು ವಿಭಾಗದ ಸಂಘಟನಾತ್ಮಕ ಪ್ರಯತ್ನವಾಗಿ ಬದಲಾವಣೆಗೆ, ತತ್ವದೊಂದಿಗೆ ಸಾಮೂಹಿಕವಾಗಿ ಚಲನಶೀಲಗೊಂಡ ಸ್ಥಿತಿ. ಪ್ರತಿಯೊಂದು ಸಂಘ ಸಂಸ್ಥೆಯೂ ತನ್ನಲ್ಲಿ ಬಾಗವಹಿಸಿದ ಸದಸ್ಯರ ಸಹಕಾರದ ಪ್ರಯತ್ನದ ಮೇಲೆ ಅವಲಂಬಿತಗೊಂಡಿರುತ್ತದೆ. ಗುರಿಯನ್ನು ಸಾಧಿಸಲು ಸಂಘ ಸಂಸ್ತೆಗಳಲ್ಲಿ ತೊಡಗಿದ ಸದಸ್ಯರ ಸಾಮೂಹಿಕ ಪ್ರಯತ್ನವು ಸಹಕಾರದಲ್ಲಿ ಸಾಕಾರ ಪಡೆಯಬೇಕಗುತ್ತದೆ. ಸಹಾಕರ ಇಲ್ಲದಿದ್ದಲ್ಲಿ ಚಲನಶೀಲ ಕ್ರಿಯೆ ಬಲ ಹೀನಗೊಂಡು ಸಂಘ ಸಂಸ್ತೆಗಳು ಅಸಂಘಟಿತಗೊಳ್ಳುತ್ತವೆ. ಮನುಷ್ಯ ಸಾಮಾನ್ಯ ಹಿತಾಸಕ್ತಿ ಸಂಘ ಸಂಸ್ಥೆಗಳನ್ನು ಕಟ್ಟಲು

ಕಾರಣವಾಗಿ ಅದರ ಗುರಿಯನ್ನು ಸಾಧಿಸಲು ಪರಸ್ಪರ ಆಶ್ರಿತರನ್ನಾಗಿಸುತ್ತದೆ. ಸಾಮೂಹಿಕ ಕ್ರಿಯೆಯಲ್ಲಿ ವ್ಯಕ್ತಿಗತ ವ್ಯತ್ಯಾಸಗಳನ್ನು ಬದಿಗೊತ್ತಿ ಸಾಮಾನ್ಯಗುರಿಗಾಗಿ ದುಡಿಯುತ್ತಾರೆ. ಒಗ್ಗಟ್ಟು ಸಂಘ ಸಂಸ್ಥೆಯ ಮೂಲ ಅಗತ್ಯವಾಗಿರುತ್ತದೆ. ಒಗ್ಗಟ್ಟು ವಾಸ್ತವವಾಗುವುದು ಸಹ ಅನ್ಯೋನ್ಯತೆ ಮತ್ತು ಸಹಕಾರದಿಂದ ಒಗ್ಗಟ್ಟು ಎನ್ನುವುದು ಮನಸ್ತಾಪ ಮತ್ತು ಆಂತರಿಕ ಘರ್ಷಣೆಯ ನಿವಾರಣೆಯಾಗಿದೆ.

ಗಾಣಿಗ ಸಮುದಾಯದವರು ಕರ್ನಾಟಕದಲ್ಲಿ ಶತಮಾನಗಳಿಂದ ವಾಸಿಸುತ್ತಿದ್ದರೂ ಇತ್ತೀಚಿನವರೆಗೂ ತಮ್ಮದೇ ಆದ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಬದುಕಿದವರಲ್ಲ. ಇತ್ತೀಚೆಗೆ ಅಲ್ಲಲ್ಲಿ ಸಂಘಟಿತರಾಗಿ ತಮ್ಮ ಮೂಲ ಉದ್ಯೋಗವನ್ನು ಅಭಿವೃದ್ಧಿ ಪಡಿಸುವುದರ ಜೊತೆಗೆ ತಮ್ಮ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ದಾರ್ಮಿಕ ಜೀವನವನ್ನು ಉನ್ನತ ಮಟ್ಟಕ್ಕೆ ಏರಿಸಿಕೊಳ್ಳಬೇಕೆಂಬ ಮೂಲಾಶಯದೊಂದಿಗೆ ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡು ಆ ಮುಖಾಂತರ ಹೋರಾಟ ನಡೆಸುತ್ತಿದ್ದಾರೆ.

ಗಾಣಿಗ ಸಮುದಾಯದವರು ಆರ್ಥಿಕವಾಗಿ, ಸಾಮಾಜಿಕವಾಗಿ ಹಾಗೂ ಶೈಕ್ಷಣಿಕವಾಗಿ ಬಹಳ ಹಿಂದುಳಿದರಾಗಿದ್ದಾರೆ. ಇವರು ಸರಕಾರದಿಂದ ಸಿಗಬೇಕಾದ ಸೌಲಭ್ಯಗಳಿಂದ ವಂಚಿತರಾಗಿದ್ದು ರಾಜಕೀಯ, ಶೈಕ್ಷಣಿಕ, ಮೀಸಲಾತಿ ಮೊದಲಾದ ಸೌಲಭ್ಯಗಳು ಇವರಿಗೆ ದೊರೆತಂತೆ ಕಾಣುವುದಿಲ್ಲ. ಇವೆಲ್ಲ ಸಂಗತಿಗಳನ್ನು ಗಮನಿಸಿ ಗಾಣಿಗ ಸಮುದಾಯದ ಸಂಘಟನೆಗಾಗಿ ಭಾರತ ಗಾಣಿಗರ ಸಂಘವನ್ನು ಹುಬ್ಬಳ್ಳಿಯಲ್ಲಿ ಸ್ಥಾಪಿಸಿಗೊಂಡರು. ಶ್ರೀ ಶಿವಪ್ಪಣ್ಣ ಜಗಳೂರು ಅದರ ಮೊದಲ ಅಧ್ಯಕ್ಷರಾದರು. ಹುಬ್ಬಳ್ಳಿಯಲ್ಲಿ ಗಾಣಿಗ ಮಹಾಸಮ್ಮೇಳನವನ್ನು ಜರುಗಿಸಿ ಮೊದಲ ಬಾರಿಗೆ ಗಾಣಿಗರ ಅಸ್ತಿತ್ವವನ್ನು ನಾಡಿಗೆ ಗೊತ್ತುಮಾಡಿಕೊಟ್ಟರು.

ಇಲ್ಲಿಯವರೆಗೆ ಈ ಜಿಲ್ಲೆಯಲ್ಲಿ ಗಾಣಿಗ ಸಮುದಾಯದ ಜಿಲ್ಲಾ ಮಟ್ಟದ, ತಾಲ್ಲೂಕುಮಟ್ಟದ ಅಧಿವೇಶನವಾಗಲಿ ಜರುಗಿದಂತೆ ತೋರುವುದಿಲ್ಲ. ಜಿಲ್ಲೆಯ ಗಾಣಿಗ ಸಮುದಾಯದ ಏಳ್ಗೆಗಾಗಿ ಶ್ರಮಿಸಲು ಯಾವುದೇ ಸಂಘ ಸಂಸ್ಥೆಗಳು ಮುಂದೆ ಬಂದಿರುವುದಿಲ್ಲ. ಇತ್ತೀಚೆಗೆ ಗಾಣಿಗ ಸಮುದಾಯದವರು ಕೆಲವು ಸಂಘ ಸಂಸ್ಥೆಗಳು ಅಲ್ಲಲ್ಲಿ ಸಂಘಟಿತವಾಗಿ ಮುಂದೆ ಬರಲು ಹವಣಿಸುತ್ತಿರುವುದು ತಿಳಿದು ಬರುತ್ತದೆ.

**ಟಿಪ್ಪಣಿಗಳು**

೧. ಡಾ. ಡಿ.ಆರ್. ಪಾಂಡುರಂಗ, ದಕ್ಷಿಣ ಕನ್ನಡ ಜಿಲ್ಲೆಯ ಬೈರರು ಸಾಹಿತ್ಯ ಸಾಂಸ್ಕೃತಿಕ ಅಧ್ಯಯನ, ೧೯೯೦, ಪು.೩೩

೨. ಗಾಣ ಸಿರಿ ಅಖಿಲ ಭಾರತ ಗಾಣಿಗರ ಸಂಘ (ರಿ), ಜಿಲ್ಲಾ ಘಟಕ ವಿಜಾಪುರ, ಸ್ಮರಣ ಸಂಚಿಕೆ, ೨೦೦೪, ಪು.೧೧

೩. ದೇವೇಂದ್ರಕುಮಾರ ಹಕಾರಿ, ಜಾನಪದೀಯ, ಪು.೧೦೨

೪. ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪

೫. ಜಾರ್ವಿನ್ ಡಿ.ಸಿ., ಫೋರ್ಕ್ ಮೆಡಿಸನ್

೬. ಡಾ. ಬಿ.ಬಿ. ಹಿಂಗಮಿರೆ, ಜಾನಪದ ಸಾಹಿತ್ಯ ದರ್ಶನ ಸಂಪುಟ ೨೦, ಜನಪದ ಆಹಾರ ಪಾನೀಯ, ೧೯೯೮, ಪು.೯೯

೭. ಊಟದಲ್ಲಿ ಈರುಳ್ಳಿ ಬೇಕೆನ್ನುವರು.

೮. ಡಾ. ಬಿ.ಬಿ. ಹಿಂಗಮಿರೆ, ಜಾನಪದ ಸಾಹಿತ್ಯ ದರ್ಶನ ಸಂಪುಟ ೨೦, ಜನಪದ ಆಹಾರ ಪಾನೀಯ, ೧೯೯೮, ಪು.೧೦೦

೯. ಅದೇ, ಪು.೧೦೦

೧೦. ಡಾ. ದಾನೇಶ ಎ. ಚಕ್ಕಿ ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ, ೧೯೬೭, ಪು.೧೩

೧೧. ಕಡ್ಲಬಾಳ ಪನ್ನಂಗಧರ, ಮೇದರ ಸಂಸ್ಕೃತಿ ಮತ್ತು ವಾಣಿಜ್ಯ ಅಧ್ಯಯನ (ಅಪ್ರಕಟಿತ), ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೯೮

೧೨. ಎಂ.ಹೆಚ್. ನಾಗರಾಜು, ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ, ೨೦೦೩, ಪು.೮೭

೧೩. ರಾಮಮನೋಹರ ಲೋಹಿಯಾ, ೧೯೯೮, ಪು.೧೭೫

೧೪. ಡಾ. ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ೨೦೦೫, ಪು.೧೨೨

೧೫. ಎಂ.ಹೆಚ್. ನಾಗರಾಜು, ಕುಂಚಿಟಿಗರ ಸಾಂಸ್ಕೃತಿಕ ಇತಿಹಾಸ, ೨೦೦೩, ಪು.೧೧೦

೧೬. ಅದೇ, ಪು.೧೧೨

೧೭. ಡಾ. ಹರಿರಾಲ್ ಕೆ. ಪವಾರ್ (ಸಂ), ೧೯೯೫, ಪು.೧೪೯

೧೮. ಡಾ. ಬಿ.ಎ. ವಿವೇಕ ರೈ, ಕರ್ನಾಟಕ ಜನಪದ ನಂಬಿಕೆಗಳು, ಕರ್ನಾಟಕದ ಜಾನಪದ, ೧೯೮೧, ಪು.೧೭೩

೧೯. ಡಾ. ಮಂಜುನಾಥ ಬೇವಿನಕಟ್ಟಿ, ಸುಪ್ಪತ್ತಿಗೆಯ ಹಿಂದಿನ ಬದುಕು, ೧೯೯೫, ಪು.೭೧

೨೦. ಡಾ. ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ೨೦೦೫, ಪು.೧೨೮

# ಅಧ್ಯಾಯ ೫

# ಆಚರಣೆಗಳು

ಜೀವನಾವರ್ತನ ಆಚರಣೆಗಳು

೫.೧. ಜನನ ಮತ್ತು ಬಾಣಂತನ

೫.೨. ಋತುಮತಿ

೫.೩. ಜವಳ

೫.೪. ಮದುವೆ

೫.೫. ಸೀಮಂತ (ಬಯಕೆ)

೫.೬. ನಾಮಕರಣ

೫.೭. ಮುರುವು ಚುಚ್ಚುವುದು

೫.೮. ಸಾವು-ಸಂಸ್ಕಾರ

೫.೯. ಕುಟುಂಬದ ಮೇಲೆ ಸಾವಿನ ಪರಿಣಾಮ

**ಪೀಠಿಕೆ**

ಭಾರತದಲ್ಲಿರುವ ಗಾಣಿಗ ಸಮುದಾಯದಲ್ಲಿ ಅನೇಕ ಪಂಗಡಗಳಿವೆ. ಬೇರೆ ಬೇರೆ ಹೆಸರುಗಳಿಂದ ಕರೆಯಲ್ಪಡುತ್ತಿವೆ. ಅವರವರ ಭಾಷೆ, ಸಂಸ್ಕೃತಿ, ಸಂಪ್ರದಾಯಗಳು ಬೇರೆಯೇ ಆಂಧ್ರಪ್ರದೇಶದಲ್ಲಿ 'ಗಾಂಡ್ಲ' ಎಂದೂ; ಕೇರಳ ರಾಜ್ಯದಲ್ಲಿ 'ಚಟ್ಟಿ' 'ಚಟ್ಟಿಯಾರ' ಎಂದೂ; ತಮಿಳುನಾಡಿನಲ್ಲಿ 'ವಣಿಯನ್' ಎಂದೂ; ಮಹಾರಾಷ್ಟ್ರ ಮತ್ತು ಗುಜರಾತದಲ್ಲಿ 'ತೇಲಿ' ಎಂದೂ; ಬಿಹಾರ ಮತ್ತು ಒರಿಸ್ಸಾ ರಾಜ್ಯಗಳಲ್ಲಿ 'ಸಾಹು' ಎಂದೂ; ಉತ್ತರ ಪ್ರದೇಶ ಮತ್ತು ಮಧ್ಯಪ್ರದೇಶಗಳಲ್ಲಿ 'ಗುಪ್ತಾ' ಎಂದೂ; ಬಂಗಾಳದಲ್ಲಿ 'ಜ್ಯೋತಿ' ಎಂದೂ ಕರೆಯಲ್ಪಡುತ್ತಾರೆ. ಗಾಣಿಗ ಸಮುದಾಯದವರು ಭಾರತದ ಪ್ರತಿ ರಾಜ್ಯದಲ್ಲಿ ವಾಸವಾಗಿದ್ದಾರೆ. ಊಟಮಾಡುವ ಎಣ್ಣೆಯ ಜೀವನಾವಶ್ಯಕ ವಸ್ತುವಾಗಿದ್ದರಿಂದ ಎಣ್ಣೆಕಾಳನ್ನು ಗಾಣದಲ್ಲಿ ಹಾಕಿ, ನುರಿಸಿ, ಎಣ್ಣೆ ಉತ್ಪಾದನೆ ಮಾಡುವುದು ಇವರ ವೃತ್ತಿಯಾಗಿತ್ತು. ಈ ಕಾರಣಕ್ಕಾಗಿ ಇವರು ಭಾರತದ ತುಂಬಾ ವಾಸವಾಗಿದ್ದಾರೆ.[೧]

ಕರ್ನಾಟಕದ ಹಿಂದುಳಿದ ಜನಾಂಗಗಳಲ್ಲಿ ಒಂದಾದ 'ಗಾಣಿಗ' ಸಮುದಾಯ ಪ್ರಮುಖ ಪಂಗಡವಾಗಿದೆ. ಇವರನ್ನು ಗಾಣಿಗ, ಗಾಣಿಗೇರ, ಗಾಣಿಗರು, ತೇಲಿ ಮುಂತಾಗಿಯೂ ಕರೆಯುತ್ತಾರೆ. ಇವರಲ್ಲಿಯೇ ಕರಿಕುಲದ ಗಾಣಿಗರು, ಸಜ್ಜನ ಗಾಣಿಗರು, ಜ್ಯೋತಿ ಗಾಣಿಗರು, ಹೆಣ್ಣಿಗಾಣಿಗರು, ಪಂಚಮ ಗಾಣಿಗರು ಮುಂತಾದ ಉಪ ಪಂಗಡಗಳಿವೆಯಾದರೂ ಇವರೆಲ್ಲರ ಮೂಲ ವೃತ್ತಿ ಗಾಣ ಆಡಿಸುವುದು. ಗಾಣದ ಮೂಲಕ ಎಣ್ಣೆ ತೆಗೆಯುವುದು ಆಗಿದೆ. ಈ ಸಮುದಾಯದವರು ಕರ್ನಾಟಕದ ಎಲ್ಲಾ ಬಾಗಗಳಲ್ಲಿರುವಂತೆಯೇ ಉತ್ತರ ಕರ್ನಾಟಕದ ಪ್ರಾಂತ್ಯದಲ್ಲಿ ವಿಶೇಷವಾಗಿ ನೆಲೆಸಿದ್ದಾರೆ. ಇವರೆಲ್ಲರ ಮೂಲ ವೃತ್ತಿ ಒಂದೇ ಆಗಿದ್ದರೂ ಇವರ ಕುಲದೇವರು ಒಬ್ಬನೇ ಆಗಿದ್ದರೂ ದಿನನಿತ್ಯದ ಆಚರಣೆ, ಆಹಾರ ಪದ್ಧತಿ, ಜೀವನ ರೀತಿ, ಅನುಸರಿಸುವ ಸಂಪ್ರದಾಯಗಳಲ್ಲಿ ಪ್ರಾದೇಶಿಕ ಭಿನ್ನತೆಯನ್ನು ಕಾಣುತ್ತೇವೆ. ಹಾಗಾಗಿ, ಉತ್ತರ ಪ್ರಾಂತ್ಯದಲ್ಲಿ ವಾಸಿಸುವ ಇವರು ಅದೇ ದಕ್ಷಿಣ ಕರ್ನಾಟಕದಲ್ಲಿ ವಾಸಿಸುವವರಿಗಿಂತ ಭಿನ್ನರಾಗಿ ನಿಲ್ಲುತ್ತಾರೆ. ಪೂರ್ವದಲ್ಲಿ ಪೂರ್ಣವಾಗಿ ಗಾಣದ ವೃತ್ತಿಯನ್ನೇ ಅವಲಂಬಿಸಿದ್ದ ಇವರು ಇಂದು ವೃತ್ತಿಗೆ ತಿಲಾಂಜಲಿಯಿತ್ತು ವ್ಯವಸಾಯ, ವ್ಯಾಪಾರ, ತೋಟಗಾರಿಕೆ ಮುಂತಾದ ವೃತ್ತಿಗಳಿಂದ ಜೀವಿಸುತ್ತಿದ್ದಾರೆ. ಮೂಲತಃ ಶೈವ ಸಂಪ್ರದಾಯದವರಾದ ಮತ್ತು ಶುದ್ಧ ಸಂಪ್ರದಾಯ ನಿಷ್ಠರಾದ ಇವರು ಹುಟ್ಟಿನಿಂದ ಸಾವಿನ ತನಕ ತಮ್ಮದೇ ಆದ ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಅಂಥ ಸಂಪ್ರದಾಯಗಳಲ್ಲಿ ಮಗು ಜನಿಸಿದಾಗ, ಹೆಣ್ಣು ಮೈ ನೆರೆದಾಗ, ಮದುವೆ ಸಂದರ್ಭದಲ್ಲಿ ಮತ್ತು ಮರಣದಲ್ಲಿ ಅನುಸರಿಸುವಂಥ ಸಂಪ್ರದಾಯಗಳನ್ನು ಇಲ್ಲಿ ವಿವೇಚಿಸಲಾಗಿದೆ.

## ಜೀವನಾವರ್ತನ ಆಚರಣೆಗಳು

### ೫.೧. ಜನನ ಮತ್ತು ಬಾಣಂತನ

ವಂಶಾಭಿವೃದ್ಧಿ ಭೂಮಿಯ ಮೇಲೆ ಅಸ್ತಿತ್ವದಲ್ಲಿರುವ ಪ್ರತಿಯೊಂದು ಜೀವಿ ಮತ್ತು ಸಸ್ಯಗಳ ಪ್ರಾಕೃತಿಕ ಮತ್ತು ಜೈವಿಕ ಕ್ರಿಯೆ. ಜೀವಿಯ ಸೃಷ್ಟಿಯು ಮಾನವನಿಗೆ ಆಶ್ಚರ್ಯವನ್ನುಂಟು ಮಾಡಿತು. ಆಗ ಅವನು ಈ ಕುರಿತು ಅನೇಕ ನಂಬಿಕೆಗಳನ್ನು ಒಪ್ಪಿಕೊಂಡು ಆಚರಣೆಗಳ ರೂಪದಲ್ಲಿ ರೂಢಿಸಿಕೊಂಡನು. ಈಗಲೂ ಎಲ್ಲಾ ಸಮುದಾಯಗಳಲ್ಲಿ ಜನನ ಕುರಿತಾದ ಅನೇಕ ನಂಬಿಕೆ ಮತ್ತು ಆಚರಣೆಗಳು ಜೀವಂತವಾಗಿವೆ. ಈ ಆಚರಣೆಗಳು ಬಾಹ್ಯದಲ್ಲಿ ಒಂದೇ ರೀತಿಯಾಗಿ ಕಂಡರೂ ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದನ್ನು ಗಮನಿಸಬಹುದು. ಗಾಣಿಗ ಸಮುದಾಯದಿಂದ ಸಮುದಾಯಕ್ಕೆ ಭಿನ್ನವಾಗಿರುವುದನ್ನು ಗಮನಿಸಬಹುದು. ಗಾಣಿಗ ಸಮುದಾಯಗಳಲ್ಲಿ ಇತರೆ ಸಮುದಾಯಗಳಲ್ಲಿ ಇರುವಂತೆ ಜನನ ಸಂಸ್ಕಾರಗಳಿವೆ. ಗಾಣಿಗ ಸಮುದಾಯಗಳಲ್ಲಿ ಹುಟ್ಟಿಗೆ ಸಂಬಂಧಿಸಿದ ಆಚರಣೆಗಳು ಹೆಣ್ಣಿನ ತಿಂಗಳ ಮುಟ್ಟಿನ ದಿನದಿಂದಲೇ ಪ್ರಾರಂಭವಾಗುತ್ತವೆ. ತಿಂಗಳ ಮುಟ್ಟು ಮತ್ತು ಋತುಮತಿ ಹಾಗೂ ಮುಟ್ಟಿನ ಸಂದರ್ಭದ ಆಚರಣೆಗಳನ್ನು ಸೂತಕ, ಮೈಲಿಗೆ ಅಥವಾ ಹೊಲಿ ಎಂದು ಕರೆಯುತ್ತಾರೆ. “ಹೆರಿಗೆ ಸಂದರ್ಭದಲ್ಲಿ ಆಚರಿಸುವ ಮೈಲಿಗೆ ಮಾನವನ ಹುಟ್ಟಿಗೆ ಸಂಬಂಧಿಸಿದ ಮೊದಲ ಮೈಲಿಗೆ, ಹೆರಿಗೆ, ಋತುಮತಿ, ತಿಂಗಳು ಮುಟ್ಟಿನ ಸಂದರ್ಭದಲ್ಲಿ ಆಚರಿಸುವ ಸೂತಕವನ್ನು ಮೈಲಿಗೆ ಎಂದು ಕರೆಯುವುದು ಹೆಚ್ಚು ಸೂಕ್ತ ಎನಿಸುತ್ತದೆ. ಸೂತಕಕ್ಕೆ ಮೈಲಿಗೆ ಮತ್ತು ಹೊಲಿ ಎಂಬ ಅರ್ಥಗಳಿಂದ ಬಳಸಲ್ಪಡುತ್ತವೆ. ಸತ್ತದಿನದಿಂದ, ದಿನಕರ್ಮಗಳು ಮುಗಿಯುವವರೆಗಿನ ಅವಧಿಯನ್ನು ಮಾತ್ರ ಸೂತಕದ ಕಾಲ ಎಂದು ಕರೆಯಬೇಕು ಎಂಬುದು ನನ್ನ ಅಭಿಪ್ರಾಯ. ಸೂತಕ ಎಂಬುವುದು ಶೋಕ ಸೂಚಕವಾಗಿರುತ್ತದೆ. ಹೊಲಿ ಅಥವಾ ಮೈಲಿಗೆ ಎನ್ನುವುದು ಸಂತೋಷ ಸೂಚಕವಾಗಿರುತ್ತದೆ. ಮಗು ಜನಿಸುವುದು, ಹೆಣ್ಣು ಋತುಮತಿಯಾಗುವುದು ಯಾವ ಸಮುದಾಯಕ್ಕೆ ದುಃಖವಾಗುತ್ತದೆ?”[೨] ಮೇಲಿನ ಹೇಳಿಕೆಯು ಸಮಂಜಸವಾಗಿದೆ. ಏಕೆಂದರೆ ಮಾನವನ ಜೀವನದುದ್ದಕ್ಕೂ ತನ್ನ ಕಲ್ಪನೆ ಮತ್ತು ಯೋಜನೆಯನ್ನು ಮೀರಿ ನಡೆಯುವ ಇಂತಹ ಪ್ರಕೃತಿ ಸಹಜ ಜೈವಿಕ ಘಟನೆಗಳೆಲ್ಲವೂ ಅಶುಭ, ಅಮಂಗಲ ಮತ್ತು ಅಸಂತೋಷವಂತೂ ಅಲ್ಲ. ಆದ್ದರಿಂದ ಇವೆಲ್ಲವನ್ನು ಇಡಿಯಾಗಿ ಸೂತಕ ಎನ್ನುವುದು ಸರಿಯಲ್ಲ. ಸಂತೋಷ ಸೂಚಕ ಹೊಲಿ ಅಥವಾ ಮೈಲಿಗೆಯ ಆಚರಣೆಗಳು ಈ ಸಮುದಾಯದ ಸಾಮಾಜಿಕ ಲಿಂಗ ಗೌರವ ಮತ್ತು ವ್ಯಕ್ತಿಗತ ಪೂರ್ಣತೆಯನ್ನು ತಂದುಕೊಡುತ್ತವೆ. ಈ ಕುರಿತು ಕಾಲ ಸಂದರ್ಭಗಳಲ್ಲಿ ಸಮುದಾಯದ ಕಸುಬು ಮತ್ತು ಬಳಕೆಯ ವಸ್ತುಗಳನ್ನು ಆಧರಿಸಿದ ಗಾದೆ ಮತ್ತು ಒಗಟುಗಳು ಹುಟ್ಟುತ್ತವೆ. ಇಂತಹ ಒಗಟು ಮತ್ತು ಗಾದೆಗಳು ಅವರ ನಂಬಿಕೆ ಮತ್ತು ಆಚರಣೆಗಳಿಗೆ ಗಟ್ಟಿತನವನ್ನು ತಂದು ಕೊಡುತ್ತವೆ. ಗಾಣಿಗರೊಂದಿಗೆ ಜಗಳ ಮಾಡಿದರೆ, ಒಣರೊಟ್ಟಿ ತಿನ್ನಬೇಕಾಗತೈತಿ ಎನ್ನುವ ಗಾದೆ ಮಾತು ಪ್ರಚಲಿತದಲ್ಲಿದೆ. ಗಾಣಿಗ ಸಮುದಾಯದಲ್ಲಿ ಹುಟ್ಟಿಗೆ ಸಂಬಂಧಿಸಿದ ಆಚರಣೆಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಮದುವೆಯಾಗಿ ಸೋಬಾನ ಪ್ರಸ್ತ (ಕಾರ್ಯ) ಮುಗಿದ ನಂತರ ಮನೆಯ ಹಿರಿಯ ಹೆಂಗಸರು ಅವಳ ತಿಂಗಳ ಮುಟ್ಟಿನ ಆವರ್ತನೆಯನ್ನು ಗಮನಿಸುತ್ತಿರುತ್ತಾರೆ. ವರ್ಷಾರು ತಿಂಗಳ ಕಾಲ ಗರ್ಭ ನಿಲ್ಲದಿದ್ದರೆ, ಸ್ವಾಮಿಗಳಿಂದ ಶಾಸ್ತ್ರ ಕೇಳಿಸಿ ಯಂತ್ರೋಪಚಾರ ಮಾಡಿಸುವರು. ಇತ್ತೀಚಿನ ದಿನಗಳಲ್ಲಿ ವೈದ್ಯರ ಸಲಹೆಗಳನ್ನು ಪಡೆಯುವರು. ಕೆಲವರು ಮನೆಯ ದೇವರಿಗೆ ಹರಕೆ ಹೊತ್ತು ಮುಡುಪು ಕಟ್ಟುವರು. ಹೆಣ್ಣು ಮಕ್ಕಳಿಗೆ ಮುಟ್ಟು ನಿಂತ ತಕ್ಷಣ ಪ್ರಯಾನ ಮತ್ತು ಭಾರವಾದ ಕೆಲಸವನ್ನು ಮಾಡಿಸುವುದಿಲ್ಲ. ಗಾಣಿಗರು ತಮ್ಮ ಕುಲಕಸುಬಿಗೆ ಕೊಡಲಿ ಏಟು ಬಿದ್ದಾಗಿನಿಂದ ವ್ಯಾಪಾರ, ಕೃಷಿಯನ್ನು ಅವಲಂಬಿಸಿದ್ದಾರೆ. ಇಂತಹ ಕಷ್ಟದ ಕೆಲಸಗಳಿಗೆ ಹಚ್ಚುವುದಿಲ್ಲ. ಗರ್ಭಿಣಿಯ ಸುರಕ್ಷತೆಯ ದೃಷ್ಟಿಯಿಂದ ಮುಂಜಾಗ್ರತೆ ಕ್ರಮವಾಗಿ ಊಟ ಮತ್ತು ತಿನಿಸುಗಳಲ್ಲಿ ಕೆಲವರನ್ನು ನಿಷೇಧಿಸುತ್ತಾರೆ. ಪಪ್ಪಾಯಿ, ಹಲಸು, ಕುಂಬಳಕಯಿ, ಹಸಿಕೊಬ್ಬರಿ, ಎಳ್ಳು, ಬಾಳೆ ಹಣ್ಣು ಇತ್ಯಾದಿ ಹಣ್ಣುಗಳನ್ನು ತಿನ್ನಲು ಕೊಡುವುದಿಲ್ಲ. ಜೊತೆಗೆ ಗಿಣ್ಣ ಮತ್ತು ಗೆಣಸು ಸಹ ಕೊಡುವುದಿಲ್ಲ. ನಾಲ್ಕೈದು ತಿಂಗಳವರೆಗೆ ನದಿ ಮತ್ತು ಹಳ್ಳ ದಾಟಿಸುವುದಿಲ್ಲ. ಉಡಿ ಅಕ್ಕಿ ಹಾಕಿಸುವುದಿಲ್ಲ. ಕಂಕಣ ಕಟ್ಟಿಕೊಂಡು ಶುಭ ಕಾರ್ಯದಲ್ಲಿ ಭಾಗವಹಿಸುವುದು ಸಹ ನಿಷಿದ್ಧ. ಬಸುರಿಯಾದ ಹೆಂಗಸು ತನ್ನ ಸೀಮಂತ ಕಾರ್ಯಕ್ಕೆ ಮುಂಚೆ ಋತುಮತಿ ಆದವಳಿಗೆ ನೀರು ಹಾಕುವುದಿಲ್ಲ. ಸಂಬಂಧಿಕರ ಶವ ಸಂಸ್ಕಾರದ ಸಂದರ್ಭದಲ್ಲಿ ಸ್ಮಶಾನಕ್ಕೆ ಹೋಗುವಂತಿಲ್ಲ. ಆದರೆ, ಆಕೆಯ ಗಂಡ ಶವಸಂಸ್ಕಾರದಲ್ಲಿ ಭಾಗವಹಿಸಿದರೂ ಹೆಣಕ್ಕೆ ಹೆಗಲು ಕೊಡಬಾರದು. ಗಾಣಿಗ ಸಮುದಾಯದಲ್ಲಿ ಈ ಎಲ್ಲ ಮುಂಜಾಗ್ರತೆಗಳನ್ನು ಜನನಕ್ಕೆ ಮುನ್ನವೇ ಪಾಲಿಸುವುದು ಕಂಡುಬರುತ್ತದೆ.

ಇವುಗಳಿಗೆ ಕಾರಣವೆಂದರೆ ಸಾರಿಗೆ ಮತ್ತು ವೈದ್ಯಕೀಯ ವ್ಯವಸ್ಥೆಯ ಅನಾನುಕೂಲತೆಗಳು. ಇತರೆ ಸಮುದಾಯಗಳಂತೆ ಗಾಣಿಗರಲ್ಲಿ ಚೊಚ್ಚಲ ಹೆರಿಗೆಯನ್ನು ತವರು ಮನೆಯಲ್ಲಿಯೇ ಮಾಡಿಸುವುದು ರೂಢಿಯಲ್ಲಿದೆ. ಎರಡನೆಯ ಹೆರಿಗೆಯನ್ನು ಸಹ ತವರು ಮನೆಯಲ್ಲಿ ಮಾಡಿಸಿದರೆ ಮೂರನೆಯದನ್ನು ತವರು ಮನೆಯಲ್ಲಿ ಮಾಡಿಸುವುದಿಲ್ಲ.

### ೫.೧.೧. ಜನನ

ಬಹುಪಾಲು ಗಾಣಿಗರು ತಂತಮ್ಮ ಊರುಗಳಲ್ಲೇ ತಮ್ಮವರ ನಡುವೆ ಬೀಗತನ ಮಾಡುತ್ತಾರೆ. ದೂರದ ಸಂಬಂಧ ಮಾಡುವುದರಿಂದ ಮಗಳು ಕಣ್ಣೆದುರಿಗೆ ಇದ್ದ ಹಾಗಾಗುವುದಿಲ್ಲ ಹಾಗೂ ಆ ಬಗೆಯ ಸಂಬಂಧಕ್ಕೆ ಅಗತ್ಯವಾದ ಖರ್ಚನ್ನು ನಿಭಾಯಿಸುವುದು ತಮ್ಮಿಂದ ಸಾಧ್ಯವಾಗುವುದಿಲ್ಲ ಎನ್ನುವುದೇ ಗಾಣಿಗರು ಸ್ಥಳೀಯ ನೆಂಟಸ್ತಿಕೆ ಮಾಡುವುದಕ್ಕೆ ಕಾರಣವಾಗಿದೆ. ಸಂಬಂಧವೆಂದರೆ ಮದುವೆ, ಶುಭಕಾರ್ಯ ಮೊದಲಾದ ಕಾರ್ಯಕಟ್ಟಳೆಗಳು ಇದ್ದೇ ಇರುತ್ತವೆ. ಅವುಗಳಿಗೆ ಹೋಗುವುದೇ ಇರಲಾಗುವುದಿಲ್ಲ. ಆದುದರಿಂದ ಸುಮ್ಮನೆ ಸ್ಥಳೀಯವಾದ ಬೀಗತನಕ್ಕೆ ಆಸಕ್ತಿ ತೋರುವುದು ರೂಢಿಯಾಗಿದೆ. ಕೆಲವರು ಇದ್ದ ಊರಿನ ಹಳೆಯ ಸಂಬಂಧಗಳ, ಏಕತಾನತೆಯಿಂದ ಬೇಸತ್ತು ದೂರದೂರುಗಳ ಹೊಸ ಸಂಬಂಧವನ್ನು ಹುಡುಕಿ ಹೋದವರೂ ಇದ್ದಾರೆ. ಇದ್ದ ಊರಿನ ಹಳೆಯ ಸಂಬಂಧಗಳೇ ಆದರೆ ಹೆಚ್ಚು ಸಲಿಗೆ, ಭಾವನಾತ್ಮಕ

ಸಂಬಂಧ, ಕಾಳಜಿ ಇರುತ್ತವೆ. ಅಲ್ಲದೆ ಮಗಳು ಕಣ್ಮುಂದೆಯಿರುವುದರಿಂದ ಎದ್ದು ಬಿದ್ದು ಅವಳು ಕಾಣುವುದರಿಂದ ಅವಳ ಕಷ್ಟ ಸುಖಕ್ಕೆ ಆಗಬಹುದು ಎಂಬ ಆಶಯ ಇಂಥ ಸಂಬಂಧಗಳ ಹಿನ್ನೆಲೆಯಲ್ಲಿ ಇದ್ದಂತಿದೆ.

ಗಾಣಿಗ ಸಮುದಾಯದಲ್ಲಿ ಹೆರಿಗೆ ಸೂಚಕದ ಅಳು ಬೇನೆ ಪ್ರಾರಂಭವಾಗುತ್ತಿದ್ದಂತೆಯೇ ಹಿರಿಯರ ಕಾಲಿಗೆ ನಮಸ್ಕಾರ ಮಾಡಿಸುತ್ತಾರೆ. ಇದು ಒಂದು ರೀತಿಯಲ್ಲಿ ರಕ್ತಸಂಬಂಧಿಕರು ಗರ್ಭಿಣಿ ಹೆಂಗಸಿಗೆ ಹೆರಿಗೆಯನ್ನು ಎದುರಿಸಲು ಕೊಡುವ ಧೈರ್ಯ ಮತ್ತು ಸಾಂತ್ವಾನವಾಗಿದೆ. ಗರ್ಭಿಣಿ ಹೆಂಗಸಿನ ನಡುವಿಗೆ ಎಣ್ಣೆ ಹಚ್ಚಿ ನೀರು ಕಾಯಿಸಿ ಹಾಕುತ್ತಾರೆ. ಸಮುದಾಯದ ಇಲ್ಲವೇ ಬೇರೆ ಸಮುದಾಯದ ಮಹಿಳೆ ಸೂಲಗಿತ್ತಿಯು ಕೂಸು ತಿರುವಿಹಾಕಿ ಕೂಸಿನ ಹೊಕ್ಕಳ ಹುರಿಯನ್ನು ಬ್ಲೇಡು ಅಥವಾ ಚೂಪಾದ ಚಾಕುವಿನಿಂದ ಕೊಯ್ಯುವಳು. ಮಗು ಗಂಡಾಗಿದ್ದರೆ ಕಂಚಿನ ಗಂಗಾಳ ಬಾರಿಸಿ ಸೂಚನೆ ಕೊಡುತ್ತಾರೆ. ಹೆಣ್ಣಾಗಿದ್ದರೆ ಜಿಬ್ಬಲಿ ಬಾರಿಸಿ ದಾಡಿ, ಮೀಸೆ ಹಾಗೂ ಪುರುಷರಿಗೆ ರೋಮ ಬರುವ ದೇಹದ ಭಾಗಗಳಿಗೆ ಮಾಸದ್ರವವನ್ನು ಸೂಲಗಿತ್ತಿ ಅಥವಾ ಮನೆಯ ಮುದುಕಿಯರು ಹಚ್ಚುವರು. ಮಗುವಿನ ಅಳ್ಳಿಪರಿ, ಜನನಾಂಗ, ಎದೆ ಮತ್ತು ಅಂಗಾಲಿಗೆ ಚುಟಗಿ ಹಾಕುತ್ತಾರೆ. ಮಗುವನ್ನು ಉಗುರು ಬೆಚ್ಚನ ನೀರಿನಿಂದ ಸ್ನಾನ ಮಾಡಿಸಿ ಬಿದಿರಿನ ಮೊರದಲ್ಲಿ ಅಥವಾ ಎರಡು ಕೈಗಳ ಮೇಲೆ ಹಾಕಿಕೊಂಡು ಹೊರಸಿನ ಮೇಲೆ (ಕಟಗಿ ಮಂಚ) ಮಲಗಿಸುತ್ತಾರೆ. ಮೂರು ದಿನಗಳ ತನಕ ಮಗುವಿಗೆ ಜೇನು ತುಪ್ಪ ಅಥವಾ ಅರಳೆಣ್ಣೆ ಜೊತೆಗೆ ಬೆಲ್ಲ ಬೆರೆಸಿ ಚೀಪಿಸುತ್ತಾರೆ. ಇದರಿಂದ (ಜನಿಸಿದ ಮಗು ಮಾಡುವ ಮೊದಲ ಬೇದಿ) ಚೆನ್ನಾಗಿ ಹೊರಬರುತ್ತದೆ. ಮೂರು ದಿನಗಳವರೆಗೆ ಮಗುವಿಗೆ ಎದೆಹಾಲು ಕುಡಿಸುವುದಿಲ್ಲ. ಏಕೆಂದರೆ: ಗೀಬದ ಹಾಲನ್ನು ಕುಡಿಸಿದರೆ ಮಗುವಿಗೆ ಬೇಧಿಯಾಗುತ್ತದೆ ಎಂಬುದು ಇವರ ನಂಬಿಕೆ.

ಈ ನಂಬಿಕೆ ಅವೈಜ್ಞಾನಿಕ. ಹೆರಿಗೆಯಾದ ತಾಯಿಯ ಎದೆಯ ಮೊದಲ ಹಾಲನ್ನು ಗೀಬದ ಹಾಲು ಎಂದು ಕರೆಯಲಾಗುತ್ತದೆ. ಈ ಹಾಲು ಮಗುವಿನ ಪ್ರಾಥಮಿಕ ಹಂತದಲ್ಲಿ ಅವಸ್ಯವಾಗಿ ಬೇಕಾದ ಎಲ್ಲಾ ಪೋಷಕಾಂಶಗಳಾದ ಪ್ರೋಟೀನ್ ಮತ್ತು ದೇಹಕ್ಕೆ ಬೇಕಾದ ಇತರೆ ಪ್ರಮುಖ ಪೋಷಕಾಂಶಗಳನ್ನು ಮತ್ತು ರೋಗ ನಿರೋಧಕ ಶಕ್ತಿಯನ್ನು ಒಳಗೊಂಡಿರುತ್ತದೆ. ಮಗುವನ್ನು ಉಸಿರಾಟದ ಸೋಂಕು ಮತ್ತು ಬೇದಿ ರೋಗದಿಂದ ಸಂರಕ್ಷಿಸುತ್ತದೆ. ಕಾರಣ ನುರಿತ ತಜ್ಞ ವೈದ್ಯರು ಹೆರಿಗೆಯ ಮರುಕ್ಷಣ ಸಾಧ್ಯವಾದಷ್ಟು ಬೇಗ ಮಗುವಿಗೆ ಎದೆಯ ಹಾಲು ಕುಡಿಸಬೇಕು ಎಂದು ಹೇಳುವರು:

Dr. K. Park says that, "the first milk of the mother is called 'colostrum' is the most suitable food for the baby During baby's early period because, it contains high concentration of protein and other nutrient the body needs; it is also rich in Anti-infective factors, which protect the body against respiratory infections and diarrhoeal diseases".

೫.೧.೨. ಬಾಣಂತನ

ಗಾಣಿಗ ಸಮುದಾಯದಲ್ಲಿ ಹೆರಿಗೆಯಾದ ತಕ್ಷಣ ಬಾಣಂತಿಗೆ ಬಿಸಿನೀರಿನಿಂದ ಸ್ನಾನ ಮಾಡಿಸಿ ನಡುವಿಗೆ ನಡುಪಟ್ಟಿ ಕಟ್ಟಿ ಅಗ್ಗದ ಹೊರಸಿನ ಮೇಲೆ ಕಾಲು ಮೇಲೆ ಕಾಲು ಹಾಕಿ ಮಲಗಿಸುವರು. ಮೂರು ದಿವಸದವರೆಗೆ ಬಿಸಿ ಬಿಸಿ ಗಂಜಿಯನ್ನು ಮಾಡಿ ಊಟಕ್ಕೆ ಕೊಡುವರು. ಮಗುವಿನ ಮಾಸವನ್ನು ಒಂದು ಮಣ್ಣಿನ ಮಡಿಕೆಯಲ್ಲಿ ಹಾಕಿ ಮುಚ್ಚಳ ಮುಚ್ಚಿ ಮನೆಯ ಹೊರಗೆ ಬಲಭಾಗದಲ್ಲಿ ಗುಂಡಿ ತೆಗೆದು (ತೋಡಿ) ಹುಗಿದು ಪೂಜೆಮಾಡುವರು. ಈ ಗುಂಡಿಯನ್ನು ಯಾರೂ ತುಳಿಯದಂತೆ ಮತ್ತು ನಾಯಿ, ಕೋಳಿ ಕೆದರದಂತೆ ಅದರ ಮೇಲೊಂದು ಚಿಕ್ಕ ಕಲ್ಲು ಇರಿಸುತ್ತಾರೆ. ಮಗುವಿನ ಜನನದ ಸುದ್ದಿಯನ್ನು ಬೀಗರಿಗೆ ಸೋದರ ಮಾವನ ಮೂಲಕ ತಿಳಿಸುತ್ತಾರೆ. ಸುದ್ದಿ ತಂದವರಿಗೆ ಖುಷಿಗಾಗಿ ಬಟ್ಟೆ, ಬಂಗಾರವನ್ನು ಕೊಡುವ ಪದ್ಧತಿ ಇವರಲ್ಲಿ ಕಂಡುಬರುತ್ತದೆ.

ಹೆರಿಗೆಯಾದ ಮೂರನೆಯ ದಿನದಂದು ಗಾಣಿಗರಲ್ಲಿ ಒಂದು ವಿಶೇಷ ಆಚರಣೆ ರೂಢಿಯಲ್ಲಿದೆ. ಅಂದು ಬೆಳಿಗ್ಗೆ ಬಾಣಂತಿಗೆ ಬೇವು ಹಚ್ಚಿ ತಲೆ ಸ್ನಾನಮಾಡಿಸಿ ಬೆಂಕಿ ಕಾಯಿಸುತ್ತಾರೆ. (ಬೇವು: ಬೆಳ್ಳುಳ್ಳಿ-ಅರಿಶಿಣ, ಹಿಪ್ಪಲಿ-ಮೋಡಿ, ಬಜೆ, ಮೆಂತೆ, ಲವಂಗ, ಉಪ್ಪು ಹಾಕಿ ತಯಾರಿಸಿದ ಲೇಹ) ಇದೇ ದಿನದಿಂದ ಬಾಣಂತಿಗೆ ಬೆಳಿಗ್ಗೆ ಹಾಗೂ ಸಂಜೆ, ಕೊಬ್ಬರಿ-ಖಾರ ಕೊಡುವರು. ಮೂರನೆಯ ದಿನದಿಂದ ಸಸ್ಯಹಾರದಿಂದ ತಯಾರಿಸಿದ ವಿವಿಧ ರುಚಿಯಾದ ಅಡುಗೆಯನ್ನು ಊಟಕ್ಕೆ ಮಾಡಿ ಕೊಡುವುದು ವಾಡಿಕೆ. ನಂಜಿನ ತರಕಾರಿಗಳಾದ ಕುಂಬಳಕಾಯಿ, ಬದನೆಕಾಯಿ, ಗೆಣಸು ಮತ್ತು ಹಸಿಮೆಣಸಿನಕಾಯಿ ಕೊಡುವುದಿಲ್ಲ. ಹೆರಿಗೆಯ ಸಂದರ್ಭದಲ್ಲಿ ಅತಿಯಾದ ರಕ್ತಸ್ರಾವದಿಂದ ನಿಶ್ಯಕ್ತಿ ಉಂಟಾಗಿರುತ್ತದೆ. ಆದ್ದರಿಂದ ಪೌಷ್ಟಿಕವಾದ ಆಹಾರವನ್ನು ಕೊಡುವರು. ಅಂದರೆ ಹೆರಿಗೆಯ ನಂತರ ಮಗುವಿಗೆ ಮೊಲೆಯುಣಿಸುವ ಮಹಿಳೆಗೆ ವೈದ್ಯ ಶಾಸ್ತ್ರದ ಅನುಪಾತದ ಪ್ರಕಾರ ೨೪೦೦-೨೫೦೦ ಕಿಲೊ ಕ್ಯಾಲರೀಸ್ ಶಕ್ತಿಯ ಆಹಾರವನ್ನು ಕೊಡಬೇಕಾಗುತ್ತದೆ. ಈ ಪರಿಕಲ್ಪನೆ ನಮ್ಮ ಲಿಂಗಾಯಿತ ಸಮುದಾಯದಲ್ಲಿ ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿರುವುದು ಕಂಡುಬರುತ್ತದೆ. ಇತ್ತೀಚೆಗೆ ಬಾಣಂತಿಗೆ ಹೆರಿಗೆಯಾದ ಮಾರನೆಯ ದಿನದಿಂದ ಮನೆಯಲ್ಲಿ ಎಲ್ಲರಿಗೂ ಮಾಡಿದ ಸಹಜವಾದ ಅಡುಗೆಯನ್ನು ಊಟಕ್ಕೆ ಕೊಡುವುದು ಅನಿವಾರ್ಯವಾಗಿದೆ. ಮೂರನೆಯ ದಿನ ಸಂಜೆಯ ವೇಳೆಗೆ ನೀರಲ ಪೂಜೆಗೆ ಅಣಿ ಮಾಡುತ್ತಾರೆ.

ಮನೆಯ ಹಿರಿಯ ಮುದುಕಿಯರು ಆ ದಿವಸ ಬೆಳಿಗ್ಗೆ ಬಜೆಯನ್ನು ಚಿಕ್ಕ ಚಿಕ್ಕ ತುಂಡುಗಳಾಗಿ ಕತ್ತರಿಸಿ ನೆನೆ ಹಾಕುವರು. ಸಾಯಂಕಾಲ ಹೊರಸಿನ ಕೆಳಗೆ ಸ್ವಲ್ಪ ಅಕ್ಕಿ ಹಾಕಿ ಅದರ ಮೇಲೆ ನೀರು ತುಂಬಿಸಿದ ಚಂಬು (ತಂಬಿಗೆ) ಇಡುವರು. ಚಂಬಿಗೆಯ ಮುಂದೆ ಒಂದು ಗುಂಡು ಕಲ್ಲು ಇರಿಸುತ್ತಾರೆ. ತುಂಬಿದ ಚಂಬಿಗೆ ಚಟಿಗೆಮ್ಮನ ಸಂಕೇತವಾದರೆ, ಗುಂಡುಕಲ್ಲು ಭರ್ಮಪ್ಪ ದೇವರ ಸಂಕೇತವಾಗಿದೆ. ಒಂದು ಬಟ್ಟಲಿನಲ್ಲಿ ಹಾಲು ತುಪ್ಪ ಇರಿಸಿ, ಗೇಣುದ್ದ ಕಟ್ಟಿಗೆಯ ಮೇಲೆ ಬೆಳ್ಳುಳ್ಳಿ-ಲವಂಗ-ವೀಳ್ಯದೆಲೆಯ ತೊಟ್ಟು ಈ ಮೂರನ್ನು ತೇದು ಕಾಡಿಗೆ ತಯಾರಿಸುವರು. ಮಗುವಿನ ಸೋದರತ್ತೆ ಬಜೆಕಂಕಣ ತಯಾರಿಸಿ ಬಾಣಂತಿ-ಮಗುವಿಗೆ ಮತ್ತು

ಹೊರಸಿನ ನಾಲ್ಕು ಕಾಲುಗಳಿಗೆ ಕಟ್ಟುವಳು. ಮಗುವಿನ ಹಣಗೆ ಕಾಡಿಗೆ ಹಚ್ಚಿ ಭರ್ಮಪ್ಪನ ಮುಂದಗಡೆ ಮಲಗಿಸುತ್ತಾರೆ. ಹಾಗೆಯೇ ಬಂದವರೆಲ್ಲ ಕಾಡಿಗೆ ಹಚ್ಚಿಕೊಂಡು ಬಜಿ ಕಂಕಣ ಕಟ್ಟಿಕೊಳ್ಳುವರು. ಸೋದರತ್ತೆ ಭರ್ಮಪ್ಪನ ಪೂಜೆ ಮಾಡಿದ ಬಳಿಕ, ಹೊರಗಡೆ ಬಾಗಿಲ ಬಲ ಪಕ್ಕಕ್ಕೆ ಹುಗಿದಿರುವ ಮಾಸದ ಚಟಿಗೆಗೂ ಪೂಜೆ ಮಾಡುವರು. ಆಗ ಬಾಣಂತಿಯು ಚಟಿಗೆಮ್ಮ ಮತ್ತು ಬರ್ಮಪ್ಪ ದೇವರಿಗೆ ನಮಸ್ಕಾರ ಮಾಡಿ ಬಲಗೈಯ ಐದು ಬೆರಳಿನಿಂದ ಮೂರು ಬಾರಿ ಲೋಬಾನದ ಬೆಂಕಿಗೆ, ಇಲಿಕಿ ಬೆಂಕಿಗೆ ಮತ್ತು ಮನೆಯ ಹೊಳಗೆ ಹಾಲು ತುಪ್ಪ, ತೀರ್ಥ ನೀರು ಚಿಮುಕಿಸಿ ಅವಳ ಮುತ್ತು ಚೆಲ್ಯಾವು ಬಳಕ ಎಂದು ಸೂಲಗಿತ್ತಿ ಹೇಳುವಳು. ಬಂದಿರುವ ಮಹಿಳೆಯರಿಗೆ ಮತ್ತು ಸಣ್ಣ ಸಣ್ಣ ಮಕ್ಕಳಿಗೆ ಮಂಡಕ್ಕಿ ಕೊಬ್ಬರಿ ಫಲಾಹಾರ ಕೊಡುವರು. ರಾತ್ರಿಯ ಮಲಗುವ ಮುನ್ನ ಭರ್ಮಪ್ಪ ಮತ್ತು ಚಟಿಗೆಮ್ಮನನ್ನು ಕಬ್ಬಿಣದ ಪುಟ್ಟಿಯಿಂದ ಮುಚ್ಚಿಡುತ್ತಾರೆ. ಮಗುವಿನ ತಲೆಯ ಪಕ್ಕದಲ್ಲಿ ಬಳಪ ಮತ್ತು ಪಾಟಿ ಮತ್ತು ವೀಳ್ಯದೆಲೆ ಹಾಗೂ ಕಾಡಿಗೆಯ ಡಬ್ಬಿಯನ್ನು ಇರಿಸುವರು. ಆ ದಿನರಾತ್ರಿ ಇದಿ ಮುಂಡೆ ಅಥವಾ ಚಟಿಗೆಮ್ಮ ಮಗುವಿನ ಹಣೆಬರಹ ಬರೆಯುತ್ತಾಳೆ ಎಂದು ಇವರು ನಂಬುತ್ತಾರೆ. ಇದಿಷ್ಟು ಮೂರನೆ ದಿನದ ನೀರಲ ಪೂಜೆಯ ಆಚರಣೆಯಾಗಿರುತ್ತದೆ.

ಗಾಣಿಗರಲ್ಲಿ ಗಂಗೆ ಪೂಜೆಗೆ ಹೋಗಿಬರುವ ತನಕ ಬಾಣಂತಿಯು ತಣ್ಣೀರು ಮುಟ್ಟುವುದಿಲ್ಲ. ಹೊರಗಡೆ ಹೋಗುವಾಗ, ಮುಸುಕು ಹಾಕಿಕೊಂಡು ಕೈಯಲ್ಲಿ ಲಿಂಬೆಹಣ್ಣು ಹಿಡಿದುಕೊಂಡು ಜೊತೆಗೆ ಸಣ್ಣ ಹುಡುಗಿಯನ್ನು ಕರೆದುಕೊಂಡು ಹೋಗುವಳು. ತಿಂಗಳ ಪೂರ್ತಿ ಮಗುವಿಗೆ ಪ್ರತಿ ದಿವಸ ಎಣ್ಣೆ ಹಚ್ಚಿ ನೈದು ಹುಗುರು ಬೆಚ್ಚನ ನೀರಿನಿಂದ ಸ್ನಾನ ಮಾಡಿಸಿ ತಕ್ಷಣ ನೆತ್ತಿಗೆ ಅರಿಶಿಣ ಪುಡಿ ಹಾಕಿ ವೀಳ್ಯದೆಲೆ ಇಟ್ಟು ಕುಂಚಿಗಿ (ಕುಲಾಯಿ) ಕಟ್ಟುತ್ತಾರೆ. ಆ ದಿನ ಮನೆಯೆಲ್ಲ ಸಾರಿಸಿ ಗೋಮೂತ್ರವನ್ನು ಚಿಮುಕಿಸುವರು. ಅಲ್ಲಿಯ ತನಕ ದೇವರ ಪೂಜೆಯನ್ನು ಮಾಡಿರುವುದಿಲ್ಲ. ಆ ದಿನ ಮನೆಯಲ್ಲಿರುವ ಎಲ್ಲ ದೇವರುಗಳನ್ನು ನೀರಿನಿಂದ ತೊಳೆದು ಸ್ವಾಮಿಗಳಿಂದ ಪೂಜೆ ಮಾಡಿಸುತ್ತಾರೆ. ಈ ನಡುವೆ ಉದುರಿದ ಮಗುವಿನ ಹೊಕ್ಕಳು ಬಳ್ಳಿಯನ್ನು ಒಂದು ತುಂಡು ಬಟ್ಟೆಯಲ್ಲಿ ಕಟ್ಟಿ ಹಳ್ಳಕ್ಕೆ ಇಲ್ಲವೆ ನದಿಗೆ ಬಿಡುವರು. ಹೆರಿಗೆ ಕುರಿತಂತೆ ಸಮುದಾಯದಲ್ಲಿ ಪ್ರತ್ಯೇಕವಾದ ಮನೆಗಳು ಇರುವುದಿಲ್ಲ. ಇದ್ದ ಮನೆಯ ಒಂದು ಮೂಲೆಯಲ್ಲಿ ಅಥವಾ ಒಂದು ಕೋಣೆಯಲ್ಲಿ ಹೆರಿಗೆಯ ಸ್ಥಳವನ್ನು ನಿರ್ಮಿಸುತ್ತಿದ್ದರೆಂದು ಬಳ್ಳಾರಿ ಜಿಲ್ಲೆಯ ಲಿಂಗಾಯಿತ ಗಾಣಿಗರಲ್ಲಿ ಕಂಡುಬರುತ್ತದೆ.

### ೫.೧.೩. ಗಂಗೆಪೂಜೆ (ಗಂಗೆಗೆ ಹೋಗಿ ಬರುವುದು)

ಕರ್ನಾಟಕದ ಅನೇಕ ಲಿಂಗಾಯಿತ ಸಮುದಾಯಗಳಲ್ಲಿ ಗಂಗೆಯನ್ನು ದೇವತೆ ಎಂದು ಧಾರ್ಮಿಕ ಮತ್ತು ಸಾಮಾಜಿಕ ಆಚರಣೆಯ ಸಂದರ್ಭದಲ್ಲಿ ಅತ್ಯಂತ ಶ್ರದ್ಧೆಯಿಂದ ಪೂಜಿಸುವರು. ಲಿಂಗಾಯಿತ ಸಮುದಾಯಗಳ ಅನೇಕ ಮಂಗಳ ಮತ್ತು ಶುಭಕಾರ್ಯ ಸಂದರ್ಭಗಳಲ್ಲಿ ಗಂಗೆಗೆ ಅಗ್ರಸ್ಥಾನ. ವಿಶೇಷವಾಗಿ ಗಂಗೆ ಪವಿತ್ರವಾದ್ದರಿಂದ ಮೈಲಿಗೆಯಾದವಳು ಹೊಲಿ ತೆಗಿಯುವ ತನಕ ಗಂಗೆಯನ್ನು ಮುಟ್ಟಬಾರದು ಎಂಬುದು

ಈ ಸಮುದಾಯಗಳಲ್ಲಿ ನಿಷಿದ್ಧ ಸಹಜವಾಗಿದೆ. ವಿಶೇಷ ಗಂಗೆಯ ಪೂಜೆಯಂತಹ ಆಚರಣೆಯಿಂದ ಮೈಲಿಗೆಯಾದವಳು ಮತ್ತೆ ಮೋಕ್ಷ ಸ್ಥಿತಿಗೆ ಬರುತ್ತಾಳೆ ಎಂಬ ನಂಬಿಕೆಯನ್ನು ಮುಂದಿಟ್ಟು ಆಕೆಗೆ ದೈಹಿಕ ವಿಶ್ರಾಂತಿಯನ್ನು ನೀಡಲು ಈ ಆಚರಣೆ ರೂಢಿಗೆ ಬಂದಿರುವ ಸಾಧ್ಯತೆಗಳಿವೆ. ಹೀಗಾಗಿ ಹೆರಿಗೆಯಿಂದ ಮೈಲಿಗೆಯಾದ ಹೆಣ್ಣು ಗಂಗೆಗೆ ಹೋಗಿಬರುವುದರ ಮೂಲಕ ಮೋಕ್ಷ ಸ್ಥಿತಿಗೆ ಮರುಳುವ ನಂಬಿಕೆ ಆಚರಣೆಯಾಗಿ ಮುಂದುವರಿದಿದೆ. ಗಾಣಿಗರಲ್ಲಿ ಹೆರಿಗೆಯಾದ ಹನ್ನೊಂದು ಅಥವಾ ಹದಿನಾರನೇ ದಿನ ಇಲ್ಲವೇ, ತಿಂಗಳು ತುಂಬುವದರೊಳಗೆ ಗಂಗೆಗೆ ಹೋಗಿ ಬರುತ್ತಾರೆ. ಆ ದಿನ ಗಂಗೆ ಪೂಜೆಗೆ ಹೋಗಿಬರುವುದಕ್ಕಾಗಿ, ಓಣಿಯ ಅಥವಾ ಅಕ್ಕಪಕ್ಕದ ಮನೆಯ ಹೆಂಗಸರನ್ನು ಕರೆದು ಬರುತ್ತಾರೆ. ಹೆಂಗಸರು ಅಲಂಕಾರ ಮಾಡಿಕೊಂಡು ಪ್ರಾಯದ ಹುಡುಗಿಯರು ಜೊತೆಗೆ ಮಕ್ಕಳುಗಳು ಪೂಜೆ ಸಾಮಗ್ರಿಯೊಂದಿಗೆ ಗಂಗೆ ಪೂಜೆಗೆ ಹೋಗಲು ತಯಾರಾಗುವರು. ಬಾಣಂತಿಯ ಕಂಕುಳಲ್ಲಿ (ಸೊಂಟ) ಒಂದು ಚಿಕ್ಕ ಬಿಂದಿಗೆ ಅಥವಾ ಕೊಡ ಕೊಟ್ಟಿರುತ್ತಾರೆ. ಉಡಿಯಲ್ಲಿ ಜೋಳ, ಅರಿಶಿಣ ಹಚ್ಚಿದ ಹತ್ತಿಕಾಳು, ತುಂಬಿರುತ್ತಾರೆ. ಬಾಣಂತಿಯು ಗಂಗೆಯ ಪೂಜೆ ಮಾಡಿಕೊಂಡು ಉಳಿದ ಹೆಂಗಸರೊಂದಿಗೆ ಸೇರಿ ಬರುತ್ತಾರೆ. ಈ ರೀತಿ ಬರುವಾಗ ಸಣ್ಣ ಸಣ್ಣ ಮಕ್ಕಳು ಕುಣಿದು ಕುಪ್ಪಳಿಸುತ್ತಾ ಮುಂದೆ ಮುಂದೆ ಸಾಗಿರುತ್ತಾರೆ.

ಈ ರೀತಿಯಾಗಿ ದಿಬ್ಬಣದೊಂದಿಗೆ ಹೊರಟ ಎಲ್ಲರೂ ಗಂಗೆಯ (ಬಾವಿ) ಹತ್ತಿರ ಬರುತ್ತಾರೆ. ಪ್ರಸ್ತುತ ದಿನಗಳಲ್ಲಿ ಬಾವಿಯ ಸ್ಥಾನದಲ್ಲಿ ಬೀದಿಯ ನಳ (ನಲ್ಲಿ), ಮಿನಿಟ್ಯಾಂಕ್ ಇಲ್ಲವೇ ಮನೆಯ ಮುಂದೆ ಸ್ವತಹ ಹಾಕಿಸಿಕೊಂಡ ನೀರಿನ ನಳಗಳನ್ನು ಬಳಸುವುದು ಅನಿವಾರ್ಯವಾಗಿದೆ. ಮುತ್ತೈದೆಯರೆಲ್ಲರು ಸೇರಿ ಕಟ್ಟೆಯನ್ನು ಮಡಿ ಮಾಡುವರು. ಬಾಣಂತಿಯು ಹೊತ್ತು ತಂದ ಕೊಡದಲ್ಲಿ ನೀರು ತುಂಬಿ ಇರಿಸುವರು. ಮಡಿ ಮಾಡಿದ ಸ್ಥಳದಲ್ಲಿ ಐದು ಮಣ್ಣಿನ ರಾಶಿಯನ್ನು ಮಾಡಿ ಅಂಗನೂಲು (ಐದೆಳೆದಾರ) ಹಾಕಿ ಪೂಜಿಸುತ್ತಾರೆ. ಕಾಯಿ ಹೊಡೆದು ಉದ್ದಿನ ಕಡ್ಡಿಯನ್ನು ಬೆಳಗಿ ಮುತ್ತೈದೆಯರು ಅಂಗನೂಲ ಹಾಕಿಕೊಂಡು ವೀಳ್ಯದ ಜೊತೆ ಬಾಳೆ ಹಣ್ಣು ಕೊಬ್ಬರಿಯ ಉಡಿ ತುಂಬಿಸಿಕೊಳ್ಳುವರು. ನಂತರ ಬಾಣಂತಿಯು ಗಂಗಮ್ಮನನ್ನು ಪೂಜೆ ಮಾಡಿ ಎಡೆಗೆ ತಂದ ಅನ್ನ ಬೆಲ್ಲ ನೈವೇದ್ಯ ಮಾಡುತ್ತಾಳೆ. ಗಂಗೆಗೆ ಹಾಲು ತುಪ್ಪ ಹಾಕಿ ತುಪ್ಪದ ದಾರಿ ತೊಗೊಂಡು ನೀರಿನ ದಾರಿಯನ್ನು ಕೊಡು ಎಂದು ಬೇಡುವರು. ಈ ಬೇಡಿಕೆ ಅಂದಿನಿಂದ ಮೈಲಿಗೆ ಆದವಳು ನೀರನ್ನು (ಗಂಗೆ) ಮುಟ್ಟಲು ಪಡೆದ ಅಧಿಕೃತ ಪರವಾನಿಗೆಯಾಗಿದೆ. ನಂತರ ಮಣ್ಣಿನಿಂದ ಮಾಡಿದ ಐದು ರಾಶಿಗಳು ಮತ್ತು ವೀಳ್ಯವನ್ನು ಗಂಗೆಗೆ ಹಾಕಿ ಬಾಣಂತಿಯ ತಲೆಯ ಮೇಲೆ ಕೊಡ ಅಥವಾ ಬಿಂದಿಗೆ ಹೊರಿಸಿಕೊಂಡು ಬರುತ್ತಾರೆ. ಜೊತೆಯಲ್ಲಿ ಬಂದ ಮಕ್ಕಳಿಗೆ ಮಂಡಕ್ಕಿ ಕೊಬ್ಬರಿ ಫಲಾಹಾರ ಕೊಡುವರು. ಪೂಜೆಗೆ ಬಂದ ಮಹಿಳೆಯರಿಗೆ ಮನೆಯಲ್ಲಿ ವಿಶೇಷವಾಗಿ ಟಿಫನ್ (ತಿಂಡಿ) ಮಾಡಿ ಕಳಿಸುವರು.

### ೫.೨. ಋತುಮತಿ (ಮೈನೆರೆಯುವುದು)

ಹೆಣ್ಣು ಬಾಲ್ಯ ವ್ಯವಸ್ಥೆಯಿಂದ ಯೌವನ ವ್ಯವಸ್ಥೆಗೆ ಕಾಲಿಡುವ ಪೂರ್ವದಲ್ಲಿ ಋತುಮತಿ ಆಗುವುದು ನಿಸರ್ಗದ ನಿಯಮ. ಹೆಣ್ಣು ಮೊದಲ ಸಲ ಮುಟ್ಟಾಗುವುದಕ್ಕೆ ಋತುಮತಿಯದವಳು, ಮೈನೆರೆದಳು, ದೊಡ್ಡಕ್ಯಾದಳು, ವಯಸ್ಸಿಗೆ ಬರುವುದು ಎಂದೆಲ್ಲಾ ಕರೆಯಲಾಗುತ್ತದೆ.

ಗಾಣಿಗರಲ್ಲಿ ಹೆಣ್ಣು ಋತುಮತಿಯಾದಾಗ ಅವಳನ್ನು ಯಾರು ಮುಟ್ಟಿಸಿಕೊಳ್ಳುವುದಿಲ್ಲ. ಅವಳನ್ನು ಆಗ ಅಪವಿತ್ರಳು ಎಂದು ಭಾವಿಸುತ್ತಾರೆ. ಇದು ೧೨ ರಿಂದ ೧೪ ವರ್ಷದಲ್ಲಿ ನಡೆಯುವ ಕ್ರಿಯೆ. ಋತುಮತಿಯಾದುದಕ್ಕ ಮಾಡುವ ಶಾಂತಿಯೇ ಋತುಶಾಂತಿ. ಅನಂತರ ಹೆಣ್ಣು ಸಂತಾನಕ್ಕೆ ಯೋಗ್ಯಳಾಗುತ್ತಾಳೆ. ಮಗಳ ಮುಖ ಸಪ್ಪಗಾಗಿ ಉಟ್ಟ ಲಂಗಕ್ಕೆ ರಕ್ತ ಹತ್ತಿದ್ದು ಕಂಡುಬಂದರೆ, ಮನೆಯ ಹಿರಿಯರು ಮಗಳು ದೊಡ್ಡವಳಾದಳು ಎಂದು ತಿಳಿದು ಅವಳನ್ನು ಮನೆಯ ಮೂಲೆಯೊಂದರಲ್ಲಿ ಕೂಡಿಸುತ್ತಾರೆ.[೨]

ಋತುವಾದ ದಿನ ಮುತ್ತೈದೆಯರ ಸೋದರತ್ತೆ ಕೂಡಿಕೊಂಡು ಅವಳಿಗೆ ಸ್ನಾನ ಮಾಡಿಸುತ್ತಾರೆ. ಅಪವಿತ್ರಳು ಎಂದು ಭಾವಿಸಿ ಅವಳಿಗೆ ತೊಟ್ಟುಕೊಳ್ಳಲಿಕ್ಕೆ ಹಳೆಯ ಬಟ್ಟೆ, ಹೊಚ್ಚಿಗೊಳ್ಳಲಿಕ್ಕೆ ಚಾದರ, ಹಾಸಿಕೊಳ್ಳಲಿಕ್ಕೆ ಚೀಲದ ತಟ್ಟು ಅಥವಾ ಸಣ್ಣ ಜಮಕಾನ ಊಟಕ್ಕೆ ಕಡಿಮೆ ಬೆಲೆಯ ತಟ್ಟೆ ತಂಬಿಗೆಗಳನ್ನು ಕೊಟ್ಟಿರುತ್ತಾರೆ. ಎರಡು, ಮೂರು ದಿನಗಳವರೆಗೆ ಅವಳಿಗೆ ಸಪ್ಪನೆಯ ಆಹಾರವನ್ನು ಕೊಡುತ್ತಾರೆ. ನಂತರ ಓಣಿಯವರು ಮತ್ತು ಸಂಬಂಧಿಕರು ಎಡೆ ಕಳಿಸುತ್ತಾರೆ. ಗೆಳತಿಯರು ವಿಶೇಷವಾಗಿ ದಿನ್ನಾಗರಿಯ ಸಿಹಿ ತಿನುಸುಗಳನ್ನು ಕೊಟ್ಟು ತಮ್ಮ ಮನೆಗೆ ಹೋಗುವರು.

೭-೯-೧೧-೧೭-೨೧ ಹೀಗೆ ಪಂಚಾಂಗಕ್ಕೆ ಪೂರಕವಾಗಿ ಅವರವರ ಅನುಕೂಲಕ್ಕೆ ತಕ್ಕಂತೆ ಅಷ್ಟು ದಿನಗಳವರೆಗೆ ಕೂಡಿಸಿ ಕೊನೆಯ ದಿನ ಎಬ್ಬಿಸುತ್ತಾರೆ. ಎಬ್ಬಿಸುವ ದಿನ ಸುಂದರವಾಗಿ ಮಂಟಪವನ್ನು ಮಾಡಿ ಲೌಡಸ್ಪೀಕರ ಹಚ್ಚಿ ಅತ್ಯಂತ ವಿಜೃಂಭಣೆಯಿಂದ, ಅಲಂಕಾರ ಮಾಡಿ ಮಂಟಪದಲ್ಲಿ ಕುಂದ್ರಿಸಿ ಬಂದ ಮುತ್ತೈದೆಯರೆಲ್ಲ ಆರತಿ ಬೆಳಗುತ್ತಾರೆ. ಹೀಗೆ ಕಾರಣ ಮಾಡಿದ ಮೇಲೆ ಬಂದ ಬೀಗರಿಗೆ, ಊರಿನವರಿಗೆ ಸಿಹಿ ಅಡುಗೆಯನ್ನು ಊಟ ಮಾಡಿಸಿ ಅಡಿಕೆ ಎಲೆಯನ್ನು ಕೊಟ್ಟು ಕಳಿಸಲಾಗುತ್ತದೆ. ಬಂದವರೆಲ್ಲರೂ ಆ ಯೇರೆ ಮಾಡುತ್ತಾರೆ.[೩]

ಪಟ್ಟಣದ ಸಂಸ್ಕೃತಿಯ ಪ್ರಭಾವಕ್ಕೆ ಗಾಣಿಗರು ಕೂಡಾ ಒಳಗಾಗುತ್ತಿರುವುದರಿಂದ ಹುಡುಗಿ ಮೈನೆರೆದ ವಿಷಯ ಮನೆಯವರಿಗಷ್ಟು ಬಿಟ್ಟರೆ ಮಗ್ಗುಲ ಮನೆ ಓಣಿ ಕೇರಿಯವರಿಗೂ ಗೊತ್ತಾಗದೇ ಹೋಗುತ್ತದೆ. ಇದು ನಮ್ಮ ಸಮುದಾಯದ ಸಂಸ್ಕೃತಿಯ ಹಿಂಬೀಳಿಕೆಯೆನ್ನಬಹುದು.

### ೫.೩. ಜವಳ ತೆಗೆಸುವುದು

ಗಾಣಿಗ ಸಮುದಾಯದಲ್ಲಿ ಮಗು ಹುಟ್ಟಿದ ವರ್ಷದೊಳಗೆ ಆ ಮಗುವಿನ ತಲೆಗೂದಲನ್ನು ಕತ್ತರಿಸುವುದಕ್ಕೆ ಜವಳ ತೆಗೆಸುವುದು ಎಂದು ಕರೆಯುತ್ತಾರೆ. ಇದನ್ನು ಹುಟ್ಟು ಕೂದಲು ತೆಗೆಸುವುದೆಂದೂ ಅನ್ನುತ್ತಾರೆ. ಮಗು ಗಂಡಿರಲಿ, ಹೆಣ್ಣಿರಲಿ, ಹುಟ್ಟು ಕೂದಲನ್ನು ತೆಗೆಸುವುದೊಂದು ಕಡ್ಡಾಯ ಸಂಸ್ಕಾರ.

ಈ ಶಾಸ್ತ್ರಕ್ಕೆ ಹೆಣ್ಣು ಗಂಡಿನ ಕಡೆಯ ಬಂಧು ಬಳಗ ನೆಂಟರಿಷ್ಟರನ್ನು ಕರೆಸುತ್ತಾರೆ. ಸದರಿ ದಿನ, ಅಂಗಳ ಸಾರಿಸಿ, ಸಗಣಿ ನೀರು ಚಿಮುಕಿಸಿ, ರಂಗೋಲಿ ಹಾಕಿ, ಹೊಸ್ತಿಲು ಸಾರಿಸಿ, ಕುಂಕುಮ ಭಂಡಾರ ಹಚ್ಚಿ ಶುಭ್ರ ಮಾಡುತ್ತರೆ. ಅಂದು ಮನೆಯಲ್ಲಿನ ಎಲ್ಲರೂ ಜಳಕ ಮಾಡಿ, ಬಟ್ಟೆಗಳನ್ನು ತೊಳೆದು ಶುಭ್ರಗೊಳಿಸಿ ತೊಟ್ಟುಕೊಳ್ಳುತ್ತಾರೆ.

ಕೂಸಿನ ಅಪ್ಪ ಅವ್ವ, ಇಲ್ಲವೆ ಆಯಿ ಮುತ್ತ್ಯಾ ತಾವು ಬೇಡಿಕೊಂಡು ಕುಲ ದೇವರು ಅಥವಾ ಮನೆದೇವರು ಇದ್ದಲ್ಲಿಗೆ" ಜಾತ್ರೆ ಸಮಯದಲ್ಲಿ ಹೋಗಿ ಅಲ್ಲಿ ಕೂಸಿನ ಕೂದಲನ್ನು ಮೊದಲ ಸಲ ಕತ್ತರಿಸುವುದಕ್ಕೆ ಜವಳ ಇಲ್ಲವೆ ಜಡಿ ತೆಗೆಯುವುದು ಎನ್ನುತ್ತಾರೆ. ಅನುಕೂಲಸ್ಥರು ತುಂಬಾ ವಿಜೃಂಭಣೆಯಿಂದ ಈ ಕಾರ್ಯವನ್ನು ಮಾಡಿದರೆ ಕಡುಬಡವರು ತಾವಿದ್ದಲ್ಲಿಯೇ ಆ ದೇವರ ಹೆಸರಿನಲ್ಲಿ ವಾರದ ದಿನ ನೋಡಿ ಜವಳ ತೆಗೆಯುತ್ತಾರೆ. ಹುಟ್ಟಿದ ಮಗು ಹೆಣ್ಣಾಗಿದ್ದರೆ ೩-೫-೭-೯-೧೧ನೇ ತಿಂಗಳಲ್ಲಿ, ೧-೨-೩-೫ ವರ್ಷಗಳ ಒಳಗೆ ತಮಗೆ ಅನುಕೂಲವಾದಾಗ ಜಡಿ ತೆಗೆಯುತ್ತಾರೆ. ಈ ಕಾರಣವನ್ನು ಮಗುವಿನ ಸೋದರ ಮಾವನೇ ನಡೆಯಿಸಿಕೊಡಬೇಕು. ಎಲೆ, ಅಡಿಕೆ, ಅಕ್ಕಿ, ಉತ್ತುತ್ತಿ, ಅರಿಷಣ, ಕೊಬರಿ ಮುಂತಾದವುಗಳಿಂದ ದೇವರ ಉಡಿ ತುಂಬಿ ಸೋದರ ಮಾವನ ಮಗುವಿನ ತಲೆಗೆ ಎಲೆಗತ್ತರಿ ಮುಟ್ಟಿಸಿ ಬಿಟ್ಟರೆ ಜಡಿ ತೆಗೆದಂತೆ. ಕೆಲವರು ಎಲ್ಲ ತಲೆಗೂದಲನ್ನು ಅಲ್ಲಿಯೇ ಕತ್ತರಿಸಿದರೆ, ಕೆಲವರು ಊರಿಗೆ ಬಂದ ಕೂದಲನ್ನು ತೆಗೆಸುತ್ತಾರೆ. ನಂತರ ಕೂಸಿಗೆ ಹೊಸ ಬಟ್ಟೆಯನ್ನುಡಿಸಿ ತಾಯಿಯ ತೊಡೆಯ ಮೇಲೆ ಹಾಕುತ್ತಾರೆ. ತಂದೆ ತಾಯಿ ಅಥವಾ ಇನ್ನಾದರೂ ಬೇಡಿಕೊಂಡಿದ್ದರೆ, ಅವರು ದೀಡ ನಮಸ್ಕಾರ ಹಾಕಿ ಹೊಸ ಬಟ್ಟೆಯನ್ನುಟ್ಟಿರುತ್ತಾರೆ. ಬೀಗರಾಗುವವರು 'ಆಯೇರಿ' (ಮುಯ್ಯಿ) ಮಾಡಿದ ಬಳಿಕ ಜಡಿ ತೆಗೆದ ಸೋದರ ಮಾವನಿಗೂ ಆಯೇರಿ ಮಾಡುತ್ತಾರೆ. ಆಮೇಲೆ ಎಲ್ಲರೂ ಸಾಮೂಹಿಕವಾಗಿ ಊಟ ಮಾಡಿ" ತಂದ ಎತ್ತಿನ ಗಾಡಿ, ಟ್ರ್ಯಾಕ್ಟರ್, ಟ್ರಕ್, ಟೆಂಪೊ ಮುಂತಾದ ವಾಹನಗಳ ಮೂಲಕ ತಮ್ಮ ಊರಿಗೆ ಬರುತ್ತಾರೆ.

**೫.೩.ಅ. ಮಗುವಿನ ಪಾಲನೆ ಪೋಷಣೆ ಕುರಿತಂತೆ ವಿಶೇಷ ಆಚರಣೆಗಳು**

ಗಾಣಿಗ ಸಮುದಾಯದಲ್ಲಿ ಹುಟ್ಟಿನ ಸಂದರ್ಭದಲ್ಲಿ ಆಚರಣೆಗಳನ್ನು ಗಮನಿಸುವಾಗ ಮಗುವಿನ ಪಾಲನೆ ಮತ್ತು ಪೋಷಣೆ ಕುರಿತಂತೆ ಕೆಲವು ವಿಶೇಷ ಆಚರಣೆಗಳು ಕಂಡು ಬರುತ್ತವೆ. ಇವುಗಳನ್ನು ಕುರಿತಾದ ವಿಶ್ಲೇಷಣೆಯನ್ನು ಇಲ್ಲಿ ಪ್ರಸ್ತಾಪಿಸಲಾಗಿದೆ.

**೫.೩.ಆ. ಬಾಲಗ್ರಹ ದೋಷ ಅಥವಾ ಬಲಿಗೊಂಬಿ ಮಾಡಿಸುವುದು**

ಈ ದೋಷ ಎನ್ನುವುದು ಮಕ್ಕಳಿಗೆ ವರ್ಷ ತುಂಬುವುದಕ್ಕೆ ಮೊದಲು ಬರುವ ಒಂದು ರೀತಿಯ ಭೂತಚೇಷ್ಟೆ. ಮಗುವಿನ ಮೇಲೆ ಭೂತದ ಕಣ್ಣು ಬಿದ್ದರೆ ಈ ದೋಷ ಬರುತ್ತದೆ ಎಂದು ಇವರ ನಂಬಿಕೆ. ಈ ದೋಷ ಬಂದರೆ ಮಗುವಿನಲ್ಲಿ ಕೆಲವು ಲಕ್ಷಣಗಳು ಕಂಡು ಬರುತ್ತವೆ. ಮಗುವಿನ ನಿದ್ರೆಯಲ್ಲಿ ಬೆಚ್ಚಿ ಬೀಳುವುದು, ಮೈ ಸೆಟೆಸುವುದು, ಮುಷ್ಟಿಯನ್ನು ಬಿಗಿಯಾಗಿ ಹಿಡಿದು ನಡುಗುತ್ತಾ ಚೀರುವುದು. ಮಗುವಿನ ಮುಖ ಸಪ್ಪಗಾಗಿರುತ್ತದೆ, ಕಿರಿ ಕಿರಿ ಮಾಡುತ್ತದೆ. ಇಂತಹ ಲಕ್ಷಣ ಇರುವ ಮಗುವಿಗೆ ಬಾಲಗ್ರಹ ದೋಷ ತಗುಲಿದೆ ಎಂದು ಅನುಭವಸ್ತ ಹಿರಿಯ ಮಹಿಳೆಯರು ಗುರುತಿಸುತ್ತಾರೆ. ನಿರ್ದಿಷ್ಟವಾದ, ಅಮವಾಸ್ಯೆ ಮತ್ತು ಹುಣ್ಣಿಮೆಯ ದಿನದಂದು ಈ ದೋಷ ನಿವಾರಣೆಯನ್ನು ಮಾಡಿಸುವರು. ಅಂದು ಸಂಜೆಯ ಹೊತ್ತಿನಲ್ಲಿ ಊರ ಹೊರಗಿನ ಕೆರೆ ಹಳ್ಳ ಸ್ಮಶಾನದ ಮಣ್ಣನ್ನು ತರುತ್ತಾರೆ. ಆ ಮಣ್ಣಿನಿಂದ ಪೂತನಿ ಗೊಂಬೆಯನ್ನು ಮಾಡಿ ಮುಕ್ಕಾದ ಮಣ್ಣಿನ ಮುಚ್ಚಳದಲ್ಲಿಡುವರು. ಪೂತನಿಗೆ ಹಳದಿ ಬಣ್ಣದ ಬಟ್ಟೆ ಬಡಿಸಿ ಕೈಯಲ್ಲಿ

ಕೆಂಪು ಬಣ್ಣದ ಹಚ್ಚಿ ಇಡುವರು. ಐದು ಬಗೆಯ ಧಾನ್ಯಗಳನ್ನು ಪೂತನಿಯ ಮುಂದೆ ಹಾಕಿ ಅರಿಶಿಣ ಕುಂಕುಮದಿಂದ ರಂಗ ಹಾಕುವರು. ಒಂದು ಒಳಸೆರೆ ಮತ್ತು ಒಂದು ಹೊರಸೆರೆ ಅಕ್ಕಿ ತೆಗೆದುಕೊಂಡು ಅನ್ನಮಾಡಿ ಮೂರು ಅನ್ನದ ಮುಟಗಿಯನ್ನು ಎಡೆ ಮಾಡುವರು. ಅನ್ನದ ಹಣತೆಯಲ್ಲಿ ದೀಪ ಹಚ್ಚಿಟ್ಟು ಪೂತನಿಯ ಮೇಲೆ ಅರಿಶಿಣ ಕುಂಕುಮ ಚಲ್ಲಿ, ಐದು ಬಗೆಯ ಹೂವು ಮುಡಿಸುವರು. ಮುಂದೆ ಎರಡು ಒಣ ಮೆಣಸಿನ ಕಾಯಿ ನಿಂಬೆ ಹಣ್ಣು ಇರಿಸಿ ಗಂಧದ ಕಡ್ಡಿ ಹಚ್ಚಿಡುವರು. ಈ ಅಲಂಕೃತ ಪೂತನಿಯ ಮುಚ್ಚಳವನ್ನು ವಯೋವೃದ್ಧರೊಬ್ಬರು ತೆಗೆದುಕೊಂಡು ಬಾಲ ಗ್ರಹ ದೋಷ ತಗುಲಿದ ಮಗುವಿನ ಮುಖದ ಮೇಲೆ ಮೂರು ಸಾರಿ ಇಳಿ ತೆಗೆಯುತ್ತಾರೆ. ಎಡಗೈಯಲ್ಲಿ ಪೂತನಿಯನ್ನು, ಬಲಗೈಯಲ್ಲಿ ಕುಡುಗೋಲು ಹಿಡಿದು ಗ್ರಹದ ದಿಕ್ಕನ್ನು ಹಿಡಿದು ಊರಾಚೆ ಬರುವರು. ಕಳ್ಳಿ, ಹತ್ತಿ, ಆಲ, ಇಲ್ಲವೇ ಹೊನ್ನಾಂಬರಿಯ ಗಿಡದ ಕೆಳಗೆ ಗ್ರಹದ ದಿಕ್ಕಿಗೆ ಮುಖಮಾಡಿ ಪೂತನಿಯನ್ನು ಇಡುವರು. ಪೂತನಿಯ ಮುಂದೆ ಮೂರು ಸಾರಿ ಕುಡುಗೋಲಿನಿಂದ ನೆಲವನ್ನು ಕಡಿದು, ಮೂರು ಸಾರಿ ಉಗಿದು ತಿರುಗಿ ನೋಡದೇ ಮನೆಗೆ ಹಿಂದಿರುಗುವರು. ಸ್ವಲ್ಪ ಹೊತ್ತು ಹೊರಗಡೆ ಕುಳಿತಿದ್ದು ನಂತರ ಕೈಕಾಲು ಮುಖ ತೊಳೆದು ಒಳಗೆ ನಡೆಯುತ್ತಾರೆ. ಇದೇ ಕ್ರಮವನ್ನು ಬಾಣಂತಿಗೆ ಗ್ರಹ ತಗುಲಿದಾಗ ಸಹ ಮಾಡುವರು. ಈ ಆಚರಣೆಯು ಬಳ್ಳಾರಿ, ಜಿಲ್ಲೆಯಲ್ಲಲ್ಲದೆ ದಾವಣಗೆರೆ, ಕೊಪ್ಪಳ ಜಿಲ್ಲೆಗಳಲ್ಲಿಯೂ ಇರುವುದಾಗಿ ತಿಳಿದು ಬಂದಿರುತ್ತದೆ.

**೫.೩.೧. ಮುಡ್ಡಾಸು ಮುರಿಸುವುದು**

ಮಕ್ಕಳಿಗೆ ಬರುವ ಇದೊಂದು ಬಗೆಯ ದೋಷ. ಇಂತಹ ದೋಷಗಳು ಅಸೌಖ್ಯವಾದ ಸನ್ನಿವೇಶಗಳಿಂದ ಮಕ್ಕಳಿಗೆ ಬರುತ್ತದೆ ಎಂದು ಇವರ ನಂಬಿಕೆ. ಮುಡ್ಡಾಸುಗಳಲ್ಲಿ ಎರಡು ಬಗೆ ಕುಣಿ ಮುಡ್ಡಾಸು ಮತ್ತು ಮುಟ್ಟು ಮುಡ್ಡಾಸು.

**ಕುಣಿ ಮುಡ್ಡಾಸು:** ಈ ಮುಡ್ಡಾಸು, ಶವಸಂಸ್ಕಾರದ ತಪ್ಪು ಆಚರಣೆಯಿಂದ ತಗುಲುತ್ತದೆ. ಅಂದರೆ, ಶವಸಂಸ್ಕಾರಕ್ಕೆಂದು ಸ್ಮಶಾನಕ್ಕೆ ಹೋಗಿ ಬಂದವರು, ತಕ್ಷಣ ಮಗುವನ್ನು ಅಥವಾ ಗರ್ಭಿಣಿ ಸ್ತ್ರೀಯನ್ನು ಮುಟ್ಟುವುದರಿಂದ ಮಗುವಿಗೆ ಈ ದೋಷ ತಗುಲುತ್ತದೆ. ಇಂತಹ ಮುಡ್ಡಾಸು ತಗುಲಿದ ಮಗುವಿನ ಲಕ್ಷಣಗಳು ಹೀಗಿರುತ್ತವೆ. ಮಗು ದಿನೇದಿನೇ, ನಿಶ್ಶಕ್ತಿಯಿಂದ ಕ್ಷೀಣಿಸುವುದು. ಮೈಚರ್ಮ ಸುಕ್ಕುಗಟ್ಟಿ ಕಳಾಹೀನವಾಗುತ್ತದೆ. ಮಗು ಸ್ವತಃ ನಿಂತುಕೊಳ್ಳಲು ಅಥವಾ ಕುಳಿತುಕೊಳ್ಳಲು ಅಸಮರ್ಥವಾಗಿ ಕೊನೆಗೆ ಬದುಕಿ ಉಳಿಯುವುದೇ ಅನುಮಾನವಾಗುತ್ತದೆ. ಇಂತಹ ಕುಣಿ ಮುಡ್ಡಾಸನ್ನು ವಿಚಿತ್ರವಾದ ಆಚರಣೆಯ ಮುರಿಸುವ ಪದ್ಧತಿಯು ಗಾಣಿಗರಲ್ಲಿ ಕಂಡುಬರುತ್ತದೆ.

ಈ ಮುಡ್ಡಾಸು ಮುರಿಸಲು ಅಮವಾಸ್ಯೆ ಮತ್ತು ಬಾನುವಾರ ಸೂಕ್ತವಾದ ದಿನಗಳು. ಆ ದಿನ ಮನೆಯ ಹಿತ್ತಲಲ್ಲಿ ಒಂದು ಚಿಕ್ಕ ಗುಂಡಿಯನ್ನು ತೆಗೆಯುತ್ತಾರೆ. ಅದರಲ್ಲಿ ತೆಂಗಿನಕಾಯಿಯ ಸಿಪ್ಪೆ ಒಂದನ್ನು ಇಡುವರು. ಮಗುವಿಗೆ ತಿರುಗಾಮುರುಗಾ ಬಟ್ಟೆಯನ್ನು ತೊಡಿಸಿ ಕಾಯಿಯ ಮೇಲೆ ಕೂಡಿಸುವರು. ಇಂಬರಿಕೆಯಿಂದ ಮಗುವಿನ ತಲೆಯ ಮೇಲೆ ನೀರು ಸುರಿಯುವರು. ಈ ನೀರು ಗುಂಡಿಯಲ್ಲಿಯೇ

ನಿಲ್ಲಬೇಕು. ನಂತರ ಮಗುವಿನ ಬಟ್ಟೆಯನ್ನು ಹರಿದು ಕಾಯಿಯ ಮೇಲೆ ಹಾಕಿ, ಮಗುವನ್ನು ಎತ್ತಿಕೊಂಡು ಹೋಗಿ ದೇವರ ಗುಡಿಯಲ್ಲಿ ದೀಪ ಹಚ್ಚಿ ಬರುತ್ತಾರೆ. ಅಷ್ಟರಲ್ಲಿ ಈ ಗುಂಡಿಗೆ ಪೂಜೆ ಸಲ್ಲಿಸಿ ಮುಚ್ಚುವರು. ಗುಂಡಿಯ ಮೇಲೆ ಒಂದು ಚಿಕ್ಕ ಮಣ್ಣಿನ ಗುಡ್ಡೆಯನ್ನು ಮಾಡಿ, ಅದರ ಸುತ್ತ ಮುಳ್ಳಿನ ಬೇಲಿ ನಿರ್ಮಿಸುವರು. ಇಲ್ಲಿಗೆ ಕುಣಿಮುಡ್ತಾಸು ಮುರಿಸುವ ಕಾರ್ಯ ಮುಕ್ತಾಯವಾಗುತ್ತದೆ.

ಮುಡ್ತಾಸು ಮುರಿಸಿದವರಿಗೆ ಯೋಗ್ಯತೆಗೆ ತಕ್ಕಂತೆ ಚಾರ್ಜ್ ಕೊಡುತ್ತಾರೆ. ಗಾಣಿಗರು ಇಲ್ಲವೇ ಅನ್ಯ ಸಮುದಾಯದ ಅನುಭವಸ್ಥರಿಂದ ಇಂತಹ ಮುಡ್ತಾಸು ಮುರಿಸುವರು. ಇಲ್ಲಿ ಒಂದೊಂದು ಸಲ ಮುಡ್ತಾಸು ತಗುಲಿ ಸಾಯುವ ಸ್ಥಿತಿಯಲ್ಲಿದ್ದ ಮಗು ಸತ್ತಿರುವುದೆಂಬ ಭಾವನೆಯಿಂದ ಶವಸಂಸ್ಕಾರ ಮಾಡಿದ ರೀತಿಯಲ್ಲೇ ಕುಣಿಮುಡ್ತಾಸು ಮುರಿಸುವ ಪದ್ಧತಿಯು ಇದಾಗಿದೆ.

**ಮುಟ್ಟು ಮುಡ್ತಾಸು**

ಈ ಮುಡ್ತಾಸು ಮುಟ್ಟಿನ ದೋಷದಿಂದ ತಗುಲುತ್ತದೆ. ಬೇರೆ ಹೆಂಗಸರು ತಿಂಗಳ ಮುಟ್ಟಾದಾಗ ಮಗುವನ್ನು ಮುಟ್ಟಿಸುವುದರಿಂದ ಈ ದೋಷ ತಗುಲುತ್ತದೆ. ಮತ್ತು ಋತುಮತಿಯಾದವಳು ಮಗುವನ್ನು ಮುಟ್ಟಿದರೆ ಇಲ್ಲವೇ ಅಂತಹವರ ಮನೆಗೆ ಮಗುವನ್ನು ಕರೆದುಕೊಂಡು ಹೋದರೆ ಮಗುವಿಗೆ ಈ ದೋಷ ತಗುಲುವುದು. ಮಗುವಿಗೆ ಮುಡ್ತಾಸು ಆಗಿರುವುದನ್ನು ಸಮುದಾಯದ ಅನುಭವಸ್ಥ ಹಿರಿಯ ಹೆಂಗಸರು ಮಗುವಿನ ಕೆಲವು ಲಕ್ಷಣಗಳನ್ನು ನೋಡಿ ಗುರುತಿಸುತ್ತಾರೆ. ಈ ದೋಷ ತಗುಲಿದಾಗ ಮಗು ಪದೇ ಪದೇ ನೀರಬೇಧಿ ಮಾಡಿಕೊಳ್ಳುತ್ತದೆ. ಬೇಧಿಯು ಒಡೆದಂತಿದ್ದು ದುರ್ವಾಸನೆಯಿಂದ ಕೂಡಿರುತ್ತದೆ. ಅಳ್ಳಿಪರಿ (ಪಕ್ಕೆಯ ಇಕ್ಕೆಡೆಗಳು) ಬಡಿತ ಜೋರಾಗಿದ್ದು ಎತ್ತಿ (ಅಳ್ಳೆತ್ತಿ) ಬಿಗಿದುಕೊಂಡು ಮಗುವು ನಿಶ್ಯಕ್ತಿಯಿಂದ ಕಳಾಹೀನವಾಗಿರುತ್ತದೆ. ಇಂತಹ ಲಕ್ಷಣ ಇರುವ ಮಗುವಿಗೆ ಮುಡ್ತಾಸು ಆಗಿದೆ ಎಂದು ಇವರು ಗುರುತಿಸುವರು.

ಮುಟ್ಟು ಮುಡ್ತಾಸನ್ನು ಎರಡು ವಿಧದಲ್ಲಿ ನಿವಾರಿಸುತ್ತಾರೆ (ಮುರಿಸುತ್ತಾರೆ). ಈಗಾಗಲೇ ಹೇಳಿರುವಂತೆ ನಿರ್ದಿಷ್ಟ ದಿನಗಳಂದು ಇದರ ನಿವಾರಣೆ ಮಾಡಿಸುವರು. ಆ ದಿವಸ ಮುಸ್ಸಂಜೆಯ ಮಗುವನ್ನು ಹೊಸ್ತಿಲ ಮೇಲೆ ಕೂಡಿಸುವರು. ಹಿರಿಯರು ಹಾಗಲ ಅಥವಾ ವಿಷಕವಡಿಯ ಕಾಯಿಯ ಸೊಪ್ಪನ್ನು ಮಾತನಾಡದೇ ತಂದು ಅದರ ರಸವನ್ನು ಮಗುವಿನ ನೆತ್ತಿ, ಕಂಕುಳ ಮತ್ತು ಅಂಗಾಲಿಗೆ ಹಚ್ಚುತ್ತಾರ. ಈ ರೀತಿಯಾಗಿ ಐದು ವಾರ ತಪ್ಪದೆ ಹಚ್ಚುವರು. ಇನ್ನೊಂದು ವಿಧಾನ ಎಂದರೆ, ಮುಡ್ತಾಸು ಮುರಿಸುವವರ ಹತ್ತಿರ ನಿರ್ದಿಷ್ಟ ದಿನದಂದು ಮಗುವನ್ನು ಕರೆದುಕೊಂಡು ಹೋಗಿ, ಅವರಿಂದ ಮಗುವಿಗೆ ಔಷಧಿ ಅಥವಾ ದಾರ ಹಾಕಿಸುವರು (ಎಳೆ ಹಾಕಿಸುವುದು). ಮುಡ್ತಾಸು ಮುರಿಸಿ ಬರುವಾಗ ಮಗುವಿನ ಬಟ್ಟೆಯನ್ನು ಕಳಚದೆ ಹರಿದು ಹಸಿರು ಮುಳ್ಳಿನ ಗಿಡದ ಮೇಲೆ ಹಾಕಿ ಬರಬೇಕು.

**೫.೩.೩. ಬೆನ್ನುಸುಳಿ ಸುಡುವುದು**

ಸುಳಿ ಎಂದರೆ ಮಕ್ಕಳ ಬೆನ್ನಿನ ಮೇಲೆ ಕಂಡು ಬರುವ ರೋಮಗಳ ಸುಳಿ ಅಥವಾ ಚಕ್ರ. ಈ ರೀತಿಯ

ಸುಳಿಗಳು ಮಕ್ಕಳ ಬೆನ್ನಿನ ಮೇಲೆ ಇರುವುದು ಅವಲಕ್ಷಣ, ಇಂತಹ ಮಗುವಿನ ನಂತರ ಜನಿಸಿದ ಮಕ್ಕಳು ಬದುಕಿ ಉಳಿಯುವುದಿಲ್ಲ ಎಂಬುದು ಇವರ ನಂಬಿಕೆ. ಮಕ್ಕಳಿಗೆ ಬೆನ್ನಿನ ಮೇಲೆ ಸುಳಿ ಇರುವುದನ್ನು ಸಮುದಾಯದ ಹಿರಿಯರು ಗಮನಿಸಿ ಪಕ್ಕ (ಖಾತ್ರಿ) ಮಾಡಿಕೊಳ್ಳುವರು. ಒಂದು ನಿರ್ದಿಷ್ಟವಾದ ದಿನ ಬೆನ್ನು ಸುಳಿ ಸುಡುವುದುಂಟು. ಆ ದಿನ ಸಾಯಂಕಾಲ ಮಗುವಿನ ಕೈಕಾಲು ಮುಖ ತೊಳೆದು ಸೂರ್ಯನ ಕಡೆ ಮುಖಮಾಡಿ ಕೂಡಿಸುತ್ತಾರೆ. ಸೋದರ ಮಾವ ಮಗುವಿನ ಪೂಜೆ ಸಲ್ಲಿಸಿ ಗಂಧದ ಕಡ್ಡಿ ಅಥವಾ ಬೇವಿನ ಕಡ್ಡಿಗೆ ಬೆಂಕಿ ಹಚ್ಚಿಕೊಂಡು ಮೂರು ಸಾರಿ ಸೂಕ್ಷ್ಮವಾಗಿ ಬೆನ್ನು ಸುಳಿಯನ್ನು ಸುಡುತ್ತಾನೆ. ಮಗುವಿನಿಂದ ಮಾವನಿಗೆ ನಮಸ್ಕಾರ ಮಾಡಿಸಿ ದಕ್ಷಿಣೆ ಕೊಡಿಸುವರು. ಮಾವ ವೀಳ್ಯ ಮತ್ತು ದಕ್ಷಿಣೆಯನ್ನು ತೆಗೆದುಕೊಂಡು ಮುಂದೆ ಹೆಣ್ಣು ಮಗು ಹುಟ್ಟಿದರೆ ನನಗೇ ಕೊಡಬೇಕೆಂದು ತಮಾಷೆ ಮಾಡುವನು. ಈ ರೀತಿ ಬೆನ್ನಿನ ಸುಳಿ ಇರುವುದನ್ನು ಎರಿಗೆಯ ತಕ್ಷಣ ಸೂಲಗಿತ್ತಿಯು ಗಮನಿಸಿದರೆ, ಆಗಲೇ ಚುಟುಕಿ ಹಾಕುವಾಗ ಈ ನಿಯಮ ಮಾಡುವಳು. ಇಂತಹ ಆಚರಣೆಗಳ ಜೊತೆಗೆ ಮಗುವು ಹುಟ್ಟುವಾಗ ಹಲ್ಲು ಬಂದಿದ್ದರೆ ಮತ್ತು ಬಾಯಿ ಮೇಲಾಗಿ ಹುಟ್ಟಿದರೆ, ಮಗುವು ಹುಟ್ಟುವಾಗ ಹೊಕ್ಕಳು ಬಳ್ಳಿಯನ್ನು ಕೊರಳಿಗೆ ಸುತ್ತಿಕೊಂಡು ಹುಟ್ಟಿದರೆ, ಅಲ್ಲದೆ ಮಗುವಿಗೆ ಹಲ್ಲು ಬರುವಾಗ ಮೊದಲು ಮೇಲಿನ ಹಲ್ಲು ಬಂದರೆ, ಅಶುಭ ಸೂಚಕವೆಂದು ಗಾಣಿಗರು ನಂಬುತ್ತಾರೆ. ಇವುಗಳನ್ನು ನಿವಾರಣೆ (ಮುರ್ತಾಯ) ಮಾಡಲು ಅನೇಕ ಕ್ರಮಗಳಿವೆ.

### ೫.೪. ಮದುವೆ

ಲೈಂಗಿಕತೆಯ ಪಶು ಪಕ್ಷಿ ಮತ್ತು ಮಾನವನಿಗೆ ಸ್ವಭಾವ ಜನ್ಯವಾದುದು. ಆರಂಭಿಕ ದಿನಗಳಲ್ಲಿ ಆದಿಮಾನವನ ಲೈಂಗಿಕ ವಿಚಾರದಲ್ಲಿ ಸ್ವಚ್ಛಂದನಾಗಿದ್ದ. ಆತ ತನ್ನ ಅಲೆಮಾರಿ ಸ್ಥಿತಿಯನ್ನು ನೀಗಿಸಿಕೊಂಡು ಬುಡಕಟ್ಟು ಪದ್ಧತಿಗೆ ಒಳಗಾದಾಗ ಅನೇಕ ಕಟ್ಟುಪಾಡುಗಳಿಗೆ ಬದ್ಧವಾಗಬೇಕಾಯಿತು. ಹೀಗೆ ಪರಿವರ್ತನೆಗೊಂಡ ಸಂದರ್ಭದಲ್ಲಿ ಮದುವೆ ಮೂಲಾವಸ್ಥೆಯಲ್ಲಿ ಕಾಣಿಸಿಕೊಂಡಿರಬೇಕು. ಮಾನವನ ಇಂದ್ರಿಯ ಸಹಜ ಬಯಕೆಗಳನ್ನು ಸಕ್ರಮಗೊಳಿಸಿ ಅದಕ್ಕೆ ನೈತಿಕ ಚೌಕಟ್ಟು ಒದಗಿಸುವಲ್ಲಿ ಮದುವೆಯು ಬಹು ಮುಖ್ಯ ಭೂಮಿಕೆಯನ್ನು ನಿರ್ವಹಿಸಿತ್ತು. ತರುವಾಯದಲ್ಲಿ ಲೈಂಗಿಕತೆ ಗೌಣವಾಗಿ ಪುತ್ರ ಸಂತಾನ ಪಡೆಯುವುದೇ ಮದುವೆಯ ಮುಖ್ಯ ಉದ್ದೇಶವಾಯಿತು.

ಸಮಾಜದ ಮುಂದುವರಿಕೆಗೆ ವಿವಾಹ ಅನಿವಾರ್ಯ. ಪ್ರತಿಯೊಂದು ಸಮುದಾಯದಲ್ಲೂ ಅದಕ್ಕೆ ಮಹತ್ವವಿದೆ. ಅವು ಮದುವೆಯನ್ನು ತಮ್ಮದೇ ಆದ ವಿಶಿಷ್ಟ ಸಂಪ್ರದಾಯದಲ್ಲಿ ಆಚರಿಸುತ್ತವೆ. ಇದಕ್ಕೆ ಲಿಂಗಾಯಿತ ಗಾಣಿಗ ಸಮುದಾಯ ಹೊರತಲ್ಲ. ಹಿಂದೆ ಈ ಸಮುದಾಯದಲ್ಲಿ ಬಾಲ್ಯ ವಿವಾಹ ಪ್ರಚಲಿತವಾಗಿತ್ತು. ಬಹಳಷ್ಟು ಮದುವೆಗಳು ಹೆಣ್ಣು ಋತುಮತಿಯಾಗುವ ಮುನ್ನವೇ ಜರುಗುತ್ತಿದ್ದವು. ಗಂಡು ಹದಿನೈದು ಹದಿನಾರು ವರ್ಷಗಳಿಗೆಲ್ಲ ಗೃಹಸ್ಥನಾಗುತ್ತಿದ್ದ. ಕಾಲ ಬದಲಾದಂತೆ ಈ ಸಮುದಾಯದ ಹೆಣ್ಣು ಗಂಡುಗಳ ವಿವಾಹದ ವಯೋಮಿತಿಯಲ್ಲಿ ಏರಿಕೆಯಾಗಿದೆ. ಕುಲ, ಗೋತ್ರ ಬಳಿ ಇವುಗಳ ಈ

ಸಮುದಾಯಕ್ಕೆ ಮುಖ್ಯವಾಗಿರುತ್ತವೆ. ದಾಯಾದ್ಯ ವರ್ಗದವರನ್ನು ಹೊರತಾಗಿ ಸ್ವಜಾತಿಯಲ್ಲಿ ಯಾರನ್ನಾದರೂ ವಿವಾಹವಾಗಬಹುದು. ಆದರೆ ಕಣ್ಣು ತಪ್ಪಿ ಹೊರಸಂಬಂಧದ ವಿವಾಹ ನಡೆಯುತ್ತವೆ. ಬಹುಪತ್ನಿತ್ವ ಕೂಡ ರೂಢಿಯಲ್ಲಿದೆ. ಮೊದಲ ಹೆಂಡತಿ ಜೀವಂತವಿಲ್ಲದಿದ್ದರೆ, ಬದುಕಿದ್ದೂ ಸಂತಾನವಿಲ್ಲದಿದ್ದರೆ, ಗಂಡು ಸಂತಾನವಿಲ್ಲದಿದ್ದರೆ, ಗಂಡು ಮರು ಮದುವೆಯಾಗಬಹುದು. ವಿಧವಾ ವಿವಾಹ ಕೂಡಾ ಜಾರಿಯಲ್ಲಿದೆ. ಇಂಥ ವಿವಾಹ ದೇವಾಲಯದಲ್ಲಿ ಬೆರಳೆಣಿಕೆಯಷ್ಟು ಜನರ ಸಮ್ಮುಖದಲ್ಲಿ ನಡೆಯುವುದು. ಈ ಬಗೆಯ ವಿವಾಹಕ್ಕೆ ಸಿರಿ ಉಡಿಕೆ, ತಾಳಿ ಕಟ್ಟಿಕೊಡುವುದು ಎನ್ನುತ್ತಾರೆ. ವಿಧವಾ ವಿವಾಹದ ಕುಟುಂಬದೊಂದಿಗೆ ಸಂಪ್ರದಾಯವಾದಿಗಳು ವೈವಾಹಿಕ ಸಂಬಂಧ ಬೆಳೆಸುವುದಿಲ್ಲ. ಇದರಿಂದ ಇಂಥ ವಿವಾಹಕ್ಕೆ ಈ ಸಮುದಾಯದಲ್ಲಿ ಪುರಸ್ಕಾರವಿರಲಿಲ್ಲವೆಂಬುದು ವ್ಯಕ್ತಪಡುತ್ತದೆ. ಹೆಣ್ಣು ಗಂಡುಗಳು ಪ್ರಾಪ್ತ ವಯಸ್ಕರಾದ ಕೂಡಲೆ ಗಂಡಿನ ಮನೆಯವರು ಕನ್ಯಾನ್ವೇಷಣೆಯಲ್ಲಿ ತೊಡಗುವರು.[೬]

ಹಿಂದೆ ಮದುವೆ ಮಾಡುವಾಗ ಗಂಡು ಹೆಣ್ಣುಗಳ ಮನೆತನವನ್ನು ನೋಡುತ್ತಿದ್ದರು. ಆರು ತಲೆಯನ್ನಾದರೂ ಗಮನಿಸಬೇಕು. ಅದು ಸಾಧ್ಯವಾಗದಿದ್ದಲ್ಲಿ ಹೆಣ್ಣು ಗಂಡುಗಳ ಮೂರು ತಲೆಯನ್ನಾದರೂ ತಿಳಿದುಕೊಳ್ಳಬೇಕಾಗಿತ್ತು. ಈ ಹಿನ್ನೆಲೆಯಲ್ಲಿ ಹುಡುಗನ ಅಥವಾ ಹುಡುಗಿಯ ಕಡೆಯ ಬಂಧುಗಳು ಹೆಣ್ಣು ಗಂಡುಗಳ ವಿವರವನ್ನು ಪರಸ್ಪರ ಮನೆಗೆ ತಿಳಿಸಲು ಅನುಕೂಲವಾಗುವರು. ಆ ಕಾಲದಲ್ಲಿ ಹತ್ತಿರದ ಊರುಗಳಲ್ಲಿಯೇ ವೈವಾಹಿಕ ಸಂಬಂಧವೇರ್ಪಡುತ್ತಿದ್ದುದರಿಂದ ವಿವಾಹಕ್ಕೆ ಸಿದ್ಧವಿರುವ ಗಂಡು ಹೆಣ್ಣುಗಳ ಮಾಹಿತಿ ಪಡೆಯುವುದು ಕಠಿಣವಾಗುತ್ತಿರಲಿಲ್ಲ. ಹೆಣ್ಣಿನವರು ಗಂಡಿನ ವಿವರಗಳನ್ನು ಪಡೆದರೂ ಗಂಡಿನ ಮನೆಯ ಬಾಗಿಲಿಗೆ ಹೆಣ್ಣು ಕೊಡುತ್ತೇವೆಂದು ಹೋಗುವುದು ಗೌರವಕ್ಕೆ ಕುಂದು ಎಂದು ಭಾವಿಸುವರು. ಆದುದರಿಂದ ಗಂಡಿನ ಮನೆಯ ವತಿಯಿಂದ ವರನ ಅಣ್ಣ, ತಂದೆ, ಭಾವ ಅಥವಾ ಹತ್ತಿರದ ಬಂಧುಗಳು ಹೆಣ್ಣು ಕೇಳಲು ಬರುವುದು ವಾಡಿಕೆ. ಕನ್ಯಾರ್ಥಿಗಳಾಗಿ ಬಂದವರಿಗೆ ಹುಡುಗಿಯನ್ನು ನೇರವಾಗಿ ತೋರಿಸುವಂತಿಲ್ಲ. ಹುಡುಗಿಯು ನೀರು ತರುವಾಗಲೇ ಪೂಜೆಗೆ ದೇವರ ಗುಡಿಗೆ ಹೋಗುವಾಗಲೂ, ಊರಿನ ಜಾತ್ರೆಗಳ ಅಥವಾ ನೆಂಟರಿಷ್ಟರ ಮನೆಯ ಮದುವೆಗಳಲ್ಲಿ ಭಾಗವಹಿಸಿದಾಗಲೋ ಆಕಸ್ಮಿಕವಾಗಿ ಹೆಣ್ಣನ್ನು ನೋಡಬಹುದಾಗಿತ್ತು.

ಗಂಡಿನ ಕಡೆಯವರು ಹೆಣ್ಣಿನ ಮನೆಗೆ ಪ್ರಥಮ ಬಾರಿ ಹೋಗುವಾಗ ದಾರಿ ಶಕುನ ನೋಡುವರು. ಗುದ್ದಲಿ, ಖಾಲಿ ಹೆಡಿಗೆ, ಖಾಲಿಕೊಡ, ಕ್ಷೌರಿಕ, ಬೆಕ್ಕು, ವಿಧವೆ, ಕಾಗೆ ಮೊದಲಾದವು ಎದುರಾದರೆ ಅಪಶಕುನವೆಂದು ಭಾವಿಸಿ ಆ ಹೆಣ್ಣಿನೊಡನೆ ಮದುವೆಯ ಮಾತುಕತೆಗಳನ್ನು ರದ್ದುಪಡಿಸುವರು. ಹೆಣ್ಣು ಕೇಳಲು ಹೋದವರಲ್ಲಿ ಹಿರಿಯರಾದವರು ನಿಮ್ಮ ಮನೆಯಲ್ಲಿ ಸಂಬಂಧ ಮಾಡೋಣಾಂತ ಬಂದಿದ್ದೀವಿ ಎಂದು ಹೆಣ್ಣಿನ ಮನೆಯ ಯಜಮಾನನಿಗೆ ಪೀಠಿಕೆ ಹಾಕುವರು. ಹೆಣ್ಣಿನವರು ತಮ್ಮ ಖಚಿತವಾದ ಅಭಿಪ್ರಾಯವನ್ನು ಅರುಹದೆ ಋಣಾನುಸಂಬಂಧ ಋಣ ಸಂಕಲ್ಪ ಎಲ್ಲಿದೆಯೋ ನೋಡೋಣವೆಂದು ತೋರಿಕೆಯ ಮಾತುಗಳನ್ನಾಡಿ ಆ ಹೊತ್ತಿಗೆ ಅನುಗುಣವಾಗಿ ಉಪಹಾರ ನೀಡಿ ಸತ್ಕರಿಸುವರು. ಒಂದು ಹೆಣ್ಣನ್ನು ಪಡೆಯಬೇಕಾದರೆ ಗಂಡಿನವರು ಹಲವು ಬಾರಿ ಹೆಣ್ಣಿನ ಮನೆಯ ಹೊಸ್ತಿಲನ್ನು ತುಳಿಯಬೇಕಾಗಿತ್ತು.

"ಒಂದು ಹೆಣ್ಣು ತರುವುದಕ್ಕೆ ಹನ್ನೆರಡು ಜೊತೆ ಮೆಟ್ಟು ಸವೆಯುತ್ತವೆ" ಎಂಬುದು ಈ ಸಮುದಾಯದ ಹಿರಿಯರ ಅನುಭವದ ಮಾತು.

### ೫.೪.೧. ಹೆಣ್ಣು ಆಯ್ಕೆ ಮಾಡುವುದು

ಅನೇಕ ಲಿಂಗಾಯಿತ ಸಮುದಾಯಗಳಲ್ಲಿ ತಮ್ಮದೇ ಆದ ಪ್ರಾಚೀನ ರೀತಿಯಲ್ಲಿ ಹೆಣ್ಣನ್ನು ಆಯ್ಕೆ ಮಾಡುವ ಪದ್ಧತಿ ಕಂಡು ಬರುತ್ತದೆ. ಕಾಲ ಬದಲಾದಂತೆ ಮದುವೆಗೆ ಹೆಣ್ಣಿನ ಆಯ್ಕೆಯ ಪದ್ಧತಿಯಲ್ಲಿಯೂ ಬದಲಾವಣೆ ಕಂಡು ಬರುತ್ತಿದೆ. ವಿಶೇಷವಾಗಿ ಬಳ್ಳಾರಿಗೆ ಹೊಂದಿಕೊಂಡಂತೆ, ಕೊಪ್ಪಳ, ದಾವಣಗೆರೆ, ರಾಯಚೂರು, ಗುಲ್ಬರ್ಗಾ ಜಿಲ್ಲೆಗಳಲ್ಲಿ ಹೆಣ್ಣು ಆಯ್ಕೆಯ ಪದ್ಧತಿ ಹೀಗಿದೆ

ಮನೆಯ ಹಿರಿಯರು ತಮ್ಮ ಸಮುದಾಯದ ಯಜಮಾನರ ಜೊತೆಗೆ ಹೆಣ್ಣಿರುವ ಮನೆಗೆ ಕನ್ಯಾನೋಡಲು ಹೋಗುವರು. ಕನ್ಯೆ ನೋಡಲು ಹೋದವರು, ಶಾಸ್ತ್ರದ ಪ್ರಕಾರ, ಹಣ್ಣು-ಕಾಯಿ, ಹೂವು ಮುಡಿಸಿ ಉಡಿ ತುಂಬುತ್ತಾರೆ. ಇದರ ಜೊತೆಗೆ ಸ್ವಾಮಿಯ ನೇತೃತ್ವದಲ್ಲಿ ಹೆಣ್ಣನ್ನು ಮಾತನಾಡಿಸುವುದು ಕೈ, ಕಾಲು, ಹಸ್ತರೇಖೆ, ಹಣೆಯ ಸುಳಿ ಇವುಗಳನ್ನು ಪರೀಕ್ಷಿಸುತ್ತಾರೆ.

ಜೊತೆಗೆ ಬಂದ ಹೆಣ್ಣುಮಕ್ಕಳು, ಒಳಗೆ ಹೋಗಿ ಕನ್ಯೆಯು ಚೆನ್ನಾಗಿ ಇದ್ದಾಳೋ ಇಲ್ಲವೆ ಎಂಬುದನ್ನು ಪಕ್ಕ ಮಾಡಿಕೊಳ್ಳುತ್ತಾರೆ. ಕನ್ಯೆ ತಮಗೆ ಮನಸ್ಸಿಗೆ ಬಂದರೆ, ಗಂಡಿನ ಮನೆತನ ನೋಡಲು ಬರುವುದಕ್ಕೆ ಹೇಳುವರು. ಒಂದು ನಿರ್ದಿಷ್ಟ ದಿನದಂದು ಹೆಣ್ಣಿನ ಕಡೆಯವರು ಗಂಡಿನ ಮನೆತನ ನೋಡಲು ಬರುತ್ತಾರೆ. ಇಬ್ಬರು ಒಪ್ಪಿಗೆ ಆದರೆ ಮಾತುಕತೆಗೆ ಮುಂದಾಗುತ್ತಾರೆ. ಇಲ್ಲಿ ಮಧ್ಯಸ್ಥಿಕೆಯನ್ನು ಸಮುದಾಯದ ಹಿರಿಯ ವ್ಯಕ್ತಿ ವಹಿಸುವನು. ಹಿರಿಯರ ಸಮ್ಮುಖದಲ್ಲಿ ಗಂಡು ಮತ್ತು ಹೆಣ್ಣಿನ ಬೀಗರ ನಡುವೆ ವರದಕ್ಷಿಣೆ ಕುರಿತಂತೆ ಮಾತುಕತೆ ಮಾಡುವರು. ಮಾತುಕತೆಯು ಮುರಿದು ಬಿದ್ದರೆ, ಹೆಣ್ಣಿನ ಕಡೆಯವರು ಊಟಮಾಡದೇ ಹಿಂತಿರುಗಿ ಹೋಗುವರು. ಮಾತುಕತೆ ಒಪ್ಪಿಗೆ ಆದರೆ, ಗಂಡಿನ ಮನೆಯಲ್ಲಿ ಹೋಳಿಗೆ ಊಟವಾಗುತ್ತದೆ. ಇಲ್ಲಿಗೆ ಬೀಗತನ ಕುದುರಿದಂತೆ, ನಿಶ್ಚಿತಾರ್ಥದ ದಿನವನ್ನು ಗೊತ್ತು ಮಾಡುವರು.

### ೫.೪.೨. ನಿಶ್ಚಿತಾರ್ಥ

ಗಾಣಿಗರಲ್ಲಿ ಕನ್ಯೆನಿಶ್ಚಿತಾರ್ಥವು ಮದುವೆಯ ಪ್ರಾರಂಭದ ಒಂದು ಪ್ರಮುಖವಾದ ಆಚರಣೆ. ಕನ್ಯಾನಿಶ್ಚಿತಾರ್ಥವು ಇವರಲ್ಲಿ ಹೆಣ್ಣಿನ ಮನೆಯ ಮುಂದೆ ನಡೆಯುತ್ತದೆ. ಇದಕ್ಕೆ ಊರಿನ ಸ್ವಾಮಿಯವರ ಹತ್ತಿರ ಹೋಗಿ ಒಳ್ಳೆಯ ದಿವಸ, ಸಮಯವನ್ನು ಗೊತ್ತು ಪಡಿಸುವರು. ನಿಶ್ಚಿತಾರ್ಥವು ಆ ಊರಿನ ಗಾಣಿಗ ಸಮುದಾಯದ ಯಜಮಾನರ ಸಮ್ಮುಖದಲ್ಲಿ ನಡೆಯುತ್ತದೆ. ಕುಲ ಬಾಂಧವರೆಲ್ಲರೂ ಹೆಣ್ಣಿನ ಮನೆಯ ಮುಂದೆ ಕುಳಿತುಕೊಳ್ಳುತ್ತಾರೆ. ಮಧ್ಯೆದಲ್ಲಿ ವೀಳ್ಯಶಾಸ್ತ್ರದ ಕಾರ್ಯಕ್ರಮ ಈ ಸಮುದಾಯದ ಗಂಡಿನ ಬೆಡಗು ಮತ್ತು ಹೆಣ್ಣಿನ ಬೆಡಗಿನ ಹಿರಿಯರ ಸಮ್ಮುಖದಲ್ಲಿ ನಡೆಸುವರು. ಕರಿಯ ಕಂಬಳಿಯ ಗದ್ದುಗೆ ಹಾಕುತ್ತಾರೆ. ಅದರ ಮೇಲೆ ಗಂಡು ಮತ್ತು ಹೆಣ್ಣಿನ ಕಡೆಯ ಎಲ್ಲ ಬಂಧುಬಳಗದವರು ಎದುರು ಬದರಾಗಿ ಕುಂತುಕೊಳ್ಳುವರು. ಹೆಣ್ಣು ಮತ್ತು ಗಂಡಿನ ಕಡೆಯವರು ಕಳಸ ಉಡಿ ಸಾಮಗ್ರಿ ಮತ್ತು ಪೂಜಾ ಸಾಮಗ್ರಿಗಳ

ಜೊತೆಗೆ, ಪ್ರತ್ಯೇಕವಾಗಿ ಬಂದು ಕಂಬಳಿಯ ಮೇಲೆ ಕುಳಿತುಕೊಳ್ಳುತ್ತಾರೆ. ಗಂಡಿನ ಕಡೆಯವರು ಹೆಣ್ಣಿಗೆ ಹಾಕುವ ಆಭರಣಗಳು, ಸೀರೆ ಮತ್ತು ವೀಳ್ಯೆವನ್ನು ಜೊತೆಯಲ್ಲಿ ತಂದಿರುವರು. ಸ್ವಾಮಿಯ ಸಮ್ಮತಿಯಂತೆ ಸಮುದಾಯದ ಹೆಣ್ಣಿನ ಕಡೆಯ ಯಜಮಾನ ಮತ್ತು ಗಂಡಿನ ಕಡೆಯ ಯಜಮಾನರನ್ನು ಎದುರು ಬದರಾಗಿ ಎದ್ದು ನಿಂತು ಒಬ್ಬರಿಗೊಬ್ಬರು ಬಾಯಿಯಲ್ಲಿ ಸಕ್ಕರಿಯನ್ನು ಹಾಕುತ್ತಾರೆ. ದೈವದ ಒಪ್ಪಿಗೆ ಪಡೆದು ದೈವಕ್ಕೆ ಸಲ್ಲಬೇಕಾದ ದೈವದ ಕಾಣಿಕೆಯನ್ನು ಪಡೆದು ನಂತರ ಸ್ವಾಮಿಯ ಪೂಜೆಯೊಂದಿಗೆ ವೀಳ್ಯ ಹೊಡೆಯಲು ಹೇಳುವನು. ಪರಸ್ಪರ ಬೀಗರು ದೈವದ ಸಮ್ಮುಖದಲ್ಲಿ ವೀಳ್ಯ ಬದಲಿಸಿಕೊಂಡು ಕೆಲವರ ಮನೆಯಲ್ಲಿ ಪದ್ಧತಿ ಇಲ್ಲ ಕೆಲವರ ಮನೆಯಲ್ಲಿ ಪದ್ಧತಿ ಇದ್ದರೆ ಗಂಡಿನ ಜೊತೆಯಲ್ಲಿ ಕನ್ಯೆಯನ್ನು ಕೂಡಿಸಿ ಆರತಿ ಮಾಡುತ್ತಾರೆ. ಈ ನಡುವೆ ಒಬ್ಬ ವ್ಯಕ್ತಿ ಬಂದು, ಕುಲಬಾಂಧವರಿಗೆಲ್ಲ ವಿಭೂತಿ ಕುಂಕುಮ ಹಚ್ಚಿ ಕಂಕಣ ಕಟ್ಟುತ್ತಾನೆ. ಈ ಕಾರ್ಯ ಜಂಗಮನ ಪೂಜೆಯ ಪ್ರಕಾರ ನಡೆಯುತ್ತದೆ. ಸಾಧ್ಯವಾದರೆ ಎರಡು ಕಡೆಯವರು ಕೂಡಿಕೊಂಡು ಅದೇ ದಿನ ಮದುವೆಯ ದಿನವನ್ನು ಗೊತ್ತುಪಡಿಸುವರು.

### ೫.೪.೩. ಲಗ್ನ ಕಟ್ಟುವ ಶಾಸ್ತ್ರ

ಲಿಂಗಾಯತ ಗಾಣಿಗ ಸಮುದಾಯದಲ್ಲಿ ಲಗ್ನ ಕಟ್ಟುವ ಶಾಸ್ತ್ರ ಎಂದು ಪ್ರತ್ಯೇಕವಾದ ಒಂದು ಆಚರಣೆ ಮಾಡುವ ಪದ್ಧತಿ ಇದೆ. ಜಂಗಮರಿಂದ ಶಾಸ್ತ್ರ ಕೇಳಿಸಿ ಧಾರಾಮುಹೂರ್ತದ ಮುಂಚಿನ ಮೂರನೆಯ ದಿನದಂದು ಲಗ್ನ ಕಟ್ಟಿಸುತ್ತಾರೆ. ಮದುವೆಯ ಯಾರ ಮನೆಯಲ್ಲಿ ನಡೆಯುವುದೋ ಆ ಮನೆಯಲ್ಲಿ ಲಗ್ನ ಕಟ್ಟಿಸುವರು. ಗಾಣಿಗರಲ್ಲಿ ಹೆಚ್ಚಾಗಿ ಮದುವೆಯು ಗಂಡಿನ ಮನೆಯ ಮುಂದೆ ನಡೆಯುತ್ತದೆ. ಹೆಣ್ಣಿನ ಕಡೆಯವರು ಅಕ್ಷತೆಯ ದಿನದ ಮುಂಚೆಯೇ ಬಂದು ಒಂದು ಪ್ರತ್ಯೇಕ ಮನೆ, ಅಥವ ಸರ್ಕಾರಿ ಶಾಲೆಯಲ್ಲಿ ತಂಗಿರುತ್ತಾರೆ. ಲಗ್ನ ಕಟ್ಟಿಸುವ ದಿನ ಮನೆಯ ಪಡಸಾಲೆಯಲ್ಲಿ ದಕ್ಷಿಣಕ್ಕೆ ಅಥವಾ ಪೂರ್ವಕ್ಕೆ ಮುಖ ಮಾಡಿ ಕಂಬಳಿಯ ಗದ್ದುಗೆಯನ್ನು ಕೂಡುವಂತೆ ಮಾಡುವರು. ಸುತ್ತಲೂ ದೈವದವರು ಸಮುದಾಯದ ಹಿರಿಯರು, ಕಿರಿಯರು, ಮಹಿಳೆಯರು, ಕೂಡುವರು. ಗಂಡು ಮತ್ತು ಹೆಣ್ಣಿನ ಕಡೆಯ ಮುತ್ತೈದೆಯರು ಪ್ರತ್ಯೇಕವಾಗಿ ಕಳಸ, ಉಲ್ಪಿ ಮತ್ತು ಪೂಜಾ ಸಾಮಗ್ರಿಗಳೊಂದಿಗೆ ಬರುವರು. ಜಂಗಮನು ಕಂಬಳಿಯ ಮೇಲೆ ಪೂಜಾ ಸಾಮಗ್ರಿ ಮತ್ತು ಉಡಿ ಅಕ್ಕಿ ಒಂದು ಬಿಡದೆ ಸಾಮಾನುಗಳನ್ನು ಜೋಡಿಸಿ ಇರಿಸುವರು. ಪುರುಷರಿಗೆ ವಿಭೂತಿ ಮತ್ತು ಮಹಿಳೆಯರಿಗೆ ಅರಿಶಿಣ ಕುಂಕುಮ ಹಚ್ಚುತ್ತಾರೆ. ಅರಿಶಿಣ ಬಲ, ಎಣ್ಣೆ ಬಲ ಮತ್ತು ಸುರಿಗೆಗೆ ಕೂಡುವವರ ಹೆಸರಿನ ಬಲ ಹಾಗೂ ಮಾಂಗಲ್ಯ ಧಾರಣೆಯ ಸಮಯದ ಶಾಸ್ತ್ರ ಕೇಳಿಸುವರು. ಜಂಗಮ ಇವೆಲ್ಲವನ್ನು ಒಂದೊಂದು ಪ್ರತ್ಯೇಕವಾಗಿ ಹಾಳೆಯಲ್ಲಿ ಬರೆದು, ಕಂಬಳಿಯ ಮೇಲೆ ಗಂಡು ಹೆಣ್ಣಿನ ಎರಡು ಕಳಸಗಳನ್ನಿರಿಸಿ ಅವುಗಳ ಮುಂದೆ ಈ ಕಾಗದಗಳನ್ನು (ಚೀಟಿ) ಇಡುತ್ತಾನೆ. ಮರದ ಮೇಲೆ ಸಾಮಗ್ರಿಗಳನ್ನಿರಿಸಿ, ಜಂಗಮ ಲಗ್ನ ಕಟ್ಟಿಸುವ ಪೂಜೆ ಮಾಡುತ್ತಾನೆ. ಎಲ್ಲರೂ ನೆರೆದವರು ಅಕ್ಷತೆ ಹಾಕುತ್ತರೆ. ಜಂಗಮ ದೈವದ ಸಮ್ಮುಖದಲ್ಲಿ ಈ ಪತ್ರಗಳನ್ನು ಓದುವನು. ಎರಡು ಪ್ರತ್ಯೇಕ ಕೆಂಪು ಅಥವಾ ಬಿಳಿಯ ವಸ್ತ್ರದ ಈ ಪತ್ರಗಳನ್ನಿಟ್ಟು ಉಡಿ ಸಾಮಗ್ರಿಗಳನ್ನು ಇರಿಸಿ ಗಂಟು ಕಟ್ಟುತ್ತಾರೆ. ಎರಡು ಗಂಟುಗಳನ್ನು

ಒಟ್ಟಿಗೆ ಕಂಬಳಿಯ ಮೇಲಿರಿಸಿ ಮತ್ತೊಮ್ಮೆ ಪೂಜೆ ಮಾಡುವರು. ಎಲ್ಲರು ಅಕ್ಕಿಕಾಳು ಹಾಕಿ ಕಳಸ ಬೆಳಗುವರು. ದೈವದ ಸಮ್ಮುಖದಲ್ಲಿ ಗಂಡು ಮತ್ತು ಹೆಣ್ಣಿನ ಕಡೆಯ ಯಜಮಾನರಿಗೆ ಈ ಲಗ್ನ ಕಟ್ಟಿದ ಲಗ್ನಕ್ಕಿಯ ಗಂಟುಗಳನ್ನು ಕೊಡುವನು. ಇವುಗಳನ್ನು ಅವರು ತಮ್ಮ ಮನೆಯ ದೇವರ ಜಗುಲಿಯ ಮೇಲಿಡುವರು. ಮಾಂಗಲ್ಯ ಧಾರಣೆಯ ದಿವಸ ಅವರು ಈ ಎರಡೂ ಗಂಟುಗಳನ್ನು ತರಬೇಕು. ಹೆಣ್ಣಿನ ತಂದೆ ಅಥವಾ ಅವರ ಕಡೆಯ ಯಜಮಾನ ಸೇರಿದ ದೈವಕ್ಕೆ ದೈವದ ಹಣಕೊಟ್ಟು ಮದುವೆಯನ್ನು ನಡೆಸಿಕೊಡಬೇಕೆಂದು ನಮಸ್ಕರಿಸಿ ಕೇಳುವನು. ಕೊನೆಗೆ ಎಲ್ಲರಿಗೂ ಚಹ ಫಲಹಾರ ಮತ್ತು ವೀಳ್ಯೆ ಮರ್ಯಾದೆ ಮಾಡುತ್ತಾರೆ. ಇಲ್ಲಿಗೆ ಲಗ್ನ ಕಟ್ಟಿಸುವ ಶಾಸ್ತ್ರ ಮುಗಿಯುತ್ತದೆ.

### ೫.೪.೪. ಮದುವೆಯ ಚಪ್ಪರ (ಹಂದರ)

ಗಾಣಿಗರಲ್ಲಿ ಮದುವೆಯನ್ನು ಗಂಡಿನ ಮನೆಯ ಮುಂದೆ ಮಾಡುವುದು ಸಾಮಾನ್ಯ. ಮದುವೆಯ ಹಿಂದಿನ ದಿನ ಸಮುದಾಯದ ದೈವಸ್ಥರೆಲ್ಲ ಸೇರಿ ಮದುವೆಯ ಮನೆಯ ಮುಂದೆ ಹಂದರ ಹಾಕುವರು. ಊರಿನ ಜಂಗಮರ ಹತ್ತಿರ ಹೋಗಿ ಶಾಸ್ತ್ರತಗಿಸಿ ತಿಳಿದುಕೊಂಡು ಒಂದು ಸಣ್ಣ ಆಳೆಯಲ್ಲಿ ಆಯವನ್ನು ಬರೆಸಿಕೊಂಡು ಬರುವರು. ಅದೇ ಪ್ರಕಾರ ಹಂದರದ ಉದ್ದ ಅಗಲವನ್ನು ಅಳತೆ ಮಾಡಿ ಗುರ್ತಿಸುವರು. ಎಂಟು ಕಂಬದ ಹಂದರ ಅಥವಾ ಹನ್ನೆರಡು ಕಂಬದ ಹಂದರ ಶ್ರೇಷ್ಠ. ಆದರೆ ಇತ್ತೀಚಿನ ದಿನಗಳಲ್ಲಿ ಅನುಕೂಲಕ್ಕೆ ತಕ್ಕಂತೆ ಹಂದರವನ್ನು ಹಾಕುತ್ತಾರೆ. ಕಂಬ ಹೂಳುವ, ಕುಣಿ ತೆಗೆದು ಮೊದಲ ಹಂದರದ ಮೂಲ ಕಂಬದ ಪೂಜೆ ಮಾಡುವರು. ಮನೆಯ ಬಲ ಭಾಗದ ಒಂದು ಕುಣಿಯಲ್ಲಿ ಹಾಲು ತುಪ್ಪ ಹಾಕಿ ಊರಿನ ಬನಕಾರ ಕಂಬ ಹುಗಿಯುತ್ತಾನೆ. ನಂತರ ಉಳಿದ ಕಂಬಗಳನ್ನು ಹುಗಿಯುವರು. ನಂತರ ಮದುಮಗ ಅಥವಾ ಮದುಮಗಳ ಸೋದರ ಮಾವ ಹಂದರದ ಕಂಬವನ್ನು ಪೂಜಿಸಿ ತುಪ್ಪ ಹಾಲು ಬೆಲ್ಲ ಅನ್ನ ಎಡೆ ಮಾಡುವರು. ಪದ್ಧತಿ ಇದ್ದರೆ ಸೋದರ ಮಾವ ಮನೆಗೆ ಜೋರು ಅಥವಾ ಚಟ್ಟು ಇಡುತ್ತಾರೆ. ಜೋರು ಬಿಟ್ಟು ಚಟ್ಟು ಇಡುವುದು ಬಹುತೇಕವಾಗಿ ಮದುವೆ ಮನೆ ಎಂದು ಗುರುತಿಸುವುದಕ್ಕಾಗಿ ಇರಬಹುದು. ದೈವದವರು ಹಂದರದ ಮೇಲ್ಛಾವಣಿಗೆ ಪ್ರತಿಯೊಂದು ಬಿದುರಿನ ಗಳಗಳನ್ನು ಕಟ್ಟಿ ತೆಂಗಿನ ಗರಿ ಮತ್ತು ಹಸಿರು ಸೊಪ್ಪು (ತಪ್ಪಲ) ಹಾಕಿ ಮೂಲ ಕಂಬಕ್ಕೆ ಹಸಿರು ಹಾಲು ಗಂಬ ಕಟ್ಟುತ್ತಾರೆ. ನಂತರ ಉಡಿ ಸಾಮಾನು ಕಟ್ಟಿ ಮತ್ತೊಮ್ಮೆ ಹಂದರದ ಕಂಬವನ್ನು ಪೂಜೆ ಮಾಡಿ ಹಂದರದ ಮಧ್ಯ ಭಾಗದಲ್ಲಿ ಮೇಲೆ ಅಂತರಗಾಯಿ ಕಟ್ಟುತ್ತಾರೆ. ಜೊತೆಗೆ ಒಂದು ಸಣ್ಣ ಲಾಟೀನು (ಕಂದೀಲು) ತೂಗು ಹಾಕುವರು. ಅಂತರಗಾಯಿ ಶುಭದ ಸೂಚನೆಯಾದರೆ ಲಾಟೀನು ಬೆಳಕಿಗೋಸ್ಕರವಾಗಿದೆ. ಕೊನೆಗೆ ಹಂದರ ಹಾಕಿದವರಿಗೆ ಮತ್ತು ಚಟ್ಟು ಅಥವಾ ಜರಿ ಇಟ್ಟವರಿಗೆ ಚಾಜಾ ಕೊಡುವರು. ಮಾಂಗಲ್ಯ ಧಾರಣೆಯಾದ ಐದನೆಯ ದಿನ ಹಂದರ ತಿರುವಿ ಹಾಕುತ್ತಾರೆ. ಒಂಬತ್ತನೆಯ ದಿನ ಹಂದರವನ್ನು ಬಿಚ್ಚುತ್ತಾರೆ.

ಗಾಣಿಗರಲ್ಲಿ ಅದೇ ದಿನ ಒಳಕಲ್ಲು, ಬೀಸುವಕಲ್ಲು, ಶಾವಿಗೆ ಮಣೆಯನ್ನು ಪೂಜಿಸಿ ಸಂಪ್ರದಾಯದ ಹಾಡು ಹಾಡುತ್ತಾ ಗೋಧಿ ಕುಟ್ಟುತ್ತಾರೆ. ಅದೇ ದಿನ ಸಾಯಂಕಾಲ ಮದುಮಗಳಿಗೆ ಹಸಿರು ಬಳೆ

ಹಾಕಿಸುವರು. ಬಳೆಗಾರನಿಗೆ ಕೂಡ ಜಾಜಾ ಕೊಡುತ್ತಾರೆ. ಆಯಾಕಾರ ಮನೆಯ ಮಾದರಿದ್ದರೆ, ಮದುಮಕ್ಕಳಿಗೆ ಪಾದರಕ್ಷೆಗಳನ್ನು ತಂದು ಹಂದರ ಕೆಳಗೆ ಪೂಜಿಸಿ ಧಾನ್ಯ ಪಡೆದು ಅವುಗಳನ್ನು ಅವರಿಗೆ ಕೊಡುತ್ತಾರೆ.

### ೫.೪.೫. ಬೀಗರನ್ನು ಎದುರುಗೊಳ್ಳುವುದು

ಬೀಗರನ್ನು ಎದುರುಗೊಳ್ಳುವ ಪದ್ಧತಿಯು ಗಾಣಿಗರಲ್ಲಿ ಕಂಡುಬರುತ್ತದೆ. ಬೀಗರು ಮುಂಚಿತವಾಗಿಯೇ ಬಂದು ಒಂದು ಪ್ರತ್ಯೇಕ ಮನೆ ಇಲ್ಲವೆ ಸರ್ಕಾರಿ ಶಾಲೆಯಲ್ಲಿ ತಂಗಿರುತ್ತಾರೆ. ಎದುರುಗೊಳ್ಳುವ ಸಮಯಕ್ಕೆ ಬಂದ ಬೀಗರೆಲ್ಲ ಹತ್ತಿರದ ದೇವಸ್ಥಾನದಲ್ಲಿ ಕುಳಿತಿರುವರು. ಬೀಗರನ್ನು ಎದುರುಗೊಳ್ಳಲು ಮಹಿಳೆಯರು ಮಕ್ಕಳನ್ನು ಸೇರಿದಂತೆ ಹಿರಿಯರು ಸಹ ಬರುತ್ತಾರೆ. ಗಂಡು ಹುಡುಗರು ಹೆಂಗಸರ ಉಡುಗೆಗಳನ್ನು ಧರಿಸಿ, ವಿವಿಧ ಸಾಮಗ್ರಿಗಳನ್ನು ಹಿಡಿದು ಮೇಳದ ಸಮೇತ ಕೇಕೆ ಹಾಕುತ್ತಾ ಸಂತೋಷದಿಂದ ಬೀಗರಿದ್ದ ದೇವಸ್ಥಾನಕ್ಕೆ ಬರುತ್ತಾರೆ. ಬೀಗರಲ್ಲಿ ಕೆಲವು ಗಂಡಸರನ್ನು (ಸಹೋದರ ಬೆಡಗಿನವರನ್ನು ಬಿಟ್ಟು) ಕಂಬಳಿಯ ಮೇಲೆ ಕೂಡಿಸುವರು. ಅವರ ಎದುರಿಗೆ ಸೋಗು ಹಾಕಿದ ಹುಡುಗರು ಕೊಡುತ್ತಾರೆ. ಮೊದಲು ಬೀಗರ ಕಡೆಯವರನ್ನು ತಮಾಷೆ ಮಾಡುತ್ತಾ ಮುಖ ತೊಳೆದು, ವಿಭೂತಿ ಕುಂಕುಮ ಹಚ್ಚಿ ಪೂಜಿಸುವರು. ಅವರು ತಂದ ಅಣಕು ಸಾಮಗ್ರಿಗಳನ್ನು ಹೆಸರಿಸುತ್ತಾ ಅವರಿಗೆ ಕೊಡುಗೆಯಾಗಿ ನೀಡುವರು. ವಿವಿಧ ತರಕಾರಿಗಳಿಂದ ಅಲಂಕರಿಸಿದ ಹಾರ, ಸೇರು, ಚಿಬ್ಬಲಿಯ ಕೊಡೆ, ಬ್ಯಾಟರಿ, ಬಳೆ, ಬೇವಿನ ಕಾಯಿ, ಬಂಡಿ, ಎತ್ತು, ಬ್ಯಾಟರಿ ಚಾಳೀಸು ಮಂಡಕ್ಕಿಯಿಂದ ತಯಾರಿಸಿದ ಆಭರಣಗಳು ಇಲ್ಲಿ ಪ್ರಮುಖವಾಗಿವೆ. ನಂತರ ಬೀಗರ ಕಡೆಯವರು ಸಹ ಸೋಗಿನವರನ್ನು ಪೂಜಿಸಿ, ಒಬ್ಬೊಬ್ಬರ ಬಂದು ಕಳಸ ಬೆಳಗುತ್ತಾರೆ. ಈ ಸಮಯದಲ್ಲಿ ಪರಸ್ಪರರು ತಮಾಷೆ ಮಾಡಿ ನಕ್ಕು ನಲಿಯುತ್ತಾರೆ. ಈ ಸಂದರ್ಭದಲ್ಲಿ ಗಾಣಿಗ ಮಹಿಳೆಯರು ಬೀಗರನ್ನು ಕುರಿತು ಸಂಪ್ರದಾಯದ ಹಾಡುಗಳನ್ನು ಹಾಡುವರು ಈ ಹಾಡುಗಳು ಹೆಚ್ಚಾಗಿ ತಮಾಷೆಯಿಂದ ಕೂಡಿದ್ದು, ಹಾಸ್ಯ ಪ್ರಮುಖವಾಗಿ ಎದ್ದು ಕಾಣುತ್ತದೆ. ಇವುಗಳಲ್ಲಿ ಕೆಲವು ನುಡಿ ತುಣುಕುಗಳು ಈ ಕೆಳಕಂಡಂತಿವೆ.

ಸರಕ್ಕ ಸರಿತಲ್ಲ ಬೀಗರ ಸುರಪ್ಪ ತಿಳಿತಲ್ಲ ||ಪ||

ಆನೀ ಬರತಾವಂತ ಆರ ಭಣವೀ ಕೊಂಡ|
ಆನೆಲ್ಲಿ ನಿಮ್ಮ ದಳವೆಲ್ಲಿ| ಸರಕ್ಕ ||೧||

ಆನೇಲ್ಲಿ ನಿಮ್ಮ ದಳವೆಲ್ಲಿ ಬೀಗಾ|
ಬೋಳ್ಹೋರಿ ಮ್ಯಾಲ ಬರತಾರ| ಸರಕ್ಕ ||೨||

ಒಂಟೀ ಬರತಾವಂತ ಎಂಟ ಭಣವೀ ಕೊಂಡ|
ಒಂಟೆಲ್ಲಿ ನಿಮ್ಮ ದಳವೆಲ್ಲ ಸರಕ್ಕ ||೩||

ಒಂಟೆಲ್ಲಿ ನಿಮ್ಮ ದಳವೆಲ್ಲಿ ಬೀಗಾ|
ಕುಂಟ್ಹೋರಿ ಮ್ಯಾಲ ಬರತಾರ| ಸರಕ್ಕ ||೪||

ಬೀಗೂತೊಳ್ಳವಳಂತ ದೇವರ ಮನಿ ಕೊಟ್ಟ|
ದೇವರ ಕದ್ವಾಳ ಬಗಲಾಗ| ಸರಕ್ಕ ||೫||

ಒಂದ ಅಡಕೀ ಒಡೆದು ಒಂಬತ್ತು ಮದುವಿ ಮಾಡಿ|
ಇಂದೀನ ಖರ್ಚು ಬಲು ಖರ್ಚು| ಸರಕ್ಕ ||೬||

ಇಂದೀನ ಖರ್ಚು ಬಲು ಖರ್ಚ ಬೀಗಾ|
ಖಂಬದ ತೆಕ್ಕಿ ಬಿಡವಲ್ಲ| ಸರಕ್ಕ ||೭||

ಒಂದ ಎಲಿ ಹರಿದು ಒಂಬತ್ತು ಮದುವಿಮಾಡಿ|
ನಿನ್ನೀನ ಖರ್ಚು ಬಲು ಖರ್ಚು| ಸರಕ್ಕ ||೮||

ನಿನ್ನೀನ ಖರ್ಚು ಬಲು ಖರ್ಚ ಬೀಗಾ|
ಹಂದರ ತೆಕ್ಕಿ ಬಿಡವಲ್ಲ| ಸರಕ್ಕ ||೯||

ಹಂದರದಾಗ ಮಂದಿ ಬಂದು ಎಟ್ಟೋತ್ತಾಯ್ತು|
ಕಂಬಳಿಲ್ಲೇನ ಇವರಲ್ಲಿ| ಸರಕ್ಕ ||೧೦||

ಕಂಬಳಿಲ್ಲೇನ ಇವರಲ್ಲಿ ಬೀಗುತಿ|
ಕಂಬ್ಳಿಗ್ಹೋಗ್ಯಾಳ ಮನಿ ಮನಿ| ಸರಕ್ಕ[೬] ||೧೧||

ಎಂದು ಇವರು ಹಾಡುವ ಪದದಲ್ಲಿ ಬೀಗರ ಸಿರಿತನ ಮತ್ತು ಗುಣವನ್ನು ಅಳೆಯುವ ಹಾಸ್ಯ ಕಂಡುಬರುತ್ತದೆ. ನಂತರ ಎಲ್ಲರೂ ವಿನೋದದಿಂದ ಮೇಳದ ಸಮೇತ ಬಂದು ಬೀಗರ ಮನೆ ಪ್ರವೇಶಿಸುತ್ತಾರೆ. ಬೀಗರಿಗೆ ಊಟೋಪಚಾರ ನಡೆಯುತ್ತದೆ. ಬೆಳಗಿನ ಜಾವ ಮದುವೆಯ ಮನೆಯವರು ಊರಿನ ಎಲ್ಲಾ ದೇವರಿಗೆ ಎಣ್ಣೆ ಬೀರಿ ಪೂಜೆ ಮಾಡುವರು ನಂತರ ಮದುಮಕ್ಕಳ ಶಾಸ್ತ್ರ ಮಾಡುವರು.

### ೫.೪.೬. ಮದುಮಕ್ಕಳ ಶಾಸ್ತ್ರ

ಗಾಣಿಗರು ಮದುವೆಯ ದಿನ ಬೆಳಗಿನ ಜಾವ ಅಂದರೆ ೫ ಅಥವಾ ೬.೩೦ಕ್ಕೆ ಮದುಮಕ್ಕಳ ಶಾಸ್ತ್ರ ಮಾಡುತ್ತಾರೆ. ಆ ಸಮಯದಲ್ಲಿ ಮದುಮಕ್ಕಳನ್ನು ಕಂಬಳಿಯ ಮೇಲೆ ಕೂಡಿಸುವರು, ಸಾಲಾವಳಿ ಬಂದ ಮುತ್ತೈದೆಯರು ಮೊದಲು ತಲೆಗೆ ಎಣ್ಣೆಹಾಕಿ ಅರಿಶಿಣ ಹಚ್ಚುತ್ತಾರೆ. ನಂತರ ಉಳಿದು ಮುತ್ತೈದೆಯರು ಮತ್ತು ಬಂಧುಗಳು ಅರಿಶಿಣ ಹಚ್ಚಿ ಶಾಸಕ್ಕಿ ಇಟ್ಟು ಕಳಸ ಬೆಳಗುವರು. ನಂತರ ಹಂದರದ ಮಧ್ಯದಲ್ಲಿ ಶ್ಯಾವಿಗೆ ಮಣೆಯು ಇಟ್ಟು ಮದುಮಕ್ಕಳನ್ನು ಕೂಡಿಸಿ ತಲೆಗೆ ಬಿಸಿನೀರು ಹಾಕುತ್ತಾರೆ. ಒದ್ದೆ ಬಟ್ಟೆಗಳನ್ನು ಬಿಡಿಸಿ ಹೊಸ ಬಟ್ಟೆಗಳನ್ನು ತೊಡಿಸುತ್ತಾರೆ. ಇದೇ ರೀತಿಯಲ್ಲಿ ಮದುಮಗಳ ಮನೆಯಲ್ಲಿಯೂ ನಡೆಯುವುದು. ಈ ಸಂದರ್ಭದಲ್ಲಿ ಕಂಡು ಬರುವ ವಿಶೇಷತೆ ಎಂದರೆ ಎಲ್ಲರೂ ಒಬ್ಬರಿಗೊಬ್ಬರ ಅರಿಶಿಣ ಹಚ್ಚುತ್ತಾ

ನೀರಾಟ ಆಡುವುದು. ನೀರಾಟ ನಿಲ್ಲಿಸಿ, ಎಲ್ಲರೂ ಬಟ್ಟೆಯನ್ನು ಬದಲಿಸಿಕೊಂಡು ಗಂಗೆ ಪೂಜೆಗೆ ಹೋಗುವ ಸಿದ್ಧತೆಯನ್ನು ತಯಾರು ಮಾಡಿಕೊಳ್ಳುವರು. ಇದನ್ನೇ ಮದುಮಕ್ಕಳ ಶಾಸ್ತ್ರ ಎಂದು ಕರೆಯುತ್ತಾರೆ.

### ೫.೪.೭. ಗಂಗೆ ತರುವುದು

ಈ ಮೊದಲು ಹೇಳಿದಂತೆ ಅನೇಕ ಲಿಂಗಾಯಿತ ಸಮುದಾಯಗಳ ಮದುವೆಯಂತಹ ಶುಭ ಮಂಗಳ ಕಾರ್ಯಗಳಲ್ಲಿ ಗಂಗೆಗೆ ಅಗ್ರಸ್ಥಾನ ಮತ್ತು ಪೂಜೆ ಸಲ್ಲುತ್ತದೆ. ಗಾಣಿಗರು ಧಾರೆ ಮುಹೂರ್ತದ ದಿನ ಬೆಳಗಿನ ಜಾವ ಮದುಮಕ್ಕಳನ್ನು ಮಾಡುವ ಶಾಸ್ತ್ರ ಮುಗಿದ ಬಳಿಕ ಗಂಗೆ ತರುವ ಶಾಸ್ತ್ರವನ್ನು ಮಾಡುತ್ತಾರೆ. ಗಂಡು ಮತ್ತು ಹೆಣ್ಣಿನ ಕಡೆಯ ಐದು ಮಂದಿ ಮುತ್ತೈದೆಯರು ಸೇರಿ ಕಂಕಣ ಕಟ್ಟಿಕೊಂಡು ಗಂಗೆ ಪೂಜೆಗೆ ಹೊರಡುವರು. ಸುರಗಿಯ ನಾಲ್ಕು ಮಗಿಗಳನ್ನು (ಮಣ್ಣಿನ ಸಣ್ಣ ಗಡಿಗೆ) ಮತ್ತು ಐರಾಣಿಯ ದೊಡ್ಡಮಗಿಯನ್ನು ತೆಗೆದುಕೊಂಡು ವಾದ್ಯಗಳ ಸಮೇತ ಗಂಗೆಯ ಹತ್ತಿರ ಬರುತ್ತಾರೆ. (ನಳ, ಬಾವಿ) ನೆಲವನ್ನು ಮಡಿ ಮಾಡಿ ಕರಿಮುಂದೆ ಮಾಡಿ ಕಂಬಳಿಯನ್ನು ಹಾಸಿ ಅದರ ಮೇಲೆ ಐರಾಣಿಯ ಬಿಂದಿಗೆ ಮತ್ತು ಮಗಿಗಳನ್ನು ಇಡುತ್ತಾರೆ. ಮಧ್ಯದಲ್ಲಿ ಐರಾಣಿಯ ಬಿಂದಿಗೆ ಮತ್ತು ಅದರ ಬಲ ಎಡಕ್ಕೆ ಎರಡು ಸುರಗಿಯ ಮಗಿಗಳನ್ನು ಇಟ್ಟು, ಪ್ರತಿಯೊಂದು ಮಗಿಗೆ ಕಂಕಣ ಕಟ್ಟುವರು. ಇವುಗಳ ಮುಂದೆ ಐದು ಜೋಳದ ರಾಶಿ ಮಾಡಿ ಐದು ವೀಳ್ಯ ಇಟ್ಟು, ಅದರ ಮುಂದೆ ಐದು ಹೋಳಿಗೆಯ ತುಂಬಿದ ಎಡೆ ಮಾಡುವರು. ಎಲ್ಲರೂ ಕಂಕಣ ಕಟ್ಟಿಕೊಂಡು, ಅಂಗನೂಲು ಹಾಕಿ ಪೂಜೆ ಮಾಡಿ ಕಾಯಿ ಹೊಡೆದು ಉದ್ದಿನ ಕಡ್ಡಿಯನ್ನು ಬೆಳಗುವರು. ಮೊದಲು, ಸುರಿಗೆಯಲ್ಲಿ ಕೂಡುವ ಮಹಿಳೆಗೆ ಒಡೆದ ತೆಂಗಿನಕಾಯಿಯ ತಲೆ ಬಟ್ಟಲದೊಂದಿಗೆ ಉಡಿ ತುಂಬಿ ದಂಡೆ ಹಾಕಿ, ಐರಾಣಿ ಬಿಂದಿಗೆಯನ್ನು ತಲೆಯ ಮೇಲೆ ಹೊರಿಸುತ್ತಾರೆ. ನಂತರ ನಾಲ್ಕು ಜನ ಮುತ್ತೈದೆಯರು ಉಡಿ ತುಂಬಿಕೊಂಡು ಉಳಿದ ನಾಲ್ಕು ಸುರಿಗೆಯ ಮಗಿಗಳನ್ನು ತೆಗೆದುಕೊಳ್ಳುವರು. ಎಲ್ಲರೂ ದಿಬ್ಬಣದೊಂದಗೆ ಮದುವೆ ನಡೆಯುವ ಮನೆಯ ಮುಂದಿನ ಹಂದರಕ್ಕೆ ಬರುವರು. ಈ ನಡುವೆ ಐರಾಣಿ ಬಿಂದಿಗೆ ಹೊತ್ತವಳಿಗೆ ದೇವರು ಬಂದರೆ, ನಿಂಬೇ ಹಣ್ಣು ಹೆಚ್ಚಿ ಇಳಿ ತೆಗೆದು ಶಾಂತಿ ಮಾಡುತ್ತಾರೆ. ಐರಾಣಿ, ಬಿಂದಿಗೆಯನ್ನು ಪೂಜೆ ಮಾಡಿ ಅಂದರಲ್ಲಿ ಇಳಿ ವೀಳ್ಯೆ ಬಿಟ್ಟು ತೆಗೆದುಕೊಂಡು ಹೋಗಿ ದೇವರ ಮನೆಯಲ್ಲಿ ಇಡುವರು.

### ೫.೪.೮. ಸುರಗಿ

ಅನೇಕ ಸಮುದಾಯಗಳಲ್ಲಿ ಮದುವೆಯ ಸಂದರ್ಭದಲ್ಲಿ ಮಾಡುವ ಒಂದು ಶಾಸ್ತ್ರ. ಇದು ಕ್ರಮ ಬದ್ಧವಾಗಿ ಮದುವೆಯಾಗುವವರನ್ನು ಜಳಕ ಮಾಡಿಸುವ ವಿಧಾನ. ಗಾಣಿಗರಲ್ಲಿ ಸುರಿಗೆ ಪದ್ಧತಿ ಇದೆ. ಇವರು ಗಂಗೆಯಿಂದ ತಂದ ಉಳಿದ ನಾಲ್ಕು ಸುರಿಗೆಯ ಮಗಿಗಳನ್ನು ಹಂದರದಲ್ಲಿ ಚೌಕಾಕಾರವಾಗಿ ಮೂಲೆಗೊಂದರಂತೆ ಸೆಗಣಿಯ ಮೇಲೆ ಇಡುವರು. ಮುತ್ತೈದೆಯರು ಒಂದೊಂದು ಮಗಿ ಹಿಡಿದುಕೊಂಡು ಕುಳಿತುಕೊಳ್ಳುವರು. ಮೂಲ ಹಂದರದ ಕಂಬದ ಮಗಿಯಿಂದ ಸುರಗಿ ಮಗಿಯನ್ನು ಬಲಕ್ಕೆ ಮಾಡಿಕೊಂಡು ಐದು ಸುತ್ತು ದಾರವನ್ನು ಸುತ್ತುವರು. ಸುರಗಿಯ ಮಧ್ಯದಲ್ಲಿ ಒನಕೆ ಇಲ್ಲವೆ ಶ್ಯಾವಿಗೆಯ ಮಣೆ ಹಾಕುತ್ತಾರೆ. ಮಣೆಯ ಮೇಲೆ ಮದುಮಗಳು ಮತ್ತು ಸುರಿಗೆಗೆ ಕೂಡುವವಳು ವತ್ತಿಗೆ ಕುಂತವಳು ಕೂಡುತ್ತಾರೆ.

ಇಬ್ಬರಿಗೂ ತಲೆಗೆ ಎಣ್ಣೆ ನೀರು ಹಾಕಿ, ಸೀಗೆಕಾಯಿ, ಸೋಪು ಹಚ್ಚಿ ಸುರಗಿ ನೀರು ಎರೆಯುತ್ತಾರೆ. ಇಬ್ಬರಿಗೂ ಹೊಸ ಬಟ್ಟೆಯನ್ನು ಉಡಿಸಿ ವಿಭೂತಿ ಕುಂಕುಮ ಹಚ್ಚಿ ದಂಡಿಯನ್ನು ಹಾಕಿ, ಕಳಸ ಬೆಳಗುವರು. ಪರಸ್ಪರ ಮದುಮಗಳು ಮತ್ತು ವತ್ತಿಗೆ ಕುಳಿತವಳ ಮೂಲಕ ಮುತ್ತಿನ ನೀರು ಎತ್ತುತ್ತಾರೆ. ಸುರಗಿಯ ದಾರವನ್ನು ಎರಡು ಮುಡುಪು ಮಡಚಿ ರಿಂಗ್ ಆಕಾರದಲ್ಲಿ ಸುತ್ತಿ ದೇವರ ಮನೆಗೆ ಒಯ್ಯುವರು. ಇದೇ ರೀತಿಯಾಗಿ ಮದುಮಗಳ ಮನೆಮುಂದೆಯೂ ಸುರಗಿಯ ನೀರು ಹಾಕುತ್ತಾರೆ. ಸುರಗಿಯ ನೀರು ಎರೆಯುವಾಗ ಸುರಗಿಯ ನಡುವೆ ಮತ್ತು ಹತ್ತಿರಕ್ಕೆ ಅಪಶಕುನ ಸೂಚಕ ಪ್ರಾಣಿಗಳಾದ ನಾಯಿ, ಬೆಕ್ಕು ಬರದಂತೆ ಕಾಯುವರು. ವಿದುರ, ವಿಧವೆ, ದೇಹದ ಅಂಗ ಊನವಾದವರು (ಮೂಳ) ಸುರಿಗೆಯನ್ನು ಮುಟ್ಟುವುದಿಲ್ಲ. ಗಾಣಿಗರು ಸುರಿಗೆಯಲ್ಲಿ ವಧು-ವರರನ್ನು ಒಂದೇ ಹಂದರದಲ್ಲಿ ಜೊತೆಗೆ ಕೂಡಿಸಿ ಎರೆಯುತ್ತಾರೆ.

### ೫.೪.೯. ಐರಾಣಿ ತರುವುದು

ಐರಾಣಿ ತೆಗೆದುಕೊಂಡು ಬರಲಿಕ್ಕೆ ಹೋಗುವಾಗ ಆರತಿಯೊಂದಿಗೆ ಮರದಲ್ಲಿ ಬೇಳೆ, ಅಕ್ಕಿ, ಬೆಲ್ಲ, ಹಿಟ್ಟು, ಕೊಬ್ಬರಿ ಬಟ್ಲ, ಖಾರೀಖು, ಬಾದಾಮಿ, ವೀಳ್ಯದೆಲೆ, ಕುಪ್ಪಸ, ರೂ.೨೧ ತೆಗೆದುಕೊಂಡು ಐರಾಣಿ ತರಲು ಹೆಸರು ಬಂದ ಜೋಡಿ ಗಂಡ ಹೆಂಡತಿ ಹಾಗೂ ಇತರ ಜನರು ಕುಂಬಾರನ ಮನೆಗೆ ಬಾಜೆಯೊಂದಿಗೆ ಹೋಗುತ್ತಾರೆ. ಐರಾಣಿ ಎಂದರೆ ಐದು ಮಂದಿ ರಾಣಿಯರು ಹೋರುವ ಕೊಡ ಮತ್ತು ಮಗಿಗಳ ಸಮೂಹವೇ ಐರಾಣಿ ಎಂದು ಕರೆಯಲಾಗುತ್ತದೆ. ಐರಾಣಿ ತರುವಾಗ ಆಡುವಂತ ಹಾಡು ಈ ಕೆಳಗೆ ಹೇಳಲಾಗಿದೆ.

ಜಾಣ ಕುಂಬಾರನೆ ಮನೆ ಯಾವ ಕಡಿಗದ|
ಕಪ್ಪುರದ ತಿಪ್ಪಿ ಎಡ ಬಲ| ಸೋ ||೧||

ಕಪ್ಪುರದ ತಿಪ್ಪಿ ಎಡ ಬಲ ಮಾಡಿಕೊಂಡು|
ಜಾಣ ಕುಂಬಾರನ ಮನಿಗ್ಯಾದ| ಸೋ ||೨||

ಮುಂಜಾನಿ ಕುಂಬಾರಣ್ಣಾ ಮಸರ ಬಾನುಂಡಾನ|
ಹಾರ‍್ಯಾರಿ ಕೆಸರ ತುಳದಾನ| ಸೋ ||೩||

ಹಾರಿ ಹಾರಿ ಕೆಸರ ತುಳುದು ತಾ ಮಾಡ್ಯಾನ|
ನಾರ‍್ಯಾರ ಹೊರುವ ಒಂದೈ ರಾಣಿ| ಸೋ ||೪||

ಕಡಗದ ಕೈಯಕ್ಕಿ ಕೊಡವಿ ಕುಂಬಾರವ್ವಾ|
ಕೊಡದ ಮ್ಯಾಲ್ಯಾನ ಬರದಾಳ| ಸೋ ||೫||

ಕೊಡದನೆ ಮ್ಯಾಲ್ಯಾನ ಬರದಾಳ ನಮ್ಮೂರ|
ಬಾಳಿ ಬನದಾಗೊಂದರಗಿಣಿಯ| ಸೋ ||೬||

ಹೀಗೆ ಹಾಡು ಹೇಳುವರು, ಮರದಲ್ಲಿದ್ದ ಪದಾರ್ಥಗಳನ್ನು ತೆಗೆದುಕೊಂಡು ಐದು ಮಗಿ ಮರದಲ್ಲಿಟ್ಟು ಬಳಿ ಬಟ್ಟೆಯಿಂದ ಮುಚ್ಚಿ ಕುಂಬಾರನ ಹೆಣ್ಣು ಮಗಳು ಕೊಡುವಳು. ಮನೆಗೆ ತಂದ ನಂತರ ಐದು ಮಗಿಗಳು ದೇವರ ಜಗಲಿಯ ಹತ್ತಿರ ಐದು ತರಹದ ಧಾನ್ಯಗಳನ್ನು ಹಾಕಿಡುತ್ತಾರೆ. ಜೋಡಿಯಿಂದ ನೀರು ತುಂಬಿ ತಂದ ಐರಾಣಿಯನ್ನು ಜಗಲಿಯ ಹತ್ತಿರವಿಟ್ಟು ಅದರ ಮೇಲೊಂದು ಮುಚ್ಚಳವನ್ನು ಮುಚ್ಚಿ ದೀಪ ಹಚ್ಚಿಡುವರು.

ಕುಂಬಾರನ ಮನೆಗೆ ಬಾಜೆಯೊಂದಿಗೆ ಮರದಲ್ಲಿ ಉಲ್ಪಿ ತೆಗೆದುಕೊಂಡು ಹೋದಂತೆ ಹೂಗಾರನ ಮನೆಗೂ ಹೋಗುತ್ತಾರೆ. ಐರಾಣಿ ತಂದವರೇ ಬಾಸಿಂಗ ತರಲು ಹೋಗುತ್ತಾರೆ. ಮರದಲ್ಲಿನ ಉಲ್ಪಿ ತೆಗೆದುಕೊಂಡು ಬಾಸಿಂಗವನ್ನು ದಂಡೆ ಮತ್ತು ಐರಾಣಿ ತಂದ ಜೋಡಿಗೆ ಕುಂಕುಮ ಹಚ್ಚಿ ಮರದಲ್ಲಿಟ್ಟು ಬಿಳಿಯ ಬಟ್ಟೆಯನ್ನು ಮುಚ್ಚಿ ಕೊಡುವಳು. ಅದನ್ನು ಮನೆಗೆ ತೆಗೆದುಕೊಂಡು ಬಂದು ಜಗಲಿಯ ಮೇಲಿಡುತ್ತಾರೆ. ಈ ರೀತಿ ಬಾಸಿಂಗ, ದಂಡೆ ತರುವುದು ಹಳ್ಳಿಯಲ್ಲಿ ಮಾತ್ರ ಸ್ವಲ್ಪ ಮಟ್ಟಿಗೆ ಕಂಡು ಬಂದಿದೆ. ಈಗ ಈ ಪದ್ಧತಿ ಕಣ್ಮರೆಯಾಗಿ ನಗರದ ಅಂಗಡಿಗೆ ಹೋಗಿ ಬಾಸಿಂಗ ಮತ್ತು ಹೂವಿನ ಹಾರವನ್ನು ತೆಗೆದುಕೊಂಡು ಬರುತಲಿದ್ದಾರೆ.

### ೫.೪.೧೦. ಮಾಂಗಲ್ಯ ಧಾರಣ ವಿಧಿ

ಮನೆಯ ಗಾಣಿಗರು ಒಂದು ತಟ್ಟೆಯಲ್ಲಿ ಅಕ್ಕಿಯನ್ನು ಹರಡಿ ಅದರ ಒಳಗೆ ಕುಂಕಮದಿಂದ ಮಧ್ಯ ಒಂದು ಕೊಬ್ಬರಿ ಬಟ್ಲವನ್ನು ಇಟ್ಟು ಮುತ್ತೈದೆಯರಿಂದ ಪೋಣಿಸಿದ ಮಂಗಲ ಸೂತ್ರ ತಾಳಿ ಕೊಬ್ಬರಿಯಲ್ಲಿ ಇಟ್ಟು ಜೊತೆಗೆ ಹಣ್ಣು ಹಂಪಲು, ಟೆಂಗಿನಕಾಯಿ, ಖಾರಿಕು, ಇಟ್ಟುಕೊಂಡು ಸರ್ವ ಮಂಗಲ ಮಾಂಗಲ್ಯ ಶಿವೇ ಸರ್ವಾರ್ಥ ಸಾಧಕೇ! ಶರಣ್ಯ ತ್ರ್ಯಯಿಕ ದೇವಿನಾರಾಯಣೆ ನಮೋಸ್ತುತೇ!! ಎಂದು ಮಂತ್ರದಿಂದ ಮಾಂಗಲ್ಯ ದೇವತೆಯಾದ ಶ್ರೀ ಪಾರ್ವತಿಯನ್ನು ಧ್ಯಾನ ಮಾಡಲಾಗುತ್ತದೆ. ನಂತರ ಮಾಂಗಲ್ಯಕ್ಕೆ ಹಿರಿಯರು, ಬಂಧುಗಳು ಮುತ್ತೈದೆಯರು ಜಂಗಮರು ಮಾಂಗಲ್ಯಕ್ಕೆ ಮುಟ್ಟಿ ನಮಸ್ಕರಿಸಿ ಆಶೀರ್ವಾದಿಸುತ್ತಾರೆ. ತದನಂತರ ವರನು ವಧುವಿನ ಕೊರಳಿಗೆ ಮಂಗಳ ಸೂತ್ರವನ್ನು ಕಟ್ಟುತ್ತಾನೆ. ಆಗ ಜಂಗಮರು ಈ ಕೆಳಗಿನ ಮಂತ್ರವನ್ನು ಹೇಳುತ್ತಾರೆ.

> "ಮಾಂಗಲ್ಯ ತಂತುನಾನೇನ| ಮಮ ಜೀವನ ಹೇತುನಾ
> ಕಂಠೇ ಭದ್ನಾಮಿ ಶುಭಗೇ| ತ್ವಂ ಜೀಗೀ ರ್ಘಯೆಶರದಃ ಶತಂ
> ಮಾಯಾಬಧ್ನಾಂ ದಾಕ್ಷಾಯಣೀ| ಹಿರಣ್ಯಂ ಸದೇಪೀಘೃಣ್ಯತಾಂ
> ದೀರ್ಘಮಾರ್ಯ| ಇತಿ ಮಾಂಗಲ್ಯ ಧಾರಯೇತ್||"[೮]

ಆದರೆ ಗುರು ಹಿರಿಯರು ಮುತ್ತೈದೆಯರ ಮತ್ತು ಪತಿ ಹಸ್ತಗತವಾಗಿ ಬಂದ ಮಂಗಲಸೂತ್ರವು ಸತಿಯ ಕೊರಳಿಗೆ ಶೋಭಾಯಮಾನವಾಗಿ ದೀರ್ಘಾಯುಷ್ಯ ಹಾಗೂ ಶಾಂತಿಯನ್ನುಂಟು ಮಾಡಲಿ, ಸಂಸಾರದಲ್ಲಿ ಎಷ್ಟೋ ಕಷ್ಟ ತೊಂದರೆಗಳು ಬಂದರು ಕುತ್ತುಗೆಯ ಸುತ್ತ ಬಂದರೂ ಸಹ ಸಹಿಸಿಕೊಂಡು ಪತಿಯ

ನೇಮಕ್ಕನುಸರಿಸಿ ಸ್ವಧರ್ಮಕ್ಕೆ ಚ್ಯುತಿ ಬಾರದಂತೆ ಪತಿಯಿಂದಾಗುವ ಕಷ್ಟಗಳನ್ನು ಕೂಡ ಸಹಿಸಿ ತಾಳಿಕೊಂಡು ಬಾಳಬೇಕು. ಪತಿವ್ರತಾ ಧರ್ಮವನ್ನು ಪಾಲಿಸಬೇಕು. ಸಂಸಾರದಲ್ಲಿ ಸರಿಯಾದ ಹೆಸರು ತೆಗೆದುಕೊಳ್ಳಬೇಕು. ಇದರಿಂದ ಇದಕ್ಕೆ ತಾಳಿಯೆಂದು ಹೇಳುತ್ತಾರೆ. ಹಿರಿಯರು ಹೆಣ್ಣು ಮಕ್ಕಳಿಗೆ ಕಷ್ಟ ನಷ್ಟಗಳು ಒದಗಿದರೂ ತಾಳಬೇಕು ಎನ್ನುತ್ತಾರೆ. ಅದಕ್ಕೆ ತಾಳಿದವನು ಬಾಳಿಯಾನ ಎಂಬ ಗಾದೆ ಸೂಕ್ತವಾಗಿದೆ. ತಾಳಿ ಕಟ್ಟಿಕೊಂಡ ಹೆಣ್ಣು ಒಬ್ಬರ ಸ್ವತ್ತಾಗುತ್ತಾಳೆ. ಅನ್ಯರು ಅವಳಿಗೆ ಆಸೆ ಪಡಲಿಕ್ಕೆ ಇಲ್ಲ ಎನ್ನುವುದಕ್ಕೆ ಮಾಂಗಲ್ಯ ಧಾರಣ ಸೂಚಕವಾಗುತ್ತದೆ. ಬಸವ ಧರ್ಮದ ಪ್ರಕಾರ ಜಿಲ್ಲೆಯಲ್ಲಿ ಅನೇಕ ಮದುವೆಗಳು ನಡೆಯುತ್ತವೆ. ಅವರ ಮದುವೆಗಳಲ್ಲಿ ಮಾಂಗಲ್ಯವನ್ನು ಕಟ್ಟುವಾಗ ಸ್ವಾಮಿಗಳು ಹೀಗೆ ಹೇಳಿಕೊಡುತ್ತಾರೆ.

"ನನ್ನ ಜೀವನದ ಅರ್ಧಾಂಗಿ ಎಂದು
ಜೊತೆಗೂಡಿ ನಡೆಯುವ ಸಹಚರಣಿ ಎಂದು
ಮನೆ ಮನ ತುಂಬುವ ಸತಿ ರತ್ನವೆಂದು
ಮಾಂಗಲ್ಯ ಧರಿಸುವೆನು ದೇವಿ ನಿನಗಿಂದು"

ಎಂದು ಹೇಳುತ್ತಾ ಮಾಂಗಲ್ಯಧಾರಣೆ ಮಾಡುತ್ತಾರೆ. ವಧು-ವರರು ಕುಳಿತಿರುವಲ್ಲಿ ಎದ್ದು ವರನು ತನ್ನ ಬಲಗಾಲ ಹೆಬ್ಬೆರಳನ್ನು ವಧುವಿನ ಬಲಗಾಲ ಹೆಬ್ಬೆರಳಿಗೆ ಸ್ಪರ್ಶ ಮಾಡುತ್ತಾನೆ. ಇದಕ್ಕೆ ಪಾದಾಂಗುಷ್ಟ ಸ್ಪರ್ಶನ ಎಂದು ಕರೆಯುತ್ತಾರೆ. ನಂತರ ವಧು ತನ್ನ ಗಂಡನಾಗುವ ಪತಿಗೆ ನಮಸ್ಕಾರ ಮಾಡಿ ಅವನ ಪಾದ ಪೂಜೆ ಮಾಡುತ್ತಾಳೆ. ನಂತರ ಪರಸ್ಪರ ಎದುರು ಬದುರು ನಿಂತು ಒಬ್ಬರೊಬ್ಬರು ಹೂಮಾಲೆಯನ್ನು ಬದಲಾಯಿಸಿಕೊಳ್ಳುತ್ತಾರೆ. ಹೂವಿನ ಮಾಲೆಗಳು ಪರಸ್ಪರ ಬದಲಾಯಿಸಿಕೊಳ್ಳುವ ಸಂಕೇತವೆಂದರೆ ಒಬ್ಬರ ತಪ್ಪುಗಳು ಒಬ್ಬರು ಹಂಚಿಕೊಂಡು ಹಗುರು ಮಾಡಿಕೊಳ್ಳುವುದಾಗಿದೆ.

ಅಕ್ಷತರೋಹಣ ವಿಧಿ-ಪಾದ ಸಂಘುಟನ ಕ್ರಮವಾದ ನಂತರ ಇಲ್ಲಿಯವರೆಗೂ ವಧು ವರನ ಬಲಗಡೆ ಕುಳಿತ ವಧು ಈಗ ವರನ ಎಡಗಡೆ ಬರುತ್ತಾಳೆ ನಂತರ ಜಂಗಮರು ಮಂತ್ರವನ್ನು ಆರಂಭಿಸುತ್ತಾರೆ.

ತದೇವ ಲಂಗ್ನಂ ಸುದಿನಂತು ದೇವ| ತಾರಾಬಲಂ ಚಂದ್ರಬಲಂತು ದೇವ||
ವಿದ್ಯಾಬಲಂ ದೈವ ಬಲಂತು ದೇವ| ಗೌರಿಪತೇ ತೇಪ್ರಿಯುಗಂ ಸ್ಮರಾಮಿ||
ಶುಭ ಮುಹರ್ತೇ ಸಾವಧಾನಂ| ಸುಲಗ್ನ ಸಾವಧಾನಂ
ಪಾರ್ವತಿ ಪರಮೇಶ್ವರ ಧ್ಯಾನೋತ್ಸವ ಸ್ಸಾವಧಾನಃ||"

ಎಂಬ ಮಂತ್ರವನ್ನು ಹೇಳುತ್ತಾರೆ. ತಾರಾಬಲ, ಚಂದ್ರಬಲ, ವಿದ್ಯಾಬಲ, ದೇವಬಲ ಹಾಗೂ ದೈವಬಲ ಹೀಗೆ ಐದು ಪಂಚಬಲಯುಕ್ತವಾಗಿರುವುದರಿಂದ ಕೂಡಿದ ಲಗ್ನವಿರುವುದೋ ಅದು ಸುದಿನವು, ಸುಮುಹೂರ್ತವಾಗಿರುತ್ತದೆ. ಅಲ್ಲದೆ ಇಂತಹ ಸಮಯದಲ್ಲಿ ಮದುಮಕ್ಕಳಿಗೆ ಹಂದರಕ್ಕೆ ಸ್ಪರ್ಶಿಸುತ್ತವೆಯೆಂದೂ ಸಮಸ್ತ ದೈವದ ಹಸ್ತಸ್ಪರ್ಶದಿಂದ ಬಂದ ಮಂಗಲಾಕ್ಷತೆಯು ಎಂದು ತಿಳಿದು ಇವುಗಳು ವಧು ವರರ

ಮಸ್ತಕಕ್ಕೆ ಮುಟ್ಟುವುದರಿಂದ ದಂಪತಿಗಳ ಜೀವನ ಸುಗಮವಾಗುತ್ತದೆ. ಆನಂದದಾಯಕವಾಗಿರುತ್ತದೆಂದು ಅಕ್ಷತೆ ಜಂಗಮರ ಮಂತ್ರ ಮುಗಿಯುತ್ತಿದ್ದಂತೆ ಎಲ್ಲಾ ತಂದೆ-ತಾಯಿ, ಅಣ್ಣ-ತಮ್ಮಂದಿರು, ಬಂಧು-ಬಳಗದವರು, ಗುರು-ಹಿರಿಯರು, ನೆಂಟರಿಷ್ಟರು-ಸ್ನೇಹಿತರು, ವಧು-ವರರ ಮೇಲೆ ಅಕ್ಷತೆಯನ್ನು ಹಾಕುತ್ತಾರೆ.

ಬ್ರಹ್ಮಗಂಟು ಕಟ್ಟುವುದು ವರನ ಮತ್ತು ವಧುವಿನ ಸೀರೆಶೆಲ್ಲೆಗೆ ಅರಿಶಿಣ, ಜೀರಿಗಿ, ಬೆಲ್ಲ, ಅಡಿಕೆ ಹಾಗೂ ಬಂಗಾರ ಹೀಗೆ ಐದು ಪ್ರಕಾರ ವಸ್ತುಗಳನ್ನು ಹಾಕಿ ಈ ಬ್ರಹ್ಮಗಂಟು ಕಟ್ಟುತ್ತಾರೆ. ಏಕೆಂದರೆ ಹೊಸ ದಂಪತಿಗಳ ಸಂಬಂಧ ಗಟ್ಟಿಯಾಗಿ ಶಾಶ್ವತವಾಗಿರಲೆಂದು ಹೀಗೆ ಮಾಡುವುದುಂಟು.

ನಂತರ ಗಾಣಿಗರು ಜಂಗಮರಿಗೆ, ಮದುಮಗನ ಹಾಗೂ ಮದುಮಗಳ ಕಡೆಯವರು ಹೊದಿಕೆಯನ್ನು ಮಾಡಿ ದಕ್ಷಿಣಾದಿಗಳನ್ನು ಕೊಟ್ಟು ಪಾದಕ್ಕೆ ನಮಸ್ಕರಿಸುತ್ತಾರೆ.

### ೫.೪.೧೧. ಧಾರೆ ಎರೆಯುವುದು

ಅಕ್ಷತಾರೋಹಣವಾದ ಮೇಲೆ ವರ ವಧುಗಳು ಮನೆಯ ದೇವರ ಕೋಣೆಗೆ ಬಂದು ಕೈ ಮುಗಿದು ಕುಳಿತುಕೊಳ್ಳುತ್ತಾರೆ. ಆಗ ಹುಡುಗಿಯ ಸೋದರ ಮಾವ ಸೋದರತ್ತೆ ಬಂದು ವಧು ವರವಿನ ಪಾದಗಳು ತೊಳೆದು ವಿಭೂತಿ ಕುಂಕುಮದಿಂದ ಪೂಜಾ ಮಾಡಿ ನಮಸ್ಕರಿಸುತ್ತಾರೆ.

ನಂತರ ಸ್ನೇಹಿತರು, ನೆಂಟರಿಷ್ಟರು, ಬಂಧು ಬಳಗದವರು ಮದುಮಕ್ಕಳಿಗೆ ಭೇಟಿ ಮಾಡಿ ಶುಭವಾಗಲಿ ಎಂದು ಹೇಳಿ ಉಡುಗೊರೆ ಆಯ್ಕೇರು ಮಾಡುತ್ತಾರೆ. ಆ ಮೇಲೆ ಮದುವೆಗೆ ಬಂದ ಎಲ್ಲರಿಗೂ ಅವರವರ ಸಾಮರ್ಥ್ಯದ ಪ್ರಕಾರ ಊಟವನ್ನು ಮಾಡಿಸುತ್ತಾರೆ. ವಿಶೇಷವಾಗಿ ಊಟಕ್ಕೆ ವಿವಿಧ ಸಿಹಿಯ ಅಡುಗೆಯನ್ನು ಮಾಡುತ್ತಾರೆ. ಕೆಲವೊಂದು ಬಾರಿ ಬೀಗರಿಗೆ ಊಟ ಉಪಚಾರದಲ್ಲಿ ಕಡಿಮೆಯಾಗಿದ್ದರೆ ಬೀಗರು ವ್ಯವಸ್ಥೆ ಮಾಡುವಲ್ಲಿ ಮದುವೆಯ ಒಳ್ಳೆದ್ದು ಕೆಟ್ಟದ್ದೆಂದು ನಿರ್ಧಾರವಾಗುವುದುಂಟು.

### ೫.೪.೧೨. ಕಾಲು ತೊಳೆಯುವ ಕಾರ್ಯಕ್ರಮ

ಅಕ್ಷತಾರೋಹಣದ ದಿನ ಸಾಯಂಕಾಲ ಮದುಮಕ್ಕಳನ್ನು ಮೆರವಣಿಗೆಯ ಮುಖಾಂತರ ದೇವಸ್ಥಾನಕ್ಕೆ ಕರೆದೊಯ್ದು ಪೂಜೆ ಮಾಡಿಕೊಂಡು ಮದುವೆಯ ಮನೆಗೆ ಕರೆತರುತ್ತಾರೆ. ಈ ಸಂದರ್ಭದಲ್ಲಿ ವರನ ಸಹೋದರಿಯರು ನವ ದಂಪತಿಗಳ ಕಾಲು ತೊಲೆಯುವರು. ಹೊಸ್ತಿಲಿಯ ಮೇಲೆ ಒಂದು ತಟ್ಟಿಯನ್ನಿಟ್ಟು, ಅದರಲ್ಲಿ ಗಂಡಿನ ಬಲಗಾಲು ಮತ್ತು ಹೆಣ್ಣಿನ ಎಡಗಾಲನ್ನು ಇರಿಸಿ ಪಾದ ಪೂಜೆಯನ್ನು ಮಾಡಿ ನಮಗೆ ಹೆಣ್ಣು ಕೂಡು ಎಂದು ನವದಂಪತಿಗಳನ್ನು ಕೇಳುವರು. ಈ ಕುರಿತು ವಿನೋದದ ಮಾತುಕತೆ ಕೂಡ ನಡೆಯುತ್ತದೆ ಮತ್ತು ಅನೇಕ ಸಂಪ್ರದಾಯದ ಹಾಡುಗಳನ್ನು ಹಾಡುತ್ತಾರೆ. ಅದರ ಕೆಲವು ತುಣುಕು ಇಲ್ಲಿವೆ.

ಪಾದ ತೊಳೆಯನು ಬನ್ನೀರೇ
ಅಣ್ಣಾನ ಕಾಲ ತೊಳೆಯನು ಬನ್ನೀರೆ,
ಪಾದ ತೊಳೆಯನು ಬಾರೇ ಮೇಲ ಮುಸುಗೀನ ಶ್ಯಾಣಿ

ವಾಲಿ ಹೊನ್ನಾಳಿ ಕೇಳಿ ಎಲ್ಲಾ ಕಾಲ ತೊಳೆಯನು ಬನ್ನೆರೇ
ಅಣ್ಣಾನ ಪಾದ ತೊಳೆಯನು ಬನ್ನೆರೇ...
ಒಂಟಿ ಐದವಣ್ಣಾ ಒಂಟಿ ಮರಿ ಐದಾವ
ಕುಂತಾದ ಮಗಳಾ ಕೋಡನಮಗಾ
ಕಾಲ ತೊಳೆಯನು ಬನ್ನೀರೇ ಅಣ್ಣಾನ ಪಾದ ತೊಳೆಯನು ಬನ್ನೀರೇ...

ಹೀಗೇ ಈರ್ವರ ನಡುವೆ ಮಾತುಕತೆ ಈ ಹಾಡಿನ ರೂಪದಲ್ಲಿ ಮುಂದುವರಿದ ಕೊನೆಗೆ ಸಹೋದರನು ತಂಗಿಗೆ ಹೆಣ್ಣು ಕೊಡುವುದಾಗಿ ಮಾತು ಕೊಡುತ್ತಾನೆ. ಇಲ್ಲಿ ಸಹೋದರತ್ವದ ಸಂಬಂಧದ ಭಾವಿ ಬದುಕಿನಲ್ಲಿ ಮುಂದುವರಿಯುವ ಆಶ್ವಾಸನೆಗಳು ಕಂಡುಬರುತ್ತದೆ.

**ಬಾಗಿಲು ಹಿಡಿಯುವುದು**

ಗಾಣಿಗ ಸಮುದಯದಲ್ಲಿ ಮದುಮಕ್ಕಳಿಗೆ ಮನೆಯ ಬಾಗಿಲೊಳಗೆ ಬಿಡಲಾರದೆ ತಡೆದು ಬಾಗಿಲು ಹಿಡಿಯುತ್ತಾರೆ. ಇದು ಮನೆಯ ಹೆಣ್ಣು ಮಕ್ಕಳಾದ ಮದುಮಗನ ಅಕ್ಕತಂಗಿಯರು ಬಾಗಿಲು ಹಿಡಿಯುತ್ತಾರೆ. ಅಂಥ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಈ ಹಾಡು ಹೇಳುವರು.

**ಬಾಗಿಲ ಹಿಡಿಯುವ ಹಾಡು**

ಆನೆಯ ನಾ ಕೊಡುವೆ ಆನೆಯ ಮರಿಕೊಡುವೆ||
ಹಿಡಿದ ಬಾಗಿಲ ಬಿಡ ತಂಗಿs| ಸೋ
ಆನೆಯ ನಾವಲ್ಲೆ ಆನೆಯ ಮರಿವಲ್ಲೆ
ಹಿಡಿದ ಬಾಗಿಲ ಬಿಡದಿಲ್ಲ| ಸೋ ||೧||

ಕುದುರೆಯ ನಾ ಕೊಡುವೆ ಕುದುರೆಯ ಮರಿ ಕೊಡುವೆ||
ಹಿಡಿದ ಬಾಗಿಲ ಬಿಡ ತಂಗಿs| ಸೋ
ಕುದುರೆ ನಾವಲ್ಲೆ ಕುದುರೆಯ ಮರಿವಲ್ಲೆ
ಹಿಡಿದ ಬಾಗಿಲ ಬಿಡದಿಲ್ಲ| ಸೋ ||೨||

ಒಂಟೆಯ ನಾ ಕೊಡುವೆ ಒಂಟೆಯ ಮರಿ ಕೊಡುವೆ||
ಹಿಡಿದ ಬಾಗಿಲ ಬಿಡ ತಂಗಿs| ಸೋ
ಒಂಟೆಯ ನಾವೆಲ್ಲ ಒಂಟೆಯ ಮರಿ ವಲ್ಲೆ
ಹಿಡಿದ ಬಾಗಿಲ ಬಿಡದಿಲ್ಲ| ಸೋ ||೩||

ಆಕಳ ನಾ ಕೊಡುವೆ ಆಕಳ ಕರ ಕೊಡುವೆ||
ಹಿಡಿದ ಬಾಗಿಲ ಬಿಡತಂಗಿ| ಸೋ

ಆಕಳ ನಾವೆಲ್ಲ ಆಕಳ ಕರವಲ್ಲೆ
ಹಿಡಿದ ಬಾಗಿಲ ಬಿಡದಿಲ್ಲ| ಸೋ ||೪||

ಮಗಳಿಗಿ ನಾ ಹಡಿವೆ ಮಗಳಿ ನಾ ಕೊಡುವೆ||
ಹಿಡಿದ ಬಾಗಿಲ ಬಿಡತಂಗಿ| ಸೋ
ಮಗಳಿಗೆ ಹಡದರ ಮಗಳಿಗಿಗೆ ಕೊಟ್ಟರ
ಹಿಡಿದ ಬಾಗಿಲ ಬಿಡುವನ| ಸೋ ||೫||[೧೦]

ಈ ಮೇಲಿನ ಹಾಡಿನಲ್ಲಿ ಆನೆ, ಕುದುರೆ, ಒಂಟೆ, ಆಕಳು ಮೊದಲಾದವುಗಳು ಕೊಡುತ್ತೇನೆಂದರೆ ಸೋದರಿಯರು ಬಾಗಿಲು ಬಿಡುವುದಿಲ್ಲ. ಆದರೆ ನಮ್ಮ ಮಗಳನ್ನು ನಿನ್ನ ಮಗನಿಗೆ ಕೊಡುತ್ತೇವೆಂದು ವರವಧುಗಳು ಹೇಳಿದರೆ ಅಕ್ಕ ತಂಗಿಯರು ಬಾಗಿಲು ಬಿಡುತ್ತಾರೆ. ಅನಂತರ ಇಬ್ಬರು ದೇವರ ಕೋಣೆಗೆ ಹೋಗಿ ದೇವರಿಗೆ ನಮಸ್ಕರಿಸುವರು.ಈ ಮೇಲಿನ ಹಾಡಿನ ಅರ್ಥ ತಾಯಿ ತೀರಿದ ಮೇಲೆ ತವರು ಮನೆ ದೂರಾಗುತ್ತದೆ. ಆದ್ದರಿಂದ ಸಹೋದರ ಮಕ್ಕಳಿಗೆ ಸಂಬಂಧ ಬೆಳೆಸಿದರೆ ತವರು ಮನೆಯ ನಂಟು ಭದ್ರವಾಗಿ ಉಳಿಯಲು ಸಾಧ್ಯವೆಂದು ಈ ರೀತಿಯಲ್ಲಿ ಭಾಷೆ (ವಚನ) ತೆಗೆದುಕೊಳ್ಳುವರು.

**ಸೋಬನ (ಪ್ರಸ್ತ)**

ಗಾಣಿಗ ಸಮುದಾಯದಲ್ಲಿ ಈ ಸೋಬನ ಕಾರ್ಯವನ್ನು ನಡೆಸುತ್ತಾರೆ. ಕೊಪ್ಪಳ, ದಾವಣಗೆರೆ, ಧಾರವಾಡ, ಗದಗ, ಬಾಗಲಕೋಟೆ, ಬಾದಾಮಿ, ಬಳ್ಳಾರಿ ಜಿಲ್ಲೆಗಳಲ್ಲಿ ಈ ಸಮುದಾಯದ ತಮ್ಮ ವೃತ್ತಿಗಳಲ್ಲಿ ಹೇಗೆ ನಿಷ್ಠೆ ಶ್ರದ್ಧೆಗಳನ್ನು ವಹಿಸುತ್ತಾರೋ ಹಾಗೆಯೇ ತಮ್ಮ ಆಚಾರ-ವಿಚಾರ ನಡವಳಿಕೆ ಸಂಪ್ರದಾಯಗಳಲ್ಲೂ ಕೂಡ ಎಂದರೆ ಅತಿಶಯೋಕ್ತಿಯಾಗಲಾರದು.

ಗಂಡು ಹೆಣ್ಣುಗಳ ಜೀವನದಲ್ಲಿ ಸಂಭ್ರಮದ ಘಟ್ಟ ಎನ್ನಬಹುದು. ಮೈನೆರೆದಾಗ ಹೆಣ್ಣಿಗೆ ಭಯ, ನಡುಕ, ಜವಾಬ್ದಾರಿಯ ಭೀತಿ, ಮದುವೆಯಾದ ಮೇಲೆ ಸಂತೋಷಗೊಂಡರೂ ಒಳಗೊಳಗೇ ಕೊರಗು. ಗಂಡ ಎಂಥವನೋ, ಹೇಗೆ ನಡೆಸಿಕೊಳ್ಳುತ್ತಾನೋ, ಮುಂದೆ ಸುಖ, ಸಂತೋಷ, ಸಂತಾನಾದಿ ಭಾಗ್ಯ ಲಭಿಸುತ್ತದೆಯೋ ಇಲ್ಲವೋ ಎಂಬೆಲ್ಲ ಭಯ, ಅನುಮಾನ. ಆದರೆ, ಇವೆಲ್ಲ ಪ್ರಸ್ತುತ ಕಾರ್ಯಕ್ರಮ ಹತ್ತಿರ ಹತ್ತಿರವಾದಂತೆಲ್ಲಾ ಮಾಯ. ಈ ಮೊದಲ ರಾತ್ರಿಯ ಸಮಾಗಮದಲ್ಲಿಯೂ ಹೆಣ್ಣಿಗೆ ಒಳಗೊಳಗೆ ಹೆದರಿಕೆ, ಭಯ ಭೀತಿ ಇಲ್ಲದಿಲ್ಲ. ಆದರೆ, ಅವೆಲ್ಲ ಗಂಡನನ್ನು ಅರ್ಥಮಾಡಿಕೊಂಡ ಮೇಲೆ ಕ್ಷಣಮಾತ್ರದಲ್ಲಿ ಮಾಯ. ಆ ರೀತಿ ಅರ್ಥಮಾಡಿಕೊಳ್ಳುವ ಶಕ್ತಿ ಹೆಣ್ಣಿಗಿರುತ್ತದೆ.

ಈ ಕಾರ್ಯ ನಡೆಯುವುದು ಮದುವೆಯಾಗಿ ಹದಿನಾರು ಅಥವಾ ಮೂರು ತಿಂಗಳಿಗೆ, ಹಾಗಾಗಿ ಸೋಬನಕ್ಕೆ ತಿಂಗಳಶಾಸ್ತ್ರ ಎಂದು ಕರೆಯುತ್ತಾರೆ. ಇಷ್ಟು ದಿನಗಳವರೆಗೆ ಹೆಣ್ಣು ಗಂಡಿನ ಜೊತೆಗೆ ಓಡಾಡಿರುವುದರಿಂದ ಸಂಕೋಚ ಭಯ ನಿವಾರಣೆಯಾಗಿರುತ್ತದೆ. ಗಾಣಿಗರ ಹೆಣ್ಣುಮಕ್ಕಳಿಗೆ ಹತ್ತು ಹನ್ನೆರಡು

ವರ್ಷಗಳು ತುಂಬಿಬಿಟ್ಟರೆ ಆಕಾಶವೇ ಕಳಚಿ ಬಿದ್ದಂತೆ ವರ್ತಿಸುತ್ತಾರೆ. ಈಗಿನ ಕಾಲದಲ್ಲಿ ಬಾಲ್ಯ ವಿವಾಹ ನಿಷಿದ್ಧ. ಈ ಕಾನೂನನ್ನು ಬಿಟ್ಟು ಆಲೋಚನೆ ಮಾಡಿದರೆ, ಭಾರತೀಯರು 'ಶೀಲದ' ಬಗ್ಗೆ ಹೆಚ್ಚಿನ ಗಮನ ಕೊಡುತ್ತಾ ಬಂದಿದ್ದಾರೆ. ಶೀಲವೆಂಬುದು ಗಂಡು ಹೆಣ್ಣಿಗೆ ಇಬ್ಬರಿಗೂ ಅನ್ವಯಿಸುತ್ತದೆ. ಶೀಲವಂತರಾಗಿರಬೇಕು ಎಂದರೆ ಬಾಲ್ಯದಲ್ಲಿಯೇ ಹೆಣ್ಣು ಗಂಡನ್ನು ಮದುವೆ ಮಾಡಿದರೆ ಲೈಂಗಿಕ ಪ್ರವೃತ್ತಿ ಹದ್ದು ಬಸ್ತಿನಲ್ಲಿರುತ್ತದೆ ಎಂಬ ಹಲವಾರು ಕಾರಣಗಳಿರಬಹುದು. ಗಾಣಿಗರು ಹೆಚ್ಚಾಗಿ ಶ್ರಮದತ್ತವಾದ ರೈತಾಪಿ ಜೀವನ ನಡೆಸುವುದರಿಂದ, ವಯಸ್ಸಾದಂತೆ ಕೆಲಸ ಮಾಡಲಾಗುವುದಿಲ್ಲ. ಅಷ್ಟರಲ್ಲಿಯೇ ಮಗನನ್ನು ಮದುವೆ ಮಾಡಿದರೆ ಒಳ್ಳೇದು. ಗಟ್ಟಿಯಾಗಿರುವಾಗಲೇ ಮಗ ಕೈ ನೆರವಿಗೆ ಬರುತ್ತಾನೆ ಎಂಬ ಹಂಬಲವಿರಬಹುದು. ಕೆಲವು ಸಮುದಾಯಗಳಲ್ಲಿ ಋತುಮತಿಯಾದ ಮೇಲೆ ಹೆಣ್ಣು ಮಕ್ಕಳಿಗೆ ಮದುವೆ ಗೊತ್ತಾದರೆ ಮದುವೆಯ ದಿನವೇ ರಾತ್ರಿ ಸೋಬನ ಶಾಸ್ತ್ರವನ್ನು ಮಾಡಿಬಿಡುತ್ತಿದ್ದರು.

ಈ ಸಮುದಾಯದಲ್ಲಿ ಸೋಬನದ ಶಾಸ್ತ್ರ ಹೆಣ್ಣಿನ ಮನೆಯಲ್ಲಿ ನಡೆಯುತ್ತದೆ. ಗೊತ್ತಾದ ದಿನ ಹೆಣ್ಣಿನ ಮನೆಯವರು ಬಣ್ಣ ಬಣ್ಣದ ಚಾಪೆ, ತಡಿ, ದಿಂಬು, ರಗ್ಗು ಮುಂತಾದವುಗಳನ್ನು ತರುತ್ತಾರೆ. ಸಂಜೆ ಊಟವಾದ ಮೇಲೆ ಮಧು ಮಕ್ಕಳನ್ನು ಒಂದು ಕೋಣೆಯಲ್ಲಿ ಹೆಣ್ಣಿನ ಮನೆಯವರು ತಂದ ಚಾಪೆ ಅಥವಾ ತಡಿಯನ್ನು ಹಾಸಿ ದಿಂಬನ್ನು ಹಾಕಲಾಗುತ್ತದೆ. ಆರತಿ ತಟ್ಟೆ, ನೀರು, ಹಣ್ಣು ಹಂಪಲು ಇಟ್ಟಿರುತ್ತಾರೆ. ಮದುಮಗಳು ಹಾಲನ್ನು ಕೈಯಲ್ಲಿ ಹಿಡಿದುಕೊಂಡು ಮುತ್ತೈದೆಯ ರೊಟ್ಟಿಗೆ ಕರೆತಂದು ಕೋಣೆಯೊಳಗೆ ಕಳುಹಿಸಿ ಬಾಗಿಲು ಹಾಕಿಕೊಳ್ಳುವರು. ಮಾರನೆಯ ದಿನ ಬೆಳಿಗ್ಗೆ ಹಂದರ ಇಳಿಸಲಾಗುತ್ತದೆ. ಹೀಗೆ ಸೋಬನ ಕಾರ್ಯಕ್ರಮ ಮುಕ್ತಾಯವಾಗುತ್ತದೆ. (ತ.ಚಿ. ಚಲುವೇಗೌಡ, ೧೯೭೭, ಪುಟ ೬೫)

### ನೀರು ಶಾಸ್ತ್ರ

ನೂತನ ಮದುವೆಯಾದ ದಂಪತಿಗಳಿಗೆ ಒಟ್ಟಿಗೆ ಸೇರಿಸಿ ಗಂಡಿನ ಮನೆಯಲ್ಲಿ ಮತ್ತು ಹೆಣ್ಣಿನ ಮನೆಯಲ್ಲಿ ನೀರು ಶಾಸ್ತ್ರ ಮಾಡಿಸುತ್ತಾರೆ. ಈ ಶಾಸ್ತ್ರವು ಹೆಚ್ಚಾಗಿ ನಡೆಯುವುದು ಬುಧವಾರ ಅಥವಾ ಶನಿವಾರ ಪ್ರಾರಂಭಿಸುತ್ತಾರೆ. ಕೊನೆಯ ದಿನ ಬುಧವಾರವೇ ಮುಕ್ತಾಯವಾಗಬೇಕೆಂದು ಹಿರಿಯರು ಹೇಳುತ್ತಾರೆ.

ನಂತರ ಅಳಿಯನನ್ನು ಮದುವೆಯ ನಂತರ ಪ್ರಥಮ ಬಾರಿಗೆ ಕರೆದುಕೊಂಡು ಹೋಗುತ್ತಾರೆ. ಅದಕ್ಕೆ ಮಾಮನಿ (ಮನೆ ಹುಗ್ಗುವುದು) ಎಂದು ಕರೆಯುತ್ತಾರೆ. ಕರೆದುಕೊಂಡು ಹೋಗುವ ಉದ್ದೇಶ ಹೆಣ್ಣಿನ ಸಂಬಂಧಿಕರು ಅಳಿಯನಿಗೆ ಸರಿಯಾಗಿ ನೋಡದ ಕಾರಣದಿಂದ ಅಥವಾ ಹಲವು ಕಾರಣದಿಂದ ವಧುವಿಗೆ ಬರದವರಿಗೆ ಅಳಿಯನನ್ನು ನೋಡುವ ಅವಕಾಶಕ್ಕೆ ಮನೆ ಹುಗ್ಗುವುದು ಎಂದು ಕರೆಯುತ್ತಾರೆ. ನಂತರ ನೂತನ ದಂಪತಿಗಳಿಗೆ ಹಸಿಯ ಮಣೆಯ ಮೇಲೆ ಕೂಡಿಸಿ ಮುಖ, ಮುಂಗೈಗೆ ಮುತ್ತೈದೆಯರು. ಅರಿಶಿಣ ಹಚ್ಚಿ ನೀರಿನಿಂದ ಮೈ ತೊಳೆಯುತ್ತಾರೆ. ನಂತರ ಆರತಿ ಬೆಳಗಿ ಅಳಿಯನಿಗೆ ಉಡುಗೊರೆ ನೀಡುತ್ತಾರೆ.

## ವಿವಾಹ ಪದ್ಧತಿ

ವಿವಿಧ ಸಮಾಜಗಳಲ್ಲಿ ವಿವಾಹ ಪದ್ಧತಿ ಒಂದೇ ತೆರನಾಗಿಲ್ಲ. ದೇಶ, ಕಾಲ, ಪರಿಸ್ಥಿತಿಗೆ ತಕ್ಕಂತೆ ವಿವಾಹಗಳು ಬೇರೆ ಬೇರೆ ರೂಪಗಳನ್ನು ಧರಿಸಿವೆ. ಇತರ ಎಲ್ಲಾ ಸಮುದಾಯಗಳಂತೆ ಗಾಣಿಗರಲ್ಲಿಯೂ ಅನೇಕ ಬಗೆಯ ವಿವಾಹಗಳು ರೂಢಿಯಲ್ಲಿವೆ. ಅವುಗಳೆಂದರೆ

## ಬಹುಪತ್ನಿತ್ವ

ಒಬ್ಬನು ಒಬ್ಬಳಿಗಿಂತ ಹೆಚ್ಚು ಸ್ತ್ರೀಯರನ್ನು ಮದುವೆಯಾಗುವ ಸಂಪ್ರದಾಯ ಗಾಣಿಗರಲ್ಲಿ ಕಂಡು ಬರುವುದಿಲ್ಲ. ಇವರು ಏಕಪತ್ನಿ ವ್ರತಸ್ಥರಾಗಿರುತ್ತಾರೆ. ಆದರೆ ಕೆಲವು ಸಂದರ್ಭದಲ್ಲಿ ಎರಡು ಮದುವೆಯಾಗುತ್ತಾರೆ. ಏಕೆಂದರೆ ಮೊದಲ ಹೆಂಡತಿಯಿಂದ ಮಕ್ಕಳು ಪ್ರಾಪ್ತಿಯಾಗದಿದ್ದಲ್ಲಿ ನಮ್ಮ ವಂಶಕ್ಕೆ ವಾರಸುದಾರ ಬೇಕಾಗುತ್ತದೆ ಎಂಬ ಉದ್ದೇಶದಿಂದ ಮೊದಲನೆಯ ಹೆಂಡತಿಯ ಅನುಮತಿಯೊಂದಿಗೆ ಮತ್ತೊಬ್ಬಳ ಹೆಣ್ಣುಮಗಳನ್ನು ಮದುವೆ ಮಾಡಿಕೊಳ್ಳುವ ಹಲವಾರು ಉದಾಹರಣೆಗಳು ಗಾಣಿಗರಲ್ಲಿ ಕಂಡು ಬರುತ್ತವೆ. ಆದರೆ ಇಂದಿನ ಸಂದರ್ಭದಲ್ಲಿ ಹೆಚ್ಚಾಗಿ ಕಾಣುತ್ತಿಲ್ಲ. ಏಕೆಂದರೆ ಮಕ್ಕಳಾಗದ ಕಾರಣವನ್ನು ತಿಳಿದು ವೈದ್ಯರನ್ನು ಕಂಡು ಸಲಹೆ ಮೇರೆಗೆ ನಡೆದು ಮಕ್ಕಳು ಪಡೆಯುತ್ತಿರುವುದರಿಂದ ಬಹುಪತ್ನಿತ್ವ ಹೆಚ್ಚಾಗಿ ಇವರಲ್ಲಿ ಕಾಣುವುದಿಲ್ಲ ಎನ್ನಬಹುದಾಗಿದೆ.

## ವಿವಾಹ ವಿಚ್ಛೇದನ

ಗಾಣಿಗರಲ್ಲಿ ವಿವಾಹ ವಿಚ್ಛೇದನ ಕಂಡು ಬರುವುದಿಲ್ಲ. ಏಕೆಂದರೆ ಸಮಾಜದಲ್ಲಿ ಗೌರವಸ್ಥಾನವನ್ನೇ ಹೊಂದಿರುವುದಕ್ಕಾಗಿ, ಅಲ್ಲದೇ ಸಮಾಜವೇ ತಿದ್ದಿ ಸನ್ಮಾರ್ಗದೆಡೆಗೆ ತರುವ ಜನರು ಇಂತಹ ಕಾರ್ಯಕ್ಕೆ ತುಂಬ ಹೆದರುತ್ತಾರೆ. ಜಗಳವಾಡಿ ಹೆಂಡತಿ ತವರು ಮನೆಯಲ್ಲಿ ಬಹಳ ದಿವಸಗಳೂ ಇದ್ದರೂ ಮತ್ತೇ ಒಳ್ಳೆಯ ಹಿರಿಯ ವ್ಯಕ್ತಿಗಳ ಮೂಲಕ ಅವಳಿಗೆ ಅವನಿಗೆ ಮನೆಯವರೆಲ್ಲ ಅವರ ಸಮಸ್ಯೆಯನ್ನು ಪರಿಹರಿಸಿ ಮತ್ತೆ ಗಂಡನ ಮನೆಗೆ ಕರಕೊಂಡು ಬರುವುದು ಹೆಚ್ಚಾಗಿದೆ. ಆದರೆ ವಿವಾಹ ವಿಚ್ಛೇದನ ಮಾಡುವುದಿಲ್ಲ. ಆದರೂ ಗಂಡಿನವರಿಗೂ ಹೆಣ್ಣಿನವರಿಗೂ ಹೊಂದಿಕೆಯಾಗಲಾರದ ಸಂದರ್ಭದಲ್ಲಿ ವಿವಾಹ ವಿಚ್ಛೇದನಗಳು ಕಂಡುಬರುವುದಿಲ್ಲ. ಕೆಲವೊಂದು ಸಂದರ್ಭದಲ್ಲಿ ಆಗಿರುವ ವಿಚ್ಛೇದನಗಳು ಕಡಿಮೆ ಪ್ರಮಾಣದಲ್ಲಿ ಕಂಡುಬರುತ್ತವೆ.

## ಪುನರ್ವಿವಾಹ

ಈ ಸಮುದಯದಲ್ಲಿ ಮೊದಲನೆ ಹೆಂಡತಿಗೆ ಸಂತಾನ ಪ್ರಾಪ್ತಿಯಾಗದಿದ್ದಲ್ಲಿ ಅಥವಾ ಕಾರಣಗಳಿಂದ ಹೆಂಡತಿಯನ್ನು ವಿಚ್ಛೇದನ ಮಾಡಿದಲ್ಲಿ, ಮರಣ ಹೊಂದಿದಲ್ಲಿ ಪುನರ್ವಿವಾಹ ಮದುವೆಯಾಗುತ್ತದೆ. ಮೊದಲಿನ ಅಂದರೆ ಹಿಂದಕ್ಕೆ ಬಾಲ್ಯ ವಿವಾಹ ಬಳಕೆ ಹೆಚ್ಚಾಗಿತ್ತು. ಗಂಡಿಗೂ ಹೆಣ್ಣಿನಲ್ಲಿ ಅಂತರಗಳು ಹೆಚ್ಚಾಗಿ ಕಂಡುಬರುತ್ತಿದ್ದವು. ಹೀಗಾಗಿ ಕೂಡುವುದಕ್ಕೆ ಬದಲಾಗಿ ದೂರ ಇರುವಂತೆಯಾಗುತ್ತಿತ್ತು. ಹೀಗೆ

ಅನೇಕ ಕಾರಣಗಳಿಂದ ಪುನರ್ವಿವಾಹ ನಡೆಯುತ್ತಿದೆ. ಈಗ ಸರ್ಕಾರದವರು ಬಾಲ್ಯ ವಿವಾಹವನ್ನು ನಿಷೇಧಿಸಿದ್ದರಿಂದ ಇಂತಹ ಮದುವೆಗಳು ಇವರಲ್ಲಿ ನಿಂತು ಹೋಗಿವೆ.

**ವಿಧವಾ ವಿವಾಹ**

ಹೆಂಡತಿ ಸತ್ತು ಹೋಗಿದ್ದರಿಂದ ವಿಧುರ ಮದುವೆಯಾಗುತ್ತಾನೆ. ವಿಧವಾ ವಿವಾಹ ಗಾಣಿಗರಲ್ಲಿ ಹೆಚ್ಚಾಗಿ ನಡೆಯುವುದಿಲ್ಲ. ವಿಧುರನಿಗೆ ನಡೆಯುತ್ತದೆ. ವಿಧವೆಗೂ ಮರು ಮಧುವೆ ನಡೆಯುತ್ತದೆ. ಆದರೆ ಅವಳ ಸಾಮಾಜಿಕ ಸ್ಥಾನಮಾನ ಕಡಿಮೆಯಾಗಲು ಮದುವೆಯಾದ ಮೇಲೆ ಹಣೆಗೆ ಕುಂಕುಮ ಕೊರಳಲ್ಲಿ ಮಂಗಲಸೂತ್ರ ಮುಡಿಗೆ ಹೂವು, ಕಾಲಲ್ಲಿ ಕಾಲುಂಗರ ಇಟ್ಟುಕೊಳ್ಳುವಂತಿಲ್ಲ. ಆದರೆ ಇಂದು ಮೊದಲಿನ ಮದುವೆಯಂತೆ ಇಟ್ಟುಕೊಳ್ಳುತ್ತಿದ್ದಾರೆ. ಈ ಮದುವೆ ತಮ್ಮ ಮನೆಯ ಸ್ವಾಮಿಗಳವರ ನೇತೃತ್ವದಲ್ಲಿ ವಿಧಿವತ್ತಾಗಿ ಜರುಗುತ್ತದೆ. ಆದರೆ ಮೊದಲನೆ ವಿವಾಹದಂತೆ ಸುಂದರವಾಗಿ ಕಂಡುಬರುವುದಿಲ್ಲ. ಮದುವೆ ಮನೆಯಲ್ಲಿ ನಡೆಯುವುದರ ಬದಲಾಗಿ ದೇವರ ಮಂದಿರದಲ್ಲಿ, ಮದುವೆ ಮಂಟಪದಲ್ಲಿ ನಡೆಯುತ್ತಿದೆ. ಇದನ್ನು 'ಗಂಡು ಹೆಣ್ಣುಗಳ ಕೂಡುವಿಕೆ'ಯೆಂದು ಕರೆಯುತ್ತಾರೆ. ಇದರಿಂದ 'ಕೂಡಿಕೆ ಉಡಿಕೆ' ಎಂದು ಕರೆಯುವುದುಂಟು. ವಿಧವೆಯ ಹೆಣ್ಣಿಗೆ ಮುಂದೆ ಸಮಾಜದಲ್ಲಿ ಒಳ್ಳೆಯ ಕಾರ್ಯದಲ್ಲಿ ಭಾಗವಹಿಸಲಿಕ್ಕೆ ಅರ್ಹಳಿಲ್ಲವಾಗಿರುತ್ತದೆ. ಮತ್ತೆ ಸಮುದಾಯದ ಮನೆಯಲ್ಲಿ ನಡೆಯುವ ಕಾರ್ಯಕ್ರಮದಲ್ಲಿ ಯಾವುದೇ ಕಾರ್ಯಕ್ರಮವನ್ನು ನೆರವೇರಿಸಲು ಬರುವುದಿಲ್ಲ. ಇದರಿಂದ ಅವಳು ವಂಚಿತಳಾಗುತ್ತಾಳೆ. ಇಂದು ಗಾಣಿಗರಲ್ಲಿ ಕೆಲವೊಂದು ಮಾತ್ರ ನೋಡಬಹುದಾಗಿದೆ. ಹೆಚ್ಚಾಗಿ ಗಾಣಿಗರ ಕ್ರಿಯೆಗಳನ್ನು ಮಾಡುವ ಗಾಣಿಗರು ವಿಧವೆ ಹೆಣ್ಣನ್ನು ಮಾಡಿಕೊಳ್ಳುವುದಿಲ್ಲ. ಆದರೆ ಇಂದು ಅಂತಹ ಹೆಣ್ಣುಮಗಳಿಗೆ ಬಾಳು ಕೊಡಬೇಕು ಎಂದು ತಿಳಿದು ಕೆಲವು ಗಾಣಿಗರು ಹುಡುಗರು ಮದುವೆಯಾಗಿದ್ದು ಕಡಿಮೆ ಎಂದು ಹೇಳಬಹುದಾಗಿದೆ. ಇಂತಹ ನೇಮಗಳು ಇವರಲ್ಲಿ ಇಲ್ಲವಾದರೂ ಸಮಾಜದ ಪರಿವರ್ತನೆಗಳಲ್ಲಿ ಮೇಲಿನ ಅಂಶಗಳು ಸೇರಿಕೊಂಡಂತೆ ಕಂಡುಬರುತ್ತದೆ.[೨]

**ಮುಯ್ಯಿ ಹಾಕುವುದು**

ಲಿಂಗಾಯಿತ ಗಾಣಿಗರಲ್ಲಿ ಮುಯ್ಯಿ ಹಾಕುವ ಪದ್ಧತಿಯಿದೆ. ಅದನ್ನವರು ಒಂದು ಸಂಪ್ರದಾಯವನ್ನಾಗಿ ಬೆಳಸಿಕೊಂಡು ಬಂದಿದ್ದಾರೆ. ಕೆಲವರು ಮುಯ್ಯಿ ಹಾಕುವುದಕ್ಕೆಂದೇ ಮದುವೆಗೆ ಬರುವುದೂ ಉಂಟು. ಇನ್ನು ಕೆಲವರು ತಾವು ಮದುವೆಗೆ ಹೋಗುವುದಕ್ಕಾಗದಿದ್ದಾಗ ಬೇರೆಯವರೊಂದಿಗೆ ಮುಯ್ಯಿನ ಹಣವನ್ನು ಕಳುಹಿಸಿಕೊಡದೆ ಇರುವುದಿಲ್ಲ. ಈ ಮುಯ್ಯಿ ಹಣ, ವಿಧ ವಿಧದ ವಸ್ತುಗಳು ಹಾಗೂ ಬಟ್ಟೆಯ ರೂಪದಲ್ಲಿರುತ್ತದೆ. ಗಂಡು ಹೆಣ್ಣಿನ ಕಡೆಯವರು ಪ್ರತ್ಯೇಕವಾಗಿ ಮುಯ್ಯಿ ಪಟ್ಟಿ ಬರೆದುಕೊಳ್ಳುತ್ತಾರೆ. ಎಂದರೆ ಇಂಥವರು ಇಂತಿಷ್ಟು ಹಣ ಅಥವಾ ವಸ್ತುವನ್ನು ಇಂಥವರಿಗೆ ಮುಯ್ಯಿ ಕೊಟ್ಟಿದ್ದಾರೆ ಎಂಬುದನ್ನು ಒಂದು ಪುಸ್ತಕದಲ್ಲಿ ಬರೆದಿಡುತ್ತಾರೆ. ಇವರು ಇತರರ ಮದುವೆಗಳಿಗೆ ಹೋಗುವಾಗ ಈ ಮುಯ್ಯಿ ಪಟ್ಟಿಯನ್ನೊಮ್ಮೆ ಪರಿಶೀಲಿಸಿ ಇವರ ಮನೆ ಮದುವೆಯಲ್ಲಿ ಅವರು ಏನು ಅಥವಾ ಎಷ್ಟು ಮುಯ್ಯಿ

ಹಾಕಿದ್ದಾರೋ, ಅದಕ್ಕಿಂತ ಸ್ವಲ್ಪ ಹೆಚ್ಚಿಗೆ ಹಾಕುವುದು ಪದ್ಧತಿ. ಒಂದು ವೇಳೆ ಅವರು ಮುಯ್ಯಿ ಹಾಕದೇ ಇದ್ದರೆ ಇವರು ಕೂಡ ಹಾಕದೆಯೇ ಇರುವುದುಂಟು.

ನವದಂಪತಿಗಳಿಗಾಗಿ ಸಿದ್ಧಪಡಿಸಿರುವ ಆಸನಗಳಲ್ಲಿ ಇವರು ಸರ್ವಾಲಂಕಾರ ಭೂಷಿತರಾಗಿ ಬಂದು ಕುಳಿತುಕೊಳ್ಳುತ್ತಾರೆ. ಆನಂತರ ಹೆಣ್ಣು ಮತ್ತು ಗಂಡಿನ ಕಡೆಯವರು, ಕಳಸದವರು ಮತ್ತು ಆರತಿಯವರು ಬಂದು ಕಳಸಾರತಿಯನ್ನು ವಧೂವರರ ಮುಂದೆ ಮಣೆಗಳ ಮೇಲಿಟ್ಟು, ಅವುಗಳ ಪಕ್ಕದಲ್ಲಿ ಎರಡು ದೊಡ್ಡ ಹರಿವಾಣಗಳನ್ನಿಡುತ್ತಾರೆ. ಜನರು ಒಬ್ಬೊಬ್ಬರಾಗಿ ಸಾಲಿನಲ್ಲಿ ಬಂದು ವಧುವರರ ಮೇಲೆ ಅಕ್ಷತೆಯನ್ನು ಎರಚಿ ಹಣೆಗೆ ಅಕ್ಷತೆಗಳನ್ನು ಇಟ್ಟು ಹರಸಿ, ಮುಯ್ಯಿ ಪಟ್ಟಿಗಳಲ್ಲಿ ತಮ್ಮ ಹೆಸರನ್ನು ಬರೆಸಿ, ಮುಯ್ಯಿ ಬರೆಯುವರ ಕೈಯಲ್ಲಿ ಕೊಟ್ಟು ಹೋಗುತ್ತಾರೆ. ಹಾಗೆ ಮುಯ್ಯಿ ಹಾಕಿದ ಪ್ರತಿಯೊಬ್ಬರಿಗೂ ಬಾಳೆಹಣ್ಣು ಮತ್ತು ಎಲೆ ಅಡಕೆಯ ವೀಳ್ಯ ಕೊಡುತ್ತಾರೆ. ಆನಂತರ ಮದುವೆಗೆ ಬಂದವರೆಲ್ಲರಿಗೂ ಧಾರೆಯೂಟ ನಡೆಯುತ್ತದೆ. ಇದು ಹಲವಾರು ಸಿಹಿಯೂಟ ಮಾತ್ರ. ಊಟವಾದನಂತರ ಪುನಃ ಎಲ್ಲರಿಗೂ ಬಾಳೆಹಣ್ಣು ಮತ್ತು ತಾಂಬೂಲವನ್ನು ವಿತರಿಸುತ್ತಾರೆ. ಮುಯ್ಯಿ ಬಂದ ಹಣ ಮತ್ತು ವಸ್ತುಗಳಲ್ಲಿ ಗಂಡಿಗೆ ಬಂದದ್ದನ್ನು ಆತನ ತಾಯಿ ತಂದೆ ಇಟ್ಟುಕೊಳ್ಳುತ್ತಾರೆ. ಆದರೆ ಕೆಲವೊಮ್ಮೆ ಹೆಣ್ಣಿಗೆ ಬಂದ ಮುಯ್ಯಿನಲ್ಲಿ ಸ್ವಲ್ಪ ಭಾಗವನ್ನು ತಂದೆ ತಾಯಿಯವರು ಅವಳಿಗೇ ಕೊಟ್ಟು ಕಳುಹಿಸುವುದುಂಟು.

**೫.೫. ಸೀಮಂತ**

ಬಿಮ್ಮನಿಸಿಯಾದ ಹೆಣ್ಣಿಗೆ ಇಷ್ಟವಾದ ಊಟಗಳನ್ನು ಮಾಡಿ ಇಕ್ಕುವುದನ್ನು 'ಬಯಕೆ' ಸೀಮಂತ, 'ಮಾಡಿಕ್ಕುವುದು' ಮುಂತಾಗಿ ಕರೆಯುತ್ತಾರೆ. ತಮ್ಮ ಮಗಳು ಚೊಚ್ಚಲ ಬಸುರಾದಳೆಂದರೆ ಅವಳ ತಂದೆ ತಾಯಿಯರಿಗೆ ಎಲ್ಲಿಲ್ಲದ ಸಂಭ್ರಮ. ತಾವು ಅಜ್ಜ, ಅಜ್ಜಿಯರಾಗುತ್ತಾವೆಂಬ ಬಿಗುಮಾನ ಒಂದೆಡೆಯಾದರೆ, ತಮ್ಮ ವಂಶದ ಕುಡಿ ಚಿಗುರಿಟ್ಟು ಬೆಳೆಯುವುದಕ್ಕೆ ಕಾರಣವಾಯಿತಲ್ಲ ಎಂಬ ಸಂತೋಷ ಇನ್ನೊಂದೆಡೆ. ಹಾಗಾಗಿ ಅವರು ತಮ್ಮ ಮಗಳು ಬಿಮ್ಮನಿಸಿಯಾಗಿ, ಆರು ತಿಂಗಳು ತುಂಬಿ ಏಳನೆಯ ತಿಂಗಳಿಗೆ ಬೀಳುವುದನ್ನೇ ಕಾಯುತ್ತಿರುತ್ತಾರೆ.

'ಮೂರು ತಿಂಗಳಲ್ಲದೆ ಬಾಣಂತಿಯಲ್ಲ, ಆರು ತಿಂಗಳಲ್ಲದೆ ಬಸುರಿಯಲ್ಲ' ಎಂಬ ನಾಣ್ಣುಡಿಯೇ ಇವರಲ್ಲಿ ಪ್ರಚಲಿತವಾಗಿದೆ. ಎಂದರೆ, ಆರು ತಿಂಗಳು ತುಂಬುವವರೆಗೂ ಗರ್ಭದಲ್ಲಿನ ಮಗುವಿನ ಬೆಳವಣಿಗೆ ಪೂರ್ಣವಾಗಿರುವುದಿಲ್ಲವಾದ್ದರಿಂದ ಏಳನೆಯ ತಿಂಗಳಲ್ಲಿ ಈ ಶಾಸ್ತ್ರ ಮಾಡುತ್ತಾರೆ. ಹಾಗೆ ಏಳನೆಯ ತಿಂಗಳಲ್ಲಿ ಕಾಲಿಟ್ಟಕೂಡಲೇ ತೌರಿನವರು ಜಂಗಮರಿಂದ ಒಂದು ಒಳ್ಳೆಯ ದಿನವನ್ನು ತಿಳಿದುಕೊಂಡು ಅಂದು ಅವರ ತಮ್ಮ ಅಕ್ಕ ಪಕ್ಕದವರು, ನೆರೆ ಹೊರೆಯವರು ಮತ್ತು ಬಂಧುಗಳೊಂದಿಗೆ ಅಳಿಯ ಮತ್ತು ಮಗಳ ಮನೆಗೆ ಹೋಗುತ್ತಾರೆ. ಅದೊಂದು ಸಂಭ್ರಮದ ಸಮಾರಂಭ.

ಅಂದು ಗರ್ಭಿಣಿಗೆ ಎಣ್ಣೆಸ್ನಾನ ಮಾಡಿಸಿ, ಒಡವೆ ವಸ್ತುಗಳಿಂದ (ಹೊಸಸೀರೆ) ಅಲಂಕರಿಸಿ ಒಂದೆಡೆ ಚಾಪೆಯ (ಕಣತ) ಮೇಲೆ ಕೂರಿಸುತ್ತಾರೆ. ಆನಂತರ ಮುತ್ತೈದೆಯರು ಅವರಿಗೆ ಅಂದರೆ ಗಂಡ

ಹೆಂಡತಿಯವರಿಬ್ಬರನ್ನು ಕೂರಿಸಿ ಆರತಿ ಬೆಳಗಿ, ಅಕ್ಷತೆ ಇಟ್ಟು ತವರಿನಿಂದ ತಂದಿದ್ದ ಅಕ್ಕಿ, ಬೆಲ್ಲ, ಅಡಕೆ, ಎಲೆ, ಅರಶಿಣಕೊಂಬು ಮುಂತಾದವನ್ನು ಇಟ್ಟು ಗರ್ಭಿಣಿಯ ಬೊಕ್ಕಲು ತುಂಬುತ್ತಾರೆ. ಅಲ್ಲದೆ, ಅಂದು ಮಾಡಿದ ಅಡುಗೆಗಳು, ತಿಂಡಿತಿನಿಸುಗಳು, ಹಣ್ಣು ಮುಂತಾದವುಗಳನ್ನೆಲ್ಲ ಗರ್ಭಿಣಿಯ ಮುಂದೆ ಇಡುತ್ತಾರೆ. ಅವನ್ನೆಲ್ಲ ನೋಡಿ ಆಕೆಯ ಬಯಕೆಗಳೆಲ್ಲ ಪೂರ್ತಿಯಾಗಲಿ ಎಂಬ ದೃಷ್ಟಿಯಿಂದ ಹಾಗೆ ಮಾಡುತ್ತಾರೆ. ಆನಂತರ ಅಲ್ಲಿಂದ ಏಳಿಸಿ, ಅಡುಗೆ ಮನೆಗೆ ಕರೆತಂದು ಒಂದೆಡೆ ಕೂರಿಸಿ, ಅಂದು ಮಾಡಿದ ಬಗೆಬಗೆಯ ಅಡುಗೆಗಳನ್ನು ಬಡಿಸಿ ಆಕೆಗೆ ಊಟ ಮಾಡಿಸುತ್ತಾರೆ. ಸಿಹಿ ಅಡುಗೆಗಳಿಗೆ ಅಂದು ವಿಶೇಷ ಆದ್ಯತೆ. ಆ ದಿವಸ ಅಡುಗೆಗೆ ಬೇಕಾಗುವ ಏನೆಲ್ಲಾ ವಸ್ತುಗಳನ್ನು ತವರಿನವರೇ ತಂದಿರುತ್ತಾರೆ ಮತ್ತು ಅಂದಿನ ಉಳಿದೆಲ್ಲ ಖರ್ಚನ್ನು ಅವರೇ ಬರಿಸುತ್ತಾರೆ. ಸೇರಿದವರೆಲ್ಲರೂ ಒಟ್ಟಾಗಿ ಊಟ ಮಾಡುತ್ತಾರೆ. ತವರಿನವರೆಲ್ಲ ಅಂದು ಅಲ್ಲಿಯೇ ಉಳಿದುಕೊಂಡಿದ್ದ ಮಾರನೆಯ ದಿವಸ ಒಳ್ಳೆಯ ಘಳಿಗೆಯನ್ನು ನೋಡಿಕೊಂಡು ಗರ್ಭಿಣಿಯನ್ನು ಗಂಡನ ಮನೆಯಿಂದ ಹೊರಡಿಸಿ ಕರೆದುಕೊಂಡು ಹೋಗುತ್ತಾರೆ. ಈ ಕಾರ್ಯಕ್ರಮವನ್ನು ಬೆಸ ತಿಂಗಳಿನಲ್ಲಿ (ಸಮಸಂಖ್ಯೆಯ ತಿಂಗಳು) ಹೀಗೆ ಮಾಡುವುದಿಲ್ಲ. ಒಂದು ವೇಳೆ ಏಳನೆಯ ತಿಂಗಳಿನಲ್ಲಿ ಕರೆದುಕೊಂಡು ಹೋಗುವುದಕ್ಕೆ ಆಗದಿದ್ದರೆ, ೮ ತಿಂಗಳು ತುಂಬಿ ಒಂಬತ್ತನೆಯ ತಿಂಗಳು ಪ್ರಾರಂಭವಾದ ಕೂಡಲೇ ಕರೆದುಕೊಂಡು ಹೋಗುತ್ತಾರೆ. ಗರ್ಭಿಣಿಯ ಈ ಬಯಕೆ ಈಡೇರದೇ ಹೋದರೆ, ಆಕೆಯ ಎದೆ ಹಾಲು ಇಂಗಿಹೋಗುವುದೆಂದು ನಂಬುತ್ತಾರೆ. ಮಗಳು ಮನೆಗೆ ಬಂದ ಮೇಲೆ ತವರಿನವರು ಆಕೆಗೆ ಪುಷ್ಟಿಕರವಾದ ಆಹಾರವನ್ನು ಕೊಡುವುದರ ಜೊತೆಗೆ ಅವಳ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳುತ್ತಾರೆ. ಅಲ್ಲಿಯೂ ಕೂಡ ಆಕೆಯ ಬಯಕೆಯ ಅಡುಗೆಗಳನ್ನು ಮಾಡಿ ಇಕ್ಕುತ್ತಾರೆ. ಅಲ್ಲದೆ, ಆಕೆಯ ಹತ್ತಿರದ ಸಂಬಂಧಿಕರು ಮತ್ತು ನೆರೆಹೊರೆಯವರು ಕೂಡ ಬಂದು ಆಕೆಯನ್ನು ನೋಡಿಕೊಂಡು ಹೋಗುವುದರ ಜೊತೆಗೆ ಏನಾದರೂ ಅಡುಗೆಗಳನ್ನು ಮಾಡಿ ತಂದು ಊಟಕ್ಕೆ ಬಡಿಸುತ್ತಾರೆ. ಅಥವಾ ತಮ್ಮ ತಮ್ಮ ಮನೆಗಳಿಗೆ ಕರೆದುಕೊಂಡು ಹೋಗಿ ಉಪಚರಿಸಿ ಕಳುಹಿಸಿಕೊಡುವುದೂ ಉಂಟು.

### ೫.೬. ನಾಮಕರಣ

'ತೊಟ್ಲದಾಗ ಹಾಕುವುದು', 'ನಾಮಕರಣ' ಎಂದೆಲ್ಲಾ ಕರೆಯುವ ಈ ಕಾರ್ಯ ನಡೆಯುವುದು. ಮಗು ಹುಟ್ಟಿದ ೧೧, ೧೩ ಇಲ್ಲವೆ ಹದಿನೈದನೆಯ ದಿವಸಕ್ಕೆ ಇವರಲ್ಲಿ ಹೆಸರಿಡುವುದು ಕಾರ್ಯ ಇಟ್ಟುಕೊಳ್ಳುತ್ತಾರೆ. ಹೆಸರಿಡುವ ದಿವಸ ಮನೆ ಮಾರನ್ನು ಮತ್ತೆ ಸಾರಿಸಿ, ಹಾಸಿಗೆ ಹೊತ್ತಿಗೆಗಳನ್ನು ನೀರಲ್ಲಿ ಹಾಕಿ, ಮನೆ ತುಂಬಿ ಹೊಳೆಯ ನೀರನ್ನು ಇಲ್ಲವೆ ಗೋಮೂತ್ರವನ್ನು ಸಿಂಪಡಿಸುವರು. ಈ ಕಾರ್ಯ ನಡೆಯುವುದು ಸಾಯಂಕಾಲವೇ. ಹೆಸರಿಡುವುದಕ್ಕಿಂತ ಮುಂಚೆ ಜಂಗಮರ ಹತ್ತಿರ ಹೋಗಿ ಮಗುವಿನ ಹುಟ್ಟಿದ ಗಳಿಗೆಯನ್ನು ಕೇಳಿಬರುತ್ತಾರೆ. ಜಂಗಮರು ಹೇಳಿದ ಹೆಸರು ಸರಿಯಿದ್ದರೆ ಅದೇ ಹೆಸರನ್ನು ಇಡುತ್ತಾರೆ. ಇಲ್ಲವಾದರೆ ತಮ್ಮ ಹಿರಿಯರ ಅಥವಾ ಮನೆದೇವರ ಹೆಸರನ್ನು ಇಡುತ್ತಾರೆ. ಮನೆಯಲ್ಲಿ ತವರಿನವರು ತಂದ ತೊಟ್ಟಿಲನ್ನು ಕಟ್ಟಿ ಶೃಂಗರಿಸುತ್ತಾರೆ. ಮನೆ ದೇವರಿಗೆ, ಪೂರ್ವಜರಿಗೆ ಪೂಜೆ ಸಲ್ಲಿಸಿ ಕಾರ್ಯಕ್ರಮ ಪ್ರಾರಂಭಿಸುತ್ತಾರೆ.

ಮಗುವಿಗೆ ತವರಿನವರು ತಂದ ಹೊಸ ಬಟ್ಟೆಯನ್ನು ತೊಡಿಸುತ್ತಾರೆ. ಮಗುವಿನ ಹೆಸರಿಡಲಿಕ್ಕೆ ಗಾಣಿಗರಲ್ಲಿ ಸೋದರತ್ತೆಗೆ ವಿಶೇಷ ಪ್ರಾಧಾನ್ಯತೆ ಇದೆ. ಒಂದು ವೇಳೆ ಸೋದರತ್ತೆ ಇರದಿದ್ದರೆ ಹತ್ತಿರದ ಸಂಬಂಧಿಕರು ಹೆಸರಿಡುತ್ತಾರೆ. ಸೋದರತ್ತೆಗೆ ಪೂರ್ವಜರ ಅಥವಾ ಮನೆದೇವರುಗಳ ಹೆಸರು ಇಡಲಿಕ್ಕೆ ಮೊದಲೇ ಸೂಕ್ಷ್ಮವಾಗಿ ತಿಳಿಸಿರುತ್ತಾರೆ. ಹೆಸರಿಡುತ್ತಿರುವ ಸೋದರತ್ತೆಯ ಡುಬ್ಬ ಬಾರಿಸಲೆಂದೇ ಅನೇಕ ಸೊಸೆಯಂದಿರ ಕೈಗಳು ಕಾದಿರುತ್ತವೆ. ಹೆಸರಿಡುವಷ್ಟರಲ್ಲಿ ಆಕೆಯ ಡುಬ್ಬು ಕೆಂಪಗಾದರೆ ಆಶ್ಚರ್ಯವೇನಿಲ್ಲ. ಹೆಸರಿಡುವ ಮುಂಚೆ ಸೋದರತ್ತೆ ಮಗುವನ್ನು ತೊಟ್ಟಿಲಲ್ಲಿ ಮಲಗಿಸುತ್ತಾಳೆ. ಸೋದರತ್ತೆಯು ಮಗುವಿಗೆ ಹೆಸರು ಸೂಚಿಸಿ ಕಿವಿಯಲ್ಲಿ “ಕುಟಟ್ ಕುರ್ರ್... ಕುಟಟ್ ಕುರ್ರ್” ಎಂದು ಮೂರು ಸಲ ಹೇಳುತ್ತಾಳೆ. ಆಗ ಮುತ್ತೈದೆಯರು ಅವಳ ಬೆನ್ನ (ಡುಬ್ಬು) ತಟ್ಟುವರು. ಮಗುವನ್ನುತೊಟ್ಟಿಲಲ್ಲಿ ಹಾಕಿ ತೂಗಿ ಜೋಗುಳ ಪದಗಳನ್ನು ಹೇಳುತ್ತಾರೆ.

ಉದಾಹರಣೆಗಾಗಿ ಈ ಕೆಳಗಿನ ಒಂದು ಜೋಗುಳ:

ಕುಂಚಗಿ ಕುಲಾಯಿ ಗೊಂಚಲದ ಬಿಳಿಮುತ್ತ
ಚಂದಕನನ ಶ್ರೀ ಕೃಷ್ಣನ ಚಂದಾಗಿ ಹೊಚ್ಚೀರೇ ಜೋ..ಜೋ...

ಹಸರಂಗಿ ಹಾಲ್ಗಡಗ ಕುಸರದ ನಾಗಮುರಗಿ
ಚಂದಕನನ ಬಾಳಾಗ ಚಂದಾಗಿ ಇಡಸ್ಯಾರ ಜೋ..ಜೋ...

ಭಾಜ ಅರಿಶಿಣ ಬೇರು ತೆಯ್ದು ಬಟ್ಟಲ ತುಂಬಿ
ತೀಡಿ ತೀಡಿ ಹಚ್ಚಿದರೆ ಕಾಡಿ ಕಾಡಿ ಅಳತಾನ ಜೋ..ಜೋ...

ಸಕ್ಕರಿ ಪಾಯಸ ಮಾಡಿ ಬೆಳ್ಳಿ ಬಟ್ಟಲ ತುಂಬಿ
ತುತ್ತ ಮಾಡಿ ಉಣಸಿದರೆ ಬಿಕಿ ಬಿಕಿ ಅಳತಾನ ಜೋ..ಜೋ...

ನೀರಾಗ ನೆಳನೋಡಿ ಸೂರ್ಯ ಚಂದ್ರಮ ಬೇಡಿ
ಅದರಂತೆ ತಾ ಬೇಡಿ ಕಾಡಿ ಕಾಡಿ ಅಳತಾನ ಜೋ..ಜೋ...

ಬಂಗಾರ ತೊಟ್ಟಿಲ ಬೆಳ್ಳಿಯ ಹಗ್ಗ
ಕಂದನ ಹಾಕಿ ತೂಗಿರವ್ವ ಜೋ..ಜೋ...

ಅಕ್ಕ ನಿನ್ನ ಮಗನ ಹೆಸರ ಏನೈತಿ
ನಮ್ಮ ಮುಂದ ಹೇಳವ್ವ ಜೋ..ಜೋ...

ನನ್ನ ಕಂದನ ಹೆಸರ ಗೋಕುಲ ಶ್ರೀಕೃಷ್ಣ
ಚಂದಾಗಿ ಕರಿರವ್ವ ಜೋ..ಜೋ...”[೨]

ಮುಂತಾದ ಪದಗಳನ್ನು ಹೇಳಿ ಮಗುವಿಗೆ ತೊಟ್ಟಿಲಲ್ಲಿಟ್ಟು ತೂಗುತ್ತಾರೆ. ಹೆಸರಿಡಲಿಕ್ಕೆ ಬಂದ ಹೆಣ್ಣುಮಕ್ಕಳು ಹೊಸ ಬಟ್ಟೆ, ಅಂಗಿ, ಕುಂಚಗಿ ಮೊದಲಾದ ಕಾಣಿಕೆಗಳನ್ನು ಮಗುವಿನ ತಾಯಿಯ ಉಡಿಯಲ್ಲಿ ಹೊಸ ಬಟ್ಟೆ ಅಂಗಿ, ಕುಂಚಗಿ ಮೊದಲಾದ ಕಾಣಿಕೆಗಳನ್ನು ಮಗುವಿನ ತಾಯಿಯ ಉಡಿಯಲ್ಲಿ ಅಥವಾ ತೊಟ್ಟಿಲಲ್ಲಿ ಹಾಕುತ್ತಾರೆ.[೧೬] ಈ ಹೆಸರಿಡುವ ಸಂದರ್ಭದಲ್ಲಿ ಪಾಲ್ಗೊಂಡವರೆಲ್ಲರಿಗೂ ಮಂಡಾಳು, ಗುಗ್ಗರಿಯನ್ನು ಹಂಚುತ್ತಾರೆ. ಹಂಚುವುದು ಮುಗಿದ ಬಳಿಕ ಸಿಹಿ ಅಡುಗೆಯ ಊಟವನ್ನು ಮಾಡಿಸಿ, ಎಲೆ ಅಡಿಕೆಯನ್ನು ಕೊಟ್ಟು ಕಳುಹಿಸುತ್ತಾರೆ. ಈ ಕೆಲವು ಸಂಪ್ರದಾಯಗಳು ಸ್ವಲ್ಪ ಹೆಚ್ಚು ಕಡಿಮೆ ಲಿಂಗಾಯಿತ ಎಲ್ಲಾ ಸಮುದಾಯಗಳಲ್ಲೂ ಕಂಡುಬರುತ್ತವೆ.

### ೫.೭. ಮುರುವು ಚುಚ್ಚುವುದು

ಹುಟ್ಟಿದ ಮಗುವಿಗೆ ಮೂರು, ಐದು ಅಥವಾ ಒಂಬತ್ತನೆಯ ತಿಂಗಳಲ್ಲಿ ಶುಭ ಮುಹೋರ್ತ ದಿವಸ ನೋಡಿ ಮುರುವು ಚುಚ್ಚಿಸುತ್ತಾರೆ. ಚುಚ್ಚಿಸಿಕೊಳ್ಳಲು ಪಾಂಚಳನ ಮನೆಗಾಗಲಿ ಅಥವಾ ಅಂಗಡಿಗಾಗಲಿ ಎರಡು ಒಣಕೊಬ್ಬರಿ ಬಟ್ಟಲಗಳನ್ನು ಊದಿನಕಡ್ಡಿ ಪಂಚಫಳಾರ (ಸಕ್ಕರೆ, ಬೇಳೆ, ಬೆಲ್ಲ, ಅಕ್ಕಿ, ಪುಟಾಣಿ) ತೆಗೆದುಕೊಂಡು ಹೋಗುತ್ತಾರೆ. ಆಗ ಪಾಂಚಳನ್ನು ಸಿದ್ದಪಡಿಸಿದ ಮುರುವು (ಬೆಳ್ಳಿ, ತಾಮ್ರ, ಚಿನ್ನ) ಕೊಬ್ಬರಿ ಬಟ್ಟಲದಲ್ಲಿ ಚುಚ್ಚಿ ಕೂಸಿನ ಎರಡು ಕಿವಿಗಳಿಗೆ ಚುಚ್ಚುತ್ತಾರೆ. ರಕ್ತ ಬರಬಾರದೆಂದು ಚುಚ್ಚಿದ ಭಾಗಕ್ಕೆ ಎಣ್ಣೆ, ಕುಂಕುಮ ಲೇಪಿಸುತ್ತಾರೆ. ನಂತರ ಕೊಬ್ಬರಿ ಬಟ್ಟಲನ್ನು ಕೂಸಿನ ಕಿವಿಯ ಹತ್ತಿರ ಒಯ್ದು ಲಟಕ್ಕಂತ ಮುರಿದು ಇದ್ದ ಜನಗಳಿಗೆ ಫಳಹಾರ ಹಂಚುತ್ತಾರೆ. ಈ ರೀತಿ ಮಾಡುವುದರಿಂದ ಕೂಸಿಗೆ ಕಿವಿ ಚುಚ್ಚಿದ ನೋವು ಕಡಿಮೆಯಾಗುತ್ತದೆಂದು ನಂಬುತ್ತಾರೆ. ಇದು ಸತ್ಯ ಎನಿಸುತ್ತದೆ. ನಿಜವಾಗಲೂ ಕಬ್ಬಿಣದ ಮಳೆಯಾಗಲಿ, ಬೇಡಿ ಹತ್ತಿದರೆ ನೋವಾಗಿರುತ್ತದೆ.ಇದು ಚುಚ್ಚುವುದರಿಂದ ಅಷ್ಟುನೋವಾಗದು ಗಮನಕ್ಕೆ ಬರುವುದು ಗಮನಿಸಬೇಕಾದದ್ದು. ನಂತರ ಪಾಂಚಾಳನಿಗೆ ತಮ್ಮ ಖುಷಿಗೆ ಬಂದಂತೆ ಐದು ಮತ್ತು ಹನ್ನೊಂದು ರೂಪಾಯಿಗಳು ಕೊಡುತ್ತಾರೆ.

ಕೂಸು ಬಾಣಂತಿಯನ್ನು ತವರ ಮನೆಯಿಂದ ಗಂಡನ ಮನೆಗೆ ಕಳುಹಿಸುವಾಗ ಮುರುವು ಚುಚ್ಚುವುದು, ಮತ್ತು ತೊಟ್ಟಿಲು-ಬಟ್ಟಲ ನಿಬ್ಬಣ ಮಾಡಿಸಿ ಇಡುತ್ತಾರೆ. ಗಂಡನ ಮನೆಯವರು ಸೊಸೆ ಕರೆಯುವುದಕ್ಕಾಗಿ ಬರುತ್ತಾರೆ. ಪ್ರಥಮ ಹೆರಿಗೆ ಇದ್ದುದರಿಂದ ಕೂಸಿನೊಂದಿಗೆ ಗಂಡನ ಮನೆಗೆ ಹೊರಟು ನಿಂತ ಮಗಳಿಗೆ ತವರಿನವರು ವಿಶೇಷ ಉಡುಗೊರೆ ನೀಡಿ ಗಂಡನ ಮನೆಗೆ ಕಳುಹಿಸುತ್ತಾರೆ. ಸಾಮಾನ್ಯವಾಗಿ ಸೀರೆ, ಕುಪ್ಪಸ, ಕೂಸಿಗೆ ಹೊಸ ಬಟ್ಟೆ ತೊಟ್ಟಿಲು-ಬಟ್ಟಲು, ಬೆಳ್ಳಿ ತೋಡೆ, ಹಾಲ್ಗಡಗ, ಬೆಳ್ಳಿ ಉಡದಾರ, ಬಂಗಾರದ ಶೇಟಿಗೆವ್ವನ ರೂಪ ಮಾಡಿ ಕೊರಳಲ್ಲಿ ಹಾಕಿ ಕೂಸಿನೊಂದಿಗೆ ಗಂಡನ ಮನೆಗೆ ಕರೆದುಕೊಂಡು ಬರುತ್ತಾರೆ. ಕೂಸಿನ ಸೋದರಮಾವ ಪೂಜೆ ಮಾಡಿದ ತೊಟ್ಟಿಲು ತಲೆಯ ಮೇಲೆ ಇಟ್ಟುಕೊಂಡು ಗಂಡನ ಮನೆಗೆ ಬರುತ್ತಾರೆ. ತೊಟ್ಟಿಲ ಹೊತ್ತು ನಿಂತ ಸೋದರ ಮಾವನಿಗೆ ತೊಟ್ಟಿಲಿಗೂ ಆರತಿ ಮಾಡಿ ಕೂಸು ತಾಯಿಗೆ ಅನ್ನದಿಂದ ನಿವಾಳಿಸಿ ಮನೆಯೊಳಗೆ ಕರೆದೊಯುತ್ತಾರೆ. ಗಂಡಿನವರು ಸೋದರ ಮಾವನಿಗೆ ಹೊದಿಕೆ ಮಾಡಿ

ಗೌರವಿಸುತ್ತಾರೆ. ಮುಂದೆ ತೊಟ್ಟಿಲು ಕಾರ್ಯಕ್ರಮ ಜರಗುತ್ತದೆ. ತದನಂತರ ಕೈಲಾದ ಮಟ್ಟಿಗೆ ಜನರಿಗೆ ಊಟವನ್ನು ಮಾಡಿಸುತ್ತಾರೆ.

### ೫.೮. ಸಾವು-ಸಂಸ್ಕಾರ

ಹುಟ್ಟು ಸಾವು ಮಾನವ ಜೀವನದ ಎರಡು ಮಹತ್ವದ ಘಟ್ಟಗಳು. ಹುಟ್ಟಿದವನು ಸಾಯಲೇಬೇಕು; ಇದು ನಿಸರ್ಗ ನಿಯಮ. ಜನನ ಕಾಲದಿಂದ ಮೊದಲಗೊಂಡು ಬದುಕಿನ ಬೇರೆ ಬೇರೆ ಸಂದರ್ಭಗಳನ್ನೊಳಗೂಡಿ ಮರಣದ ಕಾಲದವರೆಗೆ ಕೆಲವು ವಿಧಿವಿಧಾನಗಳನ್ನು ಆಚರಿಸುವ ಪರಂಪರೆ ಎಲ್ಲ ಕುಲ, ಸಮುದಾಯಗಳಲ್ಲಿಯೂ ಕಂಡುಬರುತ್ತದೆ. ಗಮನಿಸಬೇಕಾದ ಸಂಗತಿಯೆಂದರೆ ಕುಲದಿಂದ ಕುಲಕ್ಕೆ, ಸಮುದಾಯದಿಂದ ಸಮುದಾಯಕ್ಕೆ ಈ ಬಗೆಯ ಆಚರಣೆಗಳು ಭಿನ್ನವಾಗಿರುವುದು.

ಸತ್ತವನ ದೇಹಕ್ಕೆ ಸಲ್ಲಿಸುವ ಕೊನೆಯ 'ಗೌರವ'ವೇ ಶವ ಸಂಸ್ಕಾರ. ಅದಾದ ಬಳಿಕ ಸತ್ತವನ 'ಶ್ರೇಯಸ್ಸಿ'ಗಾಗಿ ಅಥವಾ ಶಾಂತಿಗಾಗಿ ಮಾಡುವ ವಿಧಿ ವಿಧಾನಗಳು ಉತ್ತರಕ್ರಿಯೆ ಇತ್ಯಾದಿ. ಸತ್ತಮೇಲೂ ಆ ವ್ಯಕ್ತಿಗೆ ಗೌರವ ತೋರುವ ಸಂಕೇತವಾಗಿದೆ. ಬಹುಶಃ ಇದು ಜನಾಂಗ ವಿಕಾಸದ ಫಲವಾದ ನಾಗರೀಕತೆಯ ಲಕ್ಷಣವೆಂದು ಹೇಳಬಹುದು. ಸರಿಯಾದ ಸಂಸ್ಕಾರ ಆಗದಿದ್ದರೆ ಅವರ ಆತ್ಮಕ್ಕೆ ಸದ್ಗತಿ ದೊರೆಯುವುದಿಲ್ಲವೆಂದು ಹಲವು ಧರ್ಮಗಳವರ ನಂಬಿಕೆ. ಇಂಥ ನಂಬಿಕೆಯ ಫಲಸ್ವರೂಪವೇ ಮರಣ ಸಂಸ್ಕಾರಗಳ ಮುಂದುವರಿಕೆ.[೨]

ಶವ ಸಂಸ್ಕಾರ ವಿಧಾನದಲ್ಲೂ ಗಾಣಿಗ ಸಮುದಾಯದವರು ಶವಕ್ಕೆ ಮೊದಲು ಸ್ನಾನ ಮಾಡಿಸಿ, ಹೊಸ ಬಟ್ಟೆಯನ್ನುಡಿಸಿ ಸ್ವಾಮಿಗಳಿಂದ ಪೂಜಿಸುವರು. ಸತ್ತವನ ಸಂಬಂಧಿಗಳೆಲ್ಲ ಸುದ್ದಿಯನ್ನು ಕಳುಹಿಸಲಾಗುತ್ತದೆ. ಈ ಸುದ್ದಿ ಕೇಳಿ ಬರುವರು. ಬರುವಾಗ ಹೂವಿನ ಹಾರ, ತೆಂಗಿನಕಾಯಿ, ವಿಭೂತಿ, ಊದಿನಕಡ್ಡಿ ತೆಗೆದುಕೊಂಡು ಬರುವರು. ಓಣಿಯ ಅಣ್ಣ-ತಮ್ಮಂದಿರು ದೂರದ ಊರಿಂದ ಬಂದವರಿಗೆ ಒಂದೆಡೆ ಚಾ-ಚೂಡಾದ ವ್ಯವಸ್ಥೆಯನ್ನು, ಮತ್ತೊಂದೆಡೆ 'ಕುಣಿ' (ಗೋರಿ) ತೋಡುವ ವ್ಯವಸ್ಥೆಯನ್ನು ಮಾಡುತ್ತಾರೆ. ಶಿದಗಿಯಲ್ಲಿ ಹೆಣವನ್ನು ಸಿಂಗರಿಸಿ, ಊದುತ್ತಾ ಒಡೆಯುತ್ತಾ ಬಾರಿಸುತ್ತಾ ಪಟಾಕಿಗಳನ್ನು ಹಾರಿಸುತ್ತಾ, ಶವ ಯಾತ್ರೆಯನ್ನು ಪ್ರಾರಂಭಿಸುತ್ತಾರೆ. ಆಗ ಸತ್ತವರ ಸಂಬಂಧಿಕರು ಹೆಣದ ಹಿಂದಿನಿಂದ ನವಣೆ, ಜೋಳ, ಎಲೆ ಬಿತ್ತುತ್ತು ಹೋಗುವರು. ಸಾಂಪ್ರದಾಯಿಕವಾಗಿ ಬಾಣಿತಿ, ತೊನ್ನು ರೋಗ ಇದ್ದವರನ್ನು ಸುಡುವರು, ಉಳಿದವರನ್ನು ಹೂಳುವರು. ಮದುವೆಯಾಗದಿದ್ದರೆ ಅಂತವರನ್ನು ಅಡ್ಡ ಒಯ್ದು ಹೂಳುವರು.

ಶವಸಂಸ್ಕಾರದ ನಂತರ ಎಲ್ಲರೂ ಹಳ್ಳ, ಬಾವಿ, ಹೊಳೆ ಇಲ್ಲವೆ ಪಂಪ್‌ಸೆಟ್‌ಗಳಲ್ಲಿ ಸ್ನಾನ ಮಾಡಿ ದೇವರ ಗುಡಿಗೆ ಹೋಗಿ ಮನೆಯೊಳಕ್ಕೆ ಬರುವರು. ಹನ್ನೊಂದು ದಿನಗಳವರೆಗೆ ಸೂತಕವನ್ನು ಆಚರಿಸುತ್ತಾರೆ. ಶವ ಸಂಸ್ಕಾರಕ್ಕೆ ಬಂದ ಸಂಬಂಧಿಕರು, ಆತ್ಮೀಯರಿಗೆ ಒಂಬತ್ತು ಅಥವಾ ಹನ್ನೊಂದು ದಿನ ಮುಗಿದ ನಂತರ ದೈವದಾಗ ಹಾಕಿಕೊಳ್ಳುವರು. ಆಗ ಊರಿನಲ್ಲಿರುವವರಿಗೆಲ್ಲ ಸಿಹಿ ಊಟದ ಅಡುಗೆಯನ್ನು ಮಾಡಿಸಿ, ಎಲ್ಲರಿಗೂ ಊಟ ಮಾಡಿಸುವರು. ಪ್ರತಿ ವರ್ಷ ಮುಂದೆ ಹಿರಿಯರ ದಿನವನ್ನು ಮಾಡುತ್ತಾ ಹೋಗುವರು.

### ೫.೮.೧. ಸುದ್ದಿ ತಿಳಿಸುವುದು

ಊರಲ್ಲಿ ಗಾಣಿಗರು ಯಾರಾದರೊಬ್ಬರು ಸತ್ತರೆಂಬ ಸುದ್ದಿ ಮನೆ ಮನೆಗೆ ಹಬ್ಬುತ್ತಿದ್ದಂತೆಯೇ ಊರಿನ ಹಿರಿಯರೆಲ್ಲ ಒಂದೆಡೆ ಸೇರಿ, ಸತ್ತವರ ಸಂಬಂಧಿಕರು ಇರುವ ಊರುಗಳಿಗೆ ಸುದ್ದಿಯನ್ನು ಮುಟ್ಟಿಸಲು ಆಳುಗಳನ್ನು ಕಳಿಸುವ ವ್ಯವಸ್ಥೆ ಮಾಡುತ್ತಾರೆ. ಇದನ್ನು 'ಸತ್ತ ಸುದ್ದಿ ಒಯ್ಯುವುದು' ಎಂದು ಕರೆಯುತ್ತಾರೆ. ಹತ್ತಿರದ ಊರುಗಳಿದ್ದರೆ ನಡೆದು ಇಲ್ಲವೆ ಸೈಕಲ್ ಮೇಲೆ, ದೂರದ ಊರುಗಳಿದ್ದಲ್ಲಿ ಬಸ್ಸುಗಳ ಮೂಲಕ ಸುದ್ದಿ ಒಯ್ಯುವುದು ಒಂದು ಕಡೆಯಾದರೆ. ಇತ್ತೀಚೆಗೆ ಮೊಬೈಲ್‌ಗಳ ಮುಖಾಂತರ ಸತ್ತ ಸುದ್ದಿಯನ್ನು ತಿಳಿಸುತ್ತಾರೆ.

### ೫.೮.೨. ಗೂಟಕ್ಕೆ ಬಡಿಯುವುದು

ಗಾಣಿಗ ಸಮುದಾಯದವರು ಒಂದಡೆ ಸತ್ತ ಸುದ್ದಿಯನ್ನು ತಲುಪಿಸುವ ವ್ಯವಸ್ಥೆಯನ್ನು ಮಾಡುತ್ತಿದ್ದರೆ, ಇನ್ನೊಂದೆಡೆ ಹೆಣದ ವ್ಯವಸ್ಥೆಯನ್ನು ಮಾಡತೊಡಗುತ್ತಾರೆ. ವ್ಯಕ್ತಿಯನ್ನು ಜೀವ ಬಿಟ್ಟ ಸ್ಥಳದಿಂದ ಬಿಡಿಸಿ, ಬೇರೆಡೆ ತಂದಿಡುತ್ತಾರೆ. ನಂತರ ಸ್ನಾನ ಮಾಡಿಸಿ, ಹೊಸ ಬಟ್ಟೆಯನ್ನು ತೊಡಿಸಿ, ಮನೆಯ ಹೊರ ಗೋಡೆಗೆ ಕೂಡಿಸಿ, ಗೋಣು ನೀಟಾಗಿ ನಿಲ್ಲುವಂತೆ ಕುತ್ತಿಗೆಯ ಎರಡೂ ಬದಿಗೆ ಎರಡು ಮೊಳ ಉದ್ದದ ಕಟ್ಟಿಗೆಗಳನ್ನು ಗೋಡೆಯೊಳಗೆ ಬಡಿದು ಹೆಣವನ್ನು ಕೂಡಿಸುತ್ತಾರೆ. ಇದನ್ನೇ ಗೂಟಕ್ಕೆ ಕೂಡಿಸುವುದು ಅಥವಾ ಗೂಟಕ್ಕೆ ಬಡಿಯುವುದು ಎಂದು ಕರೆಯಲಾಗುತ್ತದೆ. ಸತ್ತ ವ್ಯಕ್ತಿ ಯಾವುದಾದರೊಂದು ರೋಗದಿಂದ ಬಳಲಿ ಸತ್ತಿದ್ದರೆ, ಹೆಣ ನಾತ ಏಳಬಾರದೆಂದು ಸುಗಂಧ ದ್ರವ್ಯವನ್ನು ಸಿಂಪಡಿಸುತ್ತಾರೆ. ಮೂಗಿನಿಂದ ರಕ್ತ ಸೋರದಂತೆ ಮೂಗಿನ ಹೊಳ್ಳೆಯಲ್ಲಿ ಅಳ್ಳಿಯನ್ನಿಟ್ಟು ಹೆಣವನ್ನು ಕೂಡಿಸುತ್ತಾರೆ. ಇಲ್ಲವೆ ಮಲಗಿಸುತ್ತಾರೆ.

ಸತ್ತ ದಿವಸ ಸಂಸ್ಕಾರ ಮಾಡುವುದು ಸಾಧ್ಯವಾಗದಿದ್ದರೆ ಮತ್ತು ಸತ್ತವನ ಬಂಧು ಬಳಗ ಬರುವವರಿದ್ದರೆ ಇಡೀ ರಾತ್ರಿ ಜಾಗರಣೆ ಮಾಡಿ ಎಚ್ಚರಾಗಿರುತ್ತಾರೆ. ಭಜನೆ, ಬಳಗದವರು ಹಾಡಿ ಹಾಡಿ ಅಳುವುದು ಹೀಗೆ ರಾತ್ರಿಯೆಲ್ಲ ಜಾಗರಣೆ.

### ೫.೮.೩. ಬಂದವರಿಗೆ ಚಾ-ವ್ಯವಸ್ಥೆ

'....ಯಂತಹ ದುಃಖ ಇದ್ದರು, ಬಾಯಿ ಸುಮ್ಮನಿದ್ದರು ಹೊಟ್ಟೆ ಸುಮ್ಮನಿರದು' ಎಂಬ ಗಾದೆ ಮಾತಿನಂತೆ ಒಪ್ಪತ್ತು ತಪ್ಪಿದರೆ ಇನ್ನೊಂದು ಒಪ್ಪತ್ತಿಗಾದರೂ ಹೊಟ್ಟೆಗೆ ಏನಾದರು ಬೇಕೆ ಬೇಕು. ಜೋರಾಗಿ ಅತ್ತರೇನು, ಉಪವಾಸ ಇದ್ದರೇನು, ಸತ್ತವರು ಮರಳಿ ಬರುವುದಿಲ್ಲವೆಂಬುದು ಗಾಣಿಗರ ದಿಟವಾದ ನಂಬಿಕೆ. ಅದಕ್ಕಾಗಿ ಇದ್ದೂರು ಹಾಗೂ ಬೇರೆ ಊರಿನವರಿಗೂ ಒಂದೆಡೆ ಚಾ-ಟಿಫನ್ ವ್ಯವಸ್ಥೆಯನ್ನು ಮಾಡುತ್ತಾರೆ. ಶವ ಸಂಸ್ಕಾರಕ್ಕೆ ಬರುವರು ತೆಂಗಿನ ಕಾಯಿ, ಹೂವಿನ ಹಾರ, ಊದಿನಕಡ್ಡಿಯನ್ನು ತರುತ್ತಾರೆ. ಬೇರೆ ಊರಿನಿಂದ ಬಂದವರು ಹೆಣವನ್ನು ನೋಡಿ ಅಳುತ್ತಾರೆ. ಅತೀ ಹತ್ತಿರದ ಸಂಬಂಧಿಕರಾಗಿದ್ದರೆ ಬೋರಾಡಿ, ಹೊಟ್ಟೆ ಹೊಟ್ಟೆಗೆ ಬಡಿದುಕೊಂಡು, ಹಣೆ ಹಣೆ ಜಜ್ಜಿಕೊಂಡು, ತೆಕ್ಕೆಗೆ ಹಾಕಿಕೊಂಡು ಅಳುತ್ತಾರೆ. ಅವರು ಅಲ್ಲಿಯೇ ಹೆಣದ ಬಳಿ ಕುಂದ್ರುತ್ತಾರೆ. ಸ್ವಲ್ಪ ದೂರದ ಸಂಬಂಧಿಕರಾಗಿದ್ದರೆ, ಬಂದವರೇ ಹೆಣದ ಮಾರಿ

ನೋಡಿ, ಬೇರೆಡೆ ಸ್ವಲ್ಪ ದೂರದಲ್ಲಿ ಹೋಗಿ ಕುಳಿತುಕೊಳ್ಳುತ್ತಾರೆ. ಆ ಮೇಲೆ ಅಲ್ಲಿಯವರು ಬಂದವರನ್ನು ಚಾ ಟಿಫಿನ್‌ಗೆ ಕರೆದೊಯ್ಯುತ್ತಾರೆ. ಸಾಮಾನ್ಯವಾಗಿ ಸತ್ತಲ್ಲೆಲ್ಲಾ ಇಂತಹ ವ್ಯವಸ್ಥೆಯನ್ನು ಏಕೆ ಮಾಡುತ್ತಾರೆಂದರೆ, ಶವಸಂಸ್ಕಾರ ಯಾವಾಗ ನಡೆಯುತ್ತದೆ ಎಂಬುದಕ್ಕೆ ನಿರ್ಧಾರ ಇರುವುದಿಲ್ಲ. ಸತ್ತವರ ಹತ್ತಿರದವರು ಬರುವಿಕೆಯನ್ನು ಕಾಯಬೇಕಾಗುತ್ತದೆ. ಅದಕ್ಕಾಗಿ ಒಪ್ಪತ್ತಿನ ಹೊಟ್ಟೆ ವ್ಯವಸ್ಥೆಗೆ ಚಾ-ಟಿಫನ್ ಮಾಡುತ್ತಾರೆ. ಇನ್ನು ಕೆಲವರು ಅಂತ್ಯ ಸಂಸ್ಕಾರವಾಗುವವರೆಗೆ ಬಾಯಲ್ಲಿ ಒಂದು ಹನಿ ನೀರನ್ನು ಕೂಡ ಹಾಕುವುದಿಲ್ಲ. ಶವ ಸಂಸ್ಕಾರದ ತರುವಾಯ ಸ್ನಾನ ಮಾಡಿಯೇ ಊಟ ಮಾಡುತ್ತಾರೆ.

ದೂರದ ಊರಿಂದ ಶವಸಂಸ್ಕಾರಕ್ಕೆ ಬಂದವರು ಬೇಸರವನ್ನು ಕಳೆಯಲು ಗಂಡಸರು ಹುಲಿಕಟ್ಟೆ, ಇಸ್ಪೇಟು ಮುಂತಾದ ಆಟಗಳಲ್ಲಿ ಅಲ್ಲಲ್ಲಿ ಗಿಡದ ನೆರಳಲ್ಲಿ ಅಥವಾ ಹೆಣದ ಮುಂದ, ಕಟ್ಟೆಯ ಮೇಲೆ ಆಡತೊಡಗುತ್ತಾರೆ. ಕೆಲವರು ಶೇಂದಿ, ಸಾರಾಯಿ ಕುಡಿದು ಮಜಾ ಮಾಡುತ್ತಾರೆ. ಇನ್ನು ಕೆಲವರು ಇದಾವುದನ್ನು ಸೇರದೇ ಹೆಣದ ಕಟ್ಟೆಯ ಮೇಲೆ ಕುಂತಿರುತ್ತಾರೆ.[೧೮]

### ೫.೮.೪. ಕುಣಿ ತೋಡುವುದು

ಈ ವ್ಯವಸ್ಥೆ ಜನ ಸೇರುತ್ತಿದ್ದ ಹಾಗೆಯೇ ಎಂಟು ಹತ್ತು ಜನ ಸೇರಿ ಗುದ್ದಲಿ, ಚಲಿಕಿ, ಆರಿ, ಪುಟ್ಟಿಗಳನ್ನು ತೆಗೆದುಕೊಂಡು ಕುಣಿ ಕಡಿಯಲು ಸುಡುಗಾಡಿಗೆ ಹೋಗುತ್ತಾರೆ. ಹೋಗುವಾಗ ಹೆಣದ ಉದ್ದ ಅಗಲ ಅಳತೆಯನ್ನು ತೆಗೆದುಕೊಂಡು, ಸತ್ತ ವ್ಯಕ್ತಿಯದು ಮದುವೆಯಾಗಿದ್ದರೆ ಕುತಿಗಿ ಮಠ ಎತ್ತರ ಆಳ-ಅಗಲವಾದ ಕುಣಿಯನ್ನು ತೋಡಿ, ಅದರಲ್ಲಿ ಹೆಣ ಕೂಡಿಸಲು ಮನಿ ಮಾಡುತ್ತಾರೆ. ಕುಣಿ ಆಳ ಅಗಲ ನೆಲಕ್ಕೆ ಸಂಬಂಧಿಸಿದಂತಿರುತ್ತದೆ. ಸುಲಭದ ನೆಲ ಇದ್ದರೆ ಆಳವಾಗಿ, ಬಿರುಸಾದ ನೆಲವಾಗಿದ್ದರೆ ಸ್ವಲ್ಪ ಆಳವಾಗಿ ಕುಣಿ ತೋಡುವರು. ಚಿಕ್ಕ ಮಕ್ಕಳಿಗೆ ಅಷ್ಟೊಂದು ಆಳ ಅಗಲವಾದ ಕುಣಿ ತೋಡುವುದಿಲ್ಲ. ಕೆಲವು ಹಳ್ಳಿಗಳಲ್ಲಿ ಈ ಸಮುದಾಯದವರು ನಿಗದಿಪಡಿಸಿದ ಪ್ರತ್ಯೇಕವಾದ ಸುಡುಗಾಡುಗಳಿವೆ (ರುದ್ರಭೂಮಿ) ಪಟ್ಟಣಗಳಲ್ಲಿ ಇಂತಹದೇನೂ ಕಂಡುಬರುವುದಿಲ್ಲ.

### ೫.೮.೫. ಹೆಣ ಎತ್ತುವುದು

ಅಂತ್ಯ ಸಂಸ್ಕಾರ, ಅಂತ್ಯಕ್ರಿಯೆ, ಶವ ಸಂಸ್ಕಾರ, ಶವಯಾತ್ರೆ ಎಂಬುದಕ್ಕೆ ಗಾಣಿಗ ಸಮುದಾಯದವರು ಹೆಣ ಎತ್ತುವುದು ಎಂದು ಕರೆಯುತ್ತಾರೆ. ಹೆಣ ಎತ್ತುವುದಕ್ಕಿಂತ ಮೊದಲು ಚಟ್ಟದಲ್ಲಿ ಒಯ್ಯುವುದೋ ಅಥವಾ ಮಾಮೂಲಿ ಒಯ್ಯುವುದೋ ಎಂಬುದನ್ನು ನಿರ್ಧರಿಸುತ್ತಾರೆ. ಚಟ್ಟದಲ್ಲಿ ಒಯ್ಯುವುದಾದರೆ, ಊರಿನ ಬಡಿಗೇರಿಗೆ ಹೇಳಿ ಕರಕೊಂಡು ಬಂದು ಅದಕ್ಕೆ ಬೇಕಾದ ಹಸಿಕಟ್ಟಿಗೆಗಳನ್ನು ತಂದು ಚಟ್ಟ ತಯಾರಿಸುತ್ತಾರೆ. ತಯಾರಿಸಿದ ಚಟ್ಟಕ್ಕೆ ಬಣ್ಣ ಬಣ್ಣದ ಪರಿಪರಿ ಹಾಳೆಗಳನ್ನು ಕತ್ತರಿಸಿ ಹಚ್ಚಿ ಅಲಂಕರಿಸುತ್ತಾರೆ. ಅಲಂಕೃತವಾದ ಚಟ್ಟದಲ್ಲಿ ಹೆಣವನ್ನು ಕೂಡಿಸಿ, ನಾಲ್ಕು ಜನ ಹೆಗಲು ಕೊಟ್ಟು ಹೊತ್ತುಕೊಂಡು ನಡೆಯುತ್ತಾರೆ. ಮನೆಯಿಂದ ಊರ ಅಗಸಿಯಲ್ಲಿ ಹಾಯ್ದು ಸುಡುಗಾಡಕ್ಕೆ ಸಮೀಪವಾಗುವ ದಾರಿ ಹಿಡಿದು ಶವಯಾತ್ರೆ ನಡೆದಿರುತ್ತದೆ. ಊರಿನ ಜನ ಅಲ್ಲಲ್ಲಿನಿಂತು ಹೆಣವನ್ನು ನೋಡಿ ಅಳುತ್ತಿರುತ್ತಾರೆ. ಅವನ ಮುಂದೆ ಅನೇಕ ಹಲಗೆ, ಕಹಳೆ,

ಶಹನಾಯಿ ಮುಂತಾದ ವಾದ್ಯಗಳ ಮೇಳ ಸಾಗುತ್ತಿರುತ್ತದೆ. ಹೆಣವನ್ನೆತ್ತಿದ ಸ್ಥಳದಿಂದ ಕುಣಿಯವರೆಗೂ ಯಾರಾದರೊಬ್ಬರು ಸಂಬಂಧಿಕರು ಉಡಿಯಲ್ಲಿ ನ್ಯಾವಣೆ ಕಟ್ಟಿಕೊಂಡು ಸಣ್ಣಗೆ ಸುಡುಗಾಡದವರೆಗೆ ಕೈ ಮುಷ್ಠಿಯಿಂದ ಬಿಡುತ್ತಾ ಹೋಗುತ್ತಾರೆ. ದಾರಿಯಲ್ಲಿ ಅಲ್ಲಲ್ಲಿ ಕೆಲವರು ಹೆಗಲನ್ನು ಬದಲಾಯಿಸುತ್ತಾ ಸುಡುಗಾಡಿಗೆ ಬಂದು ತಲುಪುತ್ತಾರೆ. ಗಾಣಿಗರಲ್ಲಿ ಶವಸಂಸ್ಕಾರ ಸಾಂಪ್ರದಾಯಿಕವಾಗಿ ಎರಡು ಪ್ರಕಾರ ನಡೆಯುತ್ತಾ ಬಂದಿದೆ. ಮೊದಲನೆಯದು ಹೂಳುವುದು, ಎರಡನೆಯದು ಸುಡುವುದು. ಬಾಣಂತಿಯರನ್ನು, ತೊನ್ನು ರೋಗದವರನ್ನು ಸುಡುತ್ತಾರೆ. ಉಳಿದವರನ್ನು ಹೂಳುತ್ತಾರೆ. ಮದುವೆಯಾದವರನ್ನು ಅಡ್ಡ ಹೂಳುತ್ತಾರೆ, ಉಳಿದವರನ್ನು ಉದ್ದ ಹೂಳುವುದುಂಟು. ಹೆಣವನ್ನು ಕುಣಿಯಲ್ಲಿರಿಸಿ, ಸ್ವಾಮಿಯ ಮಂತ್ರದ ಮೂಲಕ ಪೂಜಿಸಿ, ಕಾಯಿ ಒಡೆದು, ಬಾಯಿಯಲ್ಲಿ ನಾಣ್ಯ ಅಥವಾ ಬಂಗಾರದ ತುಣುಕೊಂದನ್ನು ಇಟ್ಟು, ಬಟ್ಟೆಯನ್ನೆಲ್ಲ ತೆಗೆದು ಮೇಲೆ ಅವರಿ, ಲಕ್ಕಿ ಮುಂತಾದ ತಪ್ಪಲನ್ನು ಹಾಕಿ, ಸಂಬಂಧಿಕರಿಗೆ ಮತ್ತೊಂದು ಸಲ ಮುಖವನ್ನು ತೋರಿಸಿ ಮೇಲೆ ಮಣ್ಣು ಹಾಕುತ್ತಾರೆ. ಬಂದವರೆಲ್ಲರೂ ಒಂದೊಂದು ಬೊಗಸೆ ಅಥವಾ ಮೂರು, ಐದು ಬೊಗಸೆ ಮಣ್ಣನ್ನು ಹಾಕಿ ಹೋಗುತ್ತಾರೆ. ಅನಂತರದ ಸಲಿಕೆಯಿಂದ ಕುಣಿಯೊಳಕ್ಕೆ ಮಣ್ಣೆಳೆದು, ಒಳಗೊಂದು ತೆಂಗಿನಕಾಯಿ ಇಟ್ಟು ಗುಂಪು ಮಾಡಿ ಅದರ ಮೇಲೆ ಕಲ್ಲೊಂದನ್ನಿರಿಸಿ, ಮತ್ತೊಂದು ಸಲ ಪೂಜೆ ಮಾಡಿ ಕಾಯಿ ಒಡೆದು, ಪಳಾರ ಹಾಕಿ, ಅಲ್ಲಿ ನೆರೆದವರಿಗೆಲ್ಲ ಪಳಾರ ಹಂಚುತ್ತಾರೆ. ಸ್ವರ್ಗಕ್ಕೆ ಹೋಗುವವರನ್ನು ಸಾವಿರ ಕೆಲಸ ಬಿಟ್ಟು ನೋಡಬೇಕೆಂದು ಹಿರಿಯರು ಹೇಳುತ್ತಾರೆ. ಬಂದವರು ಮತ್ತು ದೂರದಿಂದ ಬಂದ ಸಂಬಂದಿಕರೆಲ್ಲ ತಮ್ಮ ತಮ್ಮ ಮನೆಗೆ ಊರಿಗೆ ತೆರಳುತ್ತಾರೆ. ಇವರು ಹೋಗು ಹೋಗುತ್ತಲೆ ಅನೇಕ ಅನೇಕ ನಿಯಮಾಚರಣೆಗಳನ್ನು ಪಾಲಿಸುತ್ತಿರುವುದು ಕಂಡುಬರುತ್ತದೆ.

### ೫.೮.೬. ಇಸಬಾಯಿ ತೊಳೆಯುವುದು

ಸತ್ತ ವ್ಯಕ್ತಿಯ ಮನೆಯವರಿಗೆ, ಅವರ ಬೀಗರಾಗುವವರು ವಿಷಬಾಯಿ ತೊಳೆಸುತ್ತಾರೆ. ಅಂದರೆ ಒಂದು ಗಂಗಾಳದಲ್ಲಿ ನೀರು, ಅನ್ನ, ರೊಟ್ಟಿ, ಮಿಶ್ರಣ ಮಾಡಿದ ಮೇಲೆ ತಿನ್ನಲು ಕೊಟ್ಟು, ಅರೆ ಬರೆ ತಿಂದ ಆಹಾರವನ್ನು ಉಗುಳಿದ ನಂತರ ಬಾಯಿ ತೊಳೆಸಿ, ಸಿಹಿ ಕೊಟ್ಟು ನೀರು ಕೊಡುತ್ತಾರೆ.[೯೯]

## ೫.೯. ಕುಟುಂಬದ ಮೇಲೆ ಸಾವಿನ ಪರಿಣಾಮ

ಮದುವೆಯಾದ ಗಂಡು ಅಥವಾ ಮುದುಕರು ತೀರಿಕೊಂಡಿದ್ದರೆ ಅವರ ಮನೆಯ ಹೆಂಡತಿಯ ಮೇಲೆ ಎಲ್ಲಾ ಜವಾಬ್ದಾರಿ. ಗಂಡ ಸತ್ತು ಹೋದರೆ ಅವಳು ವಿಧವೆಯಾಗುತ್ತಾಳೆ. ಅಷ್ಟೆ ಅಲ್ಲದೆ ಸಮಾಜದ ಹಲವಾರು ಕಾರ್ಯಗಳಲ್ಲಿ ಬರುವುದು, ಭಾಗವಹಿಸುವುದು ತಪ್ಪಿ ಹೋಗುತ್ತದೆ. ಅವಳ ಗಂಡ ಸತ್ತಾಗ ಶವಕ್ಕೆ ಗೋಡೆಗೆ ಕೂಡಿಸಿದಾಗ ತವರಿನವರು ತಂದ ಸೀರೆ ಉಡಿಸುತ್ತಾರೆ ರಂಡೀ ಸೀರೆ. ಮತ್ತು ತಲೆಗೆ ದಂಡಿಕಟ್ಟಿ ಉಡಿ ತುಂಬುತ್ತಾರೆ. ಇದು ಅವಳ ಜೀವನದಲ್ಲಿ ಕೊನೆಯ ದಂಡಿ, ಉಡಿಯಕ್ಕಿ ತುಂಬುವುದಾಗಿರುತ್ತದೆ. ಮುಂದೆ ಇಂತಹ ಅವಕಾಶಗಳು ಅವಳಿಗೆ ಎಂದಿಗೂ ದೊರೆಯುವುದಿಲ್ಲ. ಇದು ಹೆಣ್ಣಿಗೆ ಒಂದು ನುಂಗಲಾರದ ಮೂಢ ನಂಬಿಕೆಯಾಗಿದೆ. ಹಂತ ಹಂತಕ್ಕೆ ಇವಳು ಹೆದರಿ ಹೆಜ್ಜೆ ಇಟ್ಟು ಜೀವನ

ಸಾಗಿಸಬೇಕಾಗುತ್ತದೆ. ನಂತರ ಮೃತನ ಅಂತ್ಯಕ್ರಿಯೆಯಾದ ಸ್ಥಳಕ್ಕೆ ಅವಳನ್ನು ಕರೆದುಕೊಂಡು ಬಂದು ಅವಳ ಕೈಬಳೆ ಒಡೆದು ಹಾಕುತ್ತಾರೆ. ತಾಳಿ ಮಂಗಳ ಸೂತ್ರ ಕಡಿದು ಹಾಕುತ್ತಾರೆ. ಕೊನೆಯಲ್ಲಿ ಹಣೆಯ ಮೇಲಿನ ಕುಂಕುಮವನ್ನು ಅಳಿಸಿಹಾಕುತ್ತಾರೆ. ಅಂದರೆ ಸಂಪೂರ್ಣವಾಗಿ ಅವಳ ಸೌಭಾಗ್ಯದಿಂದ ಮುಕ್ತಗೊಳಿಸುತ್ತಾರೆ. ಇಂತಹ ಸಂದರ್ಭದಲ್ಲಿ ಹೆಣ್ಣು ಸತ್ತು ಮತ್ತೆ ಮೇಲೆ ಬಂದಂತಾಗುತ್ತದೆ. ಸತ್ತ ಹೆಣದಂತೆ ಮುಂದೆ ಜೀವಿಸುತ್ತಾಳೆ. ಜಾನಪದರು ಕೆಳಗಿನಂತೆ ಹಾಡುತ್ತಾರೆ.

"ಗಂಡ ಸತ್ತರಿನ್ನ ಗಂಧ ಕುಂಕುಮವ್ಯಾಕ
ಬಂಗಾರವ್ಯಾಕ ಬಳಿಯಾಕ| ಕೊರಳೀನ
ಸಿಂಗಾರ ಶಿವನೆ ಕಸಗೊಂಡ ಎಂದು ಅಳುತ್ತಾರೆ"[೨೦]

ಅದಕ್ಕೆ ಭಾರತೀಯ ಹೆಣ್ಣುಮಗಳು ಗಂಡನ ಮುಂದೆಯೇ ಸಾಯಬೇಕು ಸೌಭಾಗ್ಯದಿಂದ ಸಾಯಬೇಕು ಎಂದು ಅಳುತ್ತಾರೆ, ಹೇಳುತ್ತಾರೆ. "ಅಂಗಯ್ಯ ಒಳಗಾನ ಲಿಂಗಮೂರತಿ ಸ್ವಾಮಿ ಮಂಗಳರಾತಿ ನಾ ಬೆಳಗಿ| ಬೇಡುವೆನು ಮಾರಾಯರ ಮುಂದ ಮರಣವ" ಪತಿಯ ಮುಂದೆಯು ನನಗೆ ನಿನ್ನ ಪಾದಕ್ಕೆ ಕರಕೊ ದೇವರೆ ಎಂದು ಪ್ರಾರ್ಥಿಸುವುದಕ್ಕೆ ಈ ವಿದುವೆ ಸಾಕ್ಷಿಯಾಗಿದೆ. ಸಾವಿನ ಪರಿಣಾಮದಿಂದಾಗಿ ಅವ ತಂದೆ-ತಾಯಿ ಅಥವಾ ಮಕ್ಕಳ ಮೇಲೆ ಪರಿಣಾಮವಾಗಿ ಮನೋರೋಗಕ್ಕೆ ಬಲಿಯಾಗಿ ನರಳುತ್ತಾರೆ. ಮೃತನಿಗೆ ಸುತ್ತಿದ ರುಮಾಲನ್ನು ಮನೆಯ ಹಿರಿಯ ಮಗನಿಗೆ ಸುತ್ತುತ್ತಾರೆ. ಇದರ ಉದ್ದೇಶ ಮನೆ ಇನ್ನು ಮುಂದೆ ಇವನ ವ್ಯಕ್ತಿ ಚಾರಿತ್ರ್ಯದ ಮೇಲೆ ಮನೆತನದ ಗೌರವ ಅವಲಂಬಿತವಾಗಿರುತ್ತದೆ. ಆದ್ದರಿಂದ ಅವರ ಬಂಧುಬಳಗದವರು ಸಿಹಿಯು ತಂದು ಎಲ್ಲರೂ ಸತ್ತವರನ್ನು ಮರೆಯಲಿ ಎಂದು ಮತ್ತೆ ಕೂಡಿ ಉಣ್ಣುವರು ಅದ್ಕೆ 'ಕೂಡಿ ಉಣ್ಣುವುದು' ಎಂದು ಕರೆಯುತ್ತಾರೆ. ಒಟ್ಟಿನಲ್ಲಿ ದುಃಖದಲ್ಲಿ ಇರುವವರನ್ನು ಸಂತೋಷ ತರುವಲ್ಲಿ ಮಾಡಿರುವುದು ಈ ಪದ್ಧತಿಗಳು ತುಂಬ ಸೂಕ್ತವಾಗಿದೆ.

**ಶುಭಕಾರ್ಯ:** ಮೃತನ ಮನೆಯ ತುಂಬ ದುಃಖಮಯವಾಗಿರುವುದರಿಂದ ಮೊದಲಿನಂತೆ ಸಂತೋಷದ ವಾತಾವರಣವನ್ನು ನಿರ್ಮಾಣ ಮಾಡಲು ಮೃತನ ಮನೆಯಲ್ಲಿ ಒಂದು ವರ್ಷ ತುಂಬುವದರೊಳಗೆ ಒಂದು ಶುಭ ಕಾರ್ಯ ಮಾಡಬೇಕೆಂದು ತಿಳಿದುಕೊಳ್ಳುತ್ತಾರೆ. ಹೀಗೆ ಮಾಡುವುದರಿಂದ ಸತ್ತವರ ಮನೆಯ ವಾತಾವರಣವು ಬದಲಾವಣೆ ತಂದು ಸಂತೋಷದ, ಸಂತಸದ ಛಾಯೆ ಮೂಡಿಸಲು ಹೀಗೆ ಮಾಡುವುದುಂಟು. ಇದು ಮಾನಸಿಕವಾಗಿಯೂ ವೈಜ್ಞಾನಿಕವಾಗಿಯೂ ಬಹಳ ಮಹತ್ವದ್ದಾಗಿದೆ.

ಗಾಣಿಗರಲ್ಲಿ ಸ್ವರ್ಗ-ನರಕಗಳ ಬಗ್ಗೆ ತಿಳಿದುಕೊಂಡಿದ್ದಾರೆ. ಅದು ತಮ್ಮ ಕೆಲಸದ ಕಾರ್ಯದ ಮೇಲೆ ಸ್ವರ್ಗ-ನರಕವಿದೆ ಎಂದು ತಿಳಿದಿರುತ್ತಾರೆ.

'ಅಯ್ಯಾ ಎಂದರೆ ಸ್ವರ್ಗ, ಎಲವೋ ಎಂದರೆ ನರಕ'
'ದೇವಲೋಕ ಮೃತ್ಯು ಲೋಕವೆಂಬುದು ಬೇರಿಲ್ಲ ಕಾಣೆಯೋ'
'ಪುಣ್ಯ ಪಾಪವೆಂಬುದು ತಮ್ಮ ಇಷ್ಟವು ಕಂಡಿರೆ'

ಅಂದರೆ ವ್ಯಕ್ತಿಯ ಗುಣಸ್ವಾಭಾವಗಳಲ್ಲಿಯೇ ಸ್ವರ್ಗ-ನರಕ, ಪಾಪ, ಪುಣ್ಯ ಇದೆ. ಎಂದು ತಿಳಿದುಕೊಂಡು ಸಮಾಜದಲ್ಲಿ ಒಳ್ಳೆಯ ಗುಣಗಳಿಂದ ನಡೆದವನಿಗೆ ಮುಕ್ತಿ ಸಿಗುತ್ತದೆ ಎಂದು ನಂಬಿಕೊಂಡಿದ್ದಾರೆ.

ಹೀಗೆ ಗಾಣಿಗರು ಮೋಕ್ಷ ಮಾಡುವಲ್ಲಿ ತಮ್ಮದೇಯಾದ ವಿಧಿ ವಿಧಾನಗಳಲ್ಲಿ ನೆರವೇರಿಸಿಕೊಂಡು ಹೋಗುವರು. ಆದರೂ ಇಂದಿನ ದಿನಮಾನಗಳಲ್ಲಿ ಅಷ್ಟು ವಿಧಿವತ್ತಾಗಿ ನಡೆಸಿಕೊಂಡು ಹೋಗುವಲ್ಲಿ ವಿಫಲವಾಗುತ್ತಿದ್ದಾರೆ. ಏಕೆ ಎಂದು ಪ್ರಶ್ನೆ ಮಾಡಿದರೆ ಅವರ ಉದಾಸೀನವೇ ಕಾರಣ. ಮೂಲ ಕಾರಣ ಆರ್ಥಿಕ ಪರಿಸ್ಥಿತಿಯಾಗಿದೆ. ಹೀಗಾಗಿ ಹೆಚ್ಚು ಹಣ ಖರ್ಚಾಗುವ ಕ್ರಿಯೆಗಳು ಬಿಟ್ಟು ಸಲೀಸಾಗಿ ಮಾಡುತ್ತಿದ್ದಾರೆ. ಇದು ಮುಂದೆ ಕಣ್ಮರೆಯಾಗುವ ಸ್ಥಿತಿಯಲ್ಲಿದೆ ಎಂದು ಹಿರಿಯರ ಗಾಣಿಗರ ಮಾತಾಗಿದೆ.

ಈ ಸಂಸ್ಕಾರಗಳ ಆಚರಣೆಗಳಲ್ಲಿ ತಮ್ಮ ಸಂಬಂಧಿಕರ ಮತ್ತು ಸಮಾಜದ ಜನಗಳ ಪಾತ್ರ ತುಂಬ ಮಹತ್ವದ್ದಾಗಿದೆ. ಅಲ್ಲದೆ ತನ್ನ ಕುಟುಂಬದ ಮೇಲಾಗದಲ್ಲದೆ ಸುತ್ತ ಮುತ್ತಲಿನ ಸಮಾಜದ ಮೇಲೆಯೇ ಕಾರಣವಾಗಬಹುದು ಏಕೆಂದರೆ ಸಂಸ್ಕಾರಗಳು ವ್ಯಕ್ತಿಯ ಸಾಮಾಜಿಕ ಸ್ಥಾನಮಾನಗಳನ್ನು ಹೆಚ್ಚಿಸಿರುವುದರ ಜೊತೆಗೆ ಅವುಗಳ ಅನುಷ್ಠಾನಕ್ಕೆ ತರುವುದರಲ್ಲಿದೆ. ಎಲ್ಲಾ ಪಂಗಡಗಳು ಸಹಕರಿಸಬೇಕೆನ್ನುವುದರಿಂದ ಒಂದು ಸಮಾಜದ ಮೌಲ್ಯವಾಗಿರುವುದರಿಂದ ಇವುಗಳ ಸಮಾಜದ ಭಾವೈಕ್ಯತೆ ದ್ಯೋತಕವಾಗಿದೆ ಎನ್ನಬಹುದು. ಈಗ ವೈಜ್ಞಾನಿಕವಾದ ಕಾಲ ಒದಗಿ ಬಂದಿರುವುದರಿಂದ ನಗರವಾಸಿಗಳಲ್ಲಂತೂ ಸಂಸ್ಕಾರಗಳು ಆಚರಿಸುವುದೇ ಕಡಿಮೆಯಾಗಿ ಹೋಗುತ್ತಿದೆ. ಉಚ್ಚ ಶಿಕ್ಷಣ ಕೆಲಸದ ಬಿಡುವು ಉದ್ಯೋಗ ಇದೇ ಕಾರಣ ಎನ್ನಬಹುದು. ಇಂತಹ ಬಲಿಷ್ಠವಾದ ಆಚರಣೆ ಸಂಸ್ಕಾರಗಳು ಕಡಿಮೆಯಗಿ ಹೋಗುತ್ತಿರುವುದು ನೋಡಿದರೆ ಮುಂದಿನ ಪೀಳಿಗೆಗೆ ತೋರಿಸುವ ಅಥವಾ ಹಿಡಿದಿಡುವುದು ಮಾಡಬೇಕಾಗಿದೆ, ಅಧ್ಯಯನವಾಗಬೇಕಾಗಿದೆ. ಆದ್ದರಿಂದ ಗಾಣಿಗ ಸಮುದಾಯದ ಸಂಸ್ಕೃತಿ ಹಿಡಿದಿಡಲು ಪ್ರಯತ್ನಿಸಲಾಗಿದೆ.

ಸಾಮಾನ್ಯ ಗಾಣಿಗರು ತೀರಿದರೂ ಕೂಡ ರಾತ್ರಿಯ ಸಮಯದಲ್ಲಿ ಭಜನೆ ಏರ್ಪಡಿಸುತ್ತಾರೆ. ಸತ್ತ ವ್ಯಕ್ತಿಯ ಸಂಬಂಧಿಕರು ಅವರವರಿಗೆ ತಕ್ಕಂತೆ ಶವದ ಮುಂದೆ ಆಳುತ್ತಾರೆ. ಅದು ಆಯಾ ಜನಾಂಗದಲ್ಲಿ ಆಯಾ ಪ್ರಕಾರವಾಗಿ ಕಂಡುಬರುತ್ತದೆ. ಹೆಣದ ಮೇಲೆ ಬಿದ್ದು ಎದೆ ಬಡಿದುಕೊಂಡು ಬೇಡುತ್ತಾ ಬೊಬ್ಬೆ ಹೊಡೆಯುತ್ತಾ ಓಡುತ್ತಾ ಬಂದು ದುಃಖವನ್ನು ಹಾಡಿನಲ್ಲೇ ಸುಂದರವಾಗಿ ವ್ಯಕ್ತಪಡಿಸುತ್ತಾರೆ. ಸುತ್ತಾ ಮುತ್ತಾ ಕುಳಿತವರು ಹೆಣಕ್ಕೆ ನೊಣವನ್ನು ಜಾಡಿಸುತ್ತಾ ತಮಗೆ ಕಂಡಂತೆ ಆಳುತ್ತಾರೆ. ನೆರೆದ ಜನರು ಅವರ ದುಃಖಕ್ಕೆ ಕರಗಿ ಅವರುಗಳು ಆಳುತ್ತಾರೆ. ಸತ್ತ ವ್ಯಕ್ತಿಯ ಗುಣಗಾನ ಮಾಡುತ್ತಾರೆ. ಒಬ್ಬೊಬ್ಬರೂ ಒಂದು ರೀತಿಯಲ್ಲಿ ಹೊಗಳುತ್ತಾರೆ. ಅವರ ದೇಹದ ಪರಿವೆಯಿರಲಾರದೇ ಕೊರಳಿಗೆ ಕೊರಳಾಡಿ ಆಳುತ್ತಾರೆ.

"ನನ ದೇವ್ರೆ ನಿಮಗೇನು ಬಂದಿತಪ್ಪ
ಆ ದೇವ್ರು ನಿನಗೆ ಯಾರ ಕರಕೊಂಡ ಹೋದಪ್ಪ
ನಮಗಿನ್ಯಾರಪ್ಪ ದೇವ್ರೆ
ನಮ್ಮ ಬಾಯಿಗೆ ಮಣ್ಣು ಹಾಕದ್ಯಲ್ಲಪ್ಪ

ಮುತ್ತಿನಂಥ ಹೆಂಡ್ತಿ ಮಕ್ಕಳಿಗೆ ಬಿಟ್ಟು ನಡದಲ್ಲಪ್ಪ
ನಮಗ ಯಾರಾದ್ರೊ ಏನಾದ್ರೂ ಅಂದ್ರೆ ಆಡಿದ್ರೆ
ಸುಮಕ ಇರುತಿದದ್ದಿಲ್ಲಪ್ಪಾ
ಇನ್ಯಾರ ನಮಗೆ ಬೆನ್ನಾಸಾರೆ ಕೇಳುವರು
ಹೇಳೋ ಅಪ್ಪಾ
ನೋಡಾ ನೋಡಾ ನಮ್ಮ ಕಣ್ಣಿಗಿ
ಸುಣ್ಣಾ ಹೊಯ್ದಿಲೋ ಶಿವಾ..."[೨೨]

ಹೀಗೆ ಸತ್ತವರ ಸಂಬಂಧಿಕರು ಹೊಗಳುತ್ತಾ ಜೀವನದಲ್ಲಿ ಅವನು ಮಾಡಿರುವ ಕೆಲಸ ಕಾರ್ಯಗಳು ನೆನೆಸಿಕೊಂಡು ದುಃಖವು ಹಾಡಿನಂತೆ ವ್ಯಕ್ತಪಡಿಸುತ್ತಾರೆ.

**ಟಿಪ್ಪಣಿಗಳು**

೧. ಡಾ. ವ್ಹಿ.ಎಸ್. ಭದ್ರಾಪೂರ (ಸಂ), ಸಮಾಜ ದರ್ಶನ-೯, ೨೦೦೦, ಪು.೧೪
೨. ಕ್ಷೇತ್ರಕಾರ್ಯಕ್ಕೆ ಹೋದಾಗ ಏಣಿಗೆಯ ಎಚ್. ರುದ್ರಮ್ಮ, ಮುರುಡಮ್ಮ ಇವರಿಂದ ಮಾಹಿತಿ ಸಂಗ್ರಹಿಸಿದೆ.
೩. ಅದೇ..
೪. ಹುಲಿಗಿಯ ಹುಲಿಗೆಮ್ಮ, ಕೊಟ್ಟೂರೇಶ್ವರ, ಕೂಲಳ್ಳಿ ಗೋಣಿ ಬಸಪ್ಪ, ಶಿರಹಟ್ಟಿ ಪಕೀರೇಶ್ವರ, ಕೊಪ್ಪಳ ಗವಿಸಿದ್ದೇಶ್ವರ, ಸವದತ್ತಿ ಎಲ್ಲಮ್ಮ, ಇಟಗಿ ಭೀಮಮ್ಮ ತಾಯಿ ಇತ್ಯಾದಿ.
೫. ಗಾಣಿಗರು ಹುಗ್ಗಿ, ಹೋಳಿಗಿ, ಸಜ್ಜಕ, ಲಡ್ಡು ಮೊದಲಾದ ಸಿಹಿ ಪದಾರ್ಥಗಳನ್ನು ಮಾಡುತ್ತಾರೆ. ಜೊತೆಗೆ ಈ ಶಾಸ್ತ್ರಕ್ಕೆ ಊರಿನ ಸ್ವಾಮಿಗಳನ್ನು ಕರೆದುಕೊಂಡು ಹೋಗಲಾಗುತ್ತದೆ.
೬. ವೈ.ಸಿ. ಬಾನುಮತಿ, ಮಲೆನಾಡು ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ, ೧೯೯೪, ಪು.೫೨, ೫೩
೭. ಹಲಸಂಗಿ ಗೆಳೆಯರು (ಸಂ), ಹಲಸಂಗಿ ಹಾಡು, ೨೦೦೦, ಪು.೨೨೨
೮. ಗುಬ್ಬಣ ಶಿವಾನಂದ, ೧೯೮೪, ಪು.೧೦೪
೯. ಸಾಲಿಮಠ ಚನ್ನವೀರ ಶಾಸ್ತ್ರಿ, ೧೯೫೫, ಪು.೨೬೮
೧೦. ಹೇಮಲತಾ ಗಣಪತರಾವ್ ವಡ್ಡೆ, ಬೀದರ್ ಜಿಲ್ಲೆಯ ಟೊಕ್ರಿಕೋಳಿ ಬುಡಕಟ್ಟು ಒಂದು ಸಾಂಸ್ಕೃತಿಕ ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಒಪ್ಪಿಸಿದ (ಅಪ್ರಕಟಿತ) ಮಹಾಪ್ರಬಂಧ, ೨೦೦೨, ಪು.೭೩
೧೧. ತ.ಚಿ. ಚಲುವೇಗೌಡ, ೧೯೭೮, ಪು.೬೫
೧೨. ಮಾತೆ ಮಹಾದೇವಿ, ಬಸವಧರ್ಮ ಸಂಸ್ಕಾರಗಳು, ೧೯೯೫, ಪು.೩೩-೩೪
೧೩. ಗಾಣಿಗರು ಆರತಿ ಬೆಳಗುವಾಗ ಒಡಪಕಟ್ಟಿ ಗಂಡನ ಹೆಸರು ಹೇಳುವ ಪದ್ಧತಿಯಿದೆ.

೧೪. ಇದರಿಂದ ಮನೆಯ ಮೈಲಿಗೆ ಹೋಗುವುದೆಂಬ ನಂಬಿಕೆ.

೧೫. ಡಾ. ಹರಿಲಾಲ್ ಕೆ. ಪವಾರ್ (ಸಂ), ಕರ್ನಾಟಕದ ಹೆಳವರು ಒಂದು ಅಧ್ಯಯನ, ೧೯೯೫, ಪು.೧೧೪

೧೬. ಐದು ದಾನ್ಯಗಳಾದ ಜೋಳ, ಗೋದಿ, ಕಡಲೆ, ತೊಗರಿ ಮತ್ತು ಶೇಂಗಾ ಇವುಗಳನ್ನು ಕೂಡಿಸಿ ಮಾಡಿರುತ್ತಾರೆ. ಈ ಗುಗ್ಗರಿಯನ್ನು ಇಲ್ಲವೆ ಬೇರೆ ಮಂಡಳವನ್ನು (ಚುರುಮುರಿ) ತೆಳುವಾದ ಬಟ್ಟೆಯಲ್ಲಿ ಕಟ್ಟಿ ತೊಟ್ಟಿಲಲ್ಲಿ ಮಗುವಿನ ಕೆಳಗಡೆ ಹಾಕಿರುತ್ತಾರೆ. ಕಾರ್ಯಕ್ರಮ ಮುಗಿದ ಬಳಿಕ ಅದನ್ನು ತೆಗೆದುಕೊಂಡು ದಬರಿಯಲ್ಲಿರುವ ಮಂಡಳ ಬೆರೆಸಿ ಎಲ್ಲರಿಗೂ ಹಂಚುತ್ತಾರೆ.

೧೭. ಡಾ. ಹರಿಲಾಲ್ ಕೆ. ಪವಾರ್ (ಸಂ), ಕರ್ನಾಟಕದ ಹೆಳವರು ಒಂದು ಅಧ್ಯಯನ, ೧೯೯೫, ಪು.೧೩೪

೧೮. ಡಾ. ಅರ್ಜುನ ಯು. ಗೊಳಸಂಗಿ, ದಲಿತರ ಬದುಕು ಮತ್ತು ಸಂಸ್ಕೃತಿ ಜಾನಪದೀಯ ಅಧ್ಯಯನ, ೨೦೦೦, ಪು.೧೫೮

೧೯. ಎಮ್.ಎಮ್. ರುದ್ರಯ್ಯ ಏಣಗಿ, ಶವಸಂಸ್ಕಾರ, ಪೂಜಾವಿಧಾನ ಹೇಳಿದ ಮಾಹಿತಿ.

೨೦. ಬೀದರ್ ಜಿಲ್ಲೆಯ ಜಂಗಮರು ಒಂದು ಅಧ್ಯಯನ ಪಿಎಚ್‌ಡಿ ಅಪ್ರಕಟಿತ ಮಹಾಪ್ರಬಂಧ, ೨೦೦೨, ಪು.೧೮೨

೨೧. ಹೆಬ್ಬಾಳೆ ಜಗನ್ನಾಥ, ೨೦೦೦, ಪು.೨೬

# ಅಧ್ಯಾಯ ೬

# ಹಬ್ಬಗಳು ಮತ್ತು ಧಾರ್ಮಿಕ ಕೇಂದ್ರಗಳು

೬.೧. ಹಬ್ಬದ ಪರಿಕಲ್ಪನೆ

೬.೨. ಹಿರಿಯರ ಹಬ್ಬ

೬.೩. ಯುಗಾದಿ

೬.೪. ಪಂಚಮಿ ಹಬ್ಬ

೬.೫. ಬನ್ನಿ ಹಬ್ಬ

೬.೬. ದೀಪಾವಳಿ

೬.೭. ಸೀಗಿ ಹುಣ್ಣಿಮೆ

೬.೮. ಗೌರಿ ಹುಣ್ಣಿಮೆ

೬.೯. ಸಂಕ್ರಾಂತಿ ಸಂಕ್ರಮಣ

೬.೧೦. ಶಿವರಾತ್ರಿ

೬.೧೧. ರಕ್ಷಾಬಂಧನ

## ೬.೧. ಹಬ್ಬದ ಪರಿಕಲ್ಪನೆ

'ಹಬ್ಬ' ಎಂಬ ಪದವು ಸಂಸ್ಕೃತದ 'ಪರ್ವನ್' ಶಬ್ದದ ತದ್ಭವ ರೂಪ. ಪರ್ವ ಅಂದರೆ, ಒಂದು ಮತ್ತೊಂದರ ಜೊತೆಗೆ ಸಂಧಿಸುವುದು ಎಂದರ್ಥ. ಸೂರ್ಯ ಚಂದ್ರರ ದಿಕ್ಕು ಬದಲಾಗುವುದೇ ಪರ್ವ. ಅದನ್ನೇ ನಮ್ಮ ಪೂರ್ವಜರು ಅಮವಾಸೆ, ಹುಣ್ಣಿಮೆಯೆಂದು ಹೆಸರಿಸಬಹುದಾಗಿದೆ. ಮಾನವ ತನ್ನ ಬಯಕೆಗಳನ್ನು ಈಡೇರಿಕೆಗಾಗಿ ಒಂದು ಸೀಮಿತವಾದ ಅವಧಿಯಲ್ಲಿ ಕೈಗೊಳ್ಳುವ ಹರಕೆ, ರೂಢಿ ಸಂಪ್ರದಾಯ, ಆಚರಣೆ, ಉತ್ಸವಗಳೇ ಹಬ್ಬಗಳಾಗಿ ಬಂದಿವೆ. ಮಹಾಕವಿ ಕಾಳಿದಾಸ ತನ್ನ ವಿಕ್ರಮೋರ್ವಶಿಯ ಕೃತಿಯಲ್ಲಿ 'ಉತ್ಸವ ಪ್ರಿಯಾಹಿ ಮನುಷ್ಯ' ಎಂದು ಹೇಳಿದ್ದನ್ನು ನೋಡಿದರೆ, ಮಾನವ ಐಹಿಕ ಸುಖ ಸಂತೋಷ ಹಾಗೂ ಮುಕ್ತಿ ಸಾಧನೆಗಾಗಿ 'ಹಬ್ಬ' ಆಚರಣೆಯಲ್ಲಿ ಬಂದಂತೆ ತೋರುತ್ತದೆ. ಸೃಷ್ಟಿಕರ್ತನಾದ ಶಿವನು ಪ್ರಪಂಚದ ಸ್ಥಿತಿಗೆ ಗ್ಲಾನಿಯುಂಟಾದಾಗ, ನಾನಾ ರೂಪಗಳಿಂದ ಅವತರಿಸಿ ಜಗತ್ತನ್ನು ಕಾಪಾಡುವನೆಂದು ಹೇಳುತ್ತಾನೆ. ಹೀಗೆ ಕಲ್ಯಾಣಕ್ಕಾಗಿ ಹರನು ಅವತರಿಸಿ ಬಂದ ಸಮಯದಲ್ಲಿ ಅವನ ರೂಪವನ್ನು ಸ್ಮರಿಸಿ ಅವನಿಗೆ ಎಲ್ಲರೂ ಯಥಾಶಕ್ತಿ ಕೃತಜ್ಞತೆಯನ್ನು ಅರ್ಪಿಸುವರು. ಈ ತೆರನಾದ ಸಮಾರಂಭದ ದಿನಗಳನ್ನು ಜನಪದರು ಹಬ್ಬ-ಹರಿದಿನಗಳೆಂದು ಕರೆಯುತ್ತ ಬಂದಿರಬೇಕು. ಮಾನವ ತನ್ನ ನಿತ್ಯ ಲೌಕಿಕ ಜೀವನದಿಂದ ಅಲೌಕಿಕ ಜೀವನದತ್ತ ಮುನ್ನಡೆಯಲು ಸನಾತವಾಗಿ ಆಚರಿಸುತ್ತ ಬಂದ ಈ ಹಬ್ಬಗಳು ಸಹಾಯಕವಾಗಿವೆ. ಹೀಗಾಗಿ ಹಬ್ಬದ ದಿನವೆಂದರೆ ಪವಿತ್ರ ದಿನವಾಗಿದೆ. ಅದನ್ನು ಬಡವ-ಬಲ್ಲಿದವರೆಲ್ಲರೂ ಹರುಷದಿಂದ ಆಚರಿಸುತ್ತಾ ಬಂದಿದ್ದಾರೆ.[೧]

ಸಂಸ್ಕೃತಿಯ ತವರೂರಾದ ಭಾರತವು ವಿವಿಧ ಧರ್ಮ ಮತ್ತು ಜಾತಿಗಳ ಮಹಾ ಸಂಗಮ ಕ್ಷೇತ್ರವಾಗಿದೆ. ಈ ದೇಶದಲ್ಲಿ ಪ್ರತಿನಿತ್ಯವೂ ಒಂದಲ್ಲ ಒಂದು ಜಾತಿಯ ಅಥವಾ ಧರ್ಮದ ಹಬ್ಬ ಮತ್ತು ಆಚರಣೆಗಳು ನಡೆದಿರುತ್ತವೆ. ಇಂತಹ ಹಬ್ಬ ಮತ್ತು ಆಚರಣೆಗಳಿಗೆ ಮುಖಾಮುಖಿಯಾದ ಇನ್ನೊಂದು ಧರ್ಮ, ಇದರ ಪ್ರಭಾವದಿಂದ ತನ್ನದಲ್ಲವನ್ನು ಸ್ವೀಕರಿಸುವ ಮತ್ತು ನಿರಾಕರಿಸುವ ಸಂಸ್ಕಾರಕ್ಕೆ ಒಳಗಾಗಿರುತ್ತದೆ. ಇದು ಒಂದು ಸಂಸ್ಕೃತಿಯ ಜೀವಂತಿಕೆಗೆ ಪುಷ್ಠಿಕೊಡುವುದು. ತಮ್ಮ ಪಾರಂಪರಿಕ ಸಾಂಸ್ಕೃತಿಕ ಮೌಲ್ಯಗಳನ್ನು ಕಟ್ಟಿ ಬೆಳೆಸಿ, ಕಾಪಾಡುವ ಮತ್ತು ಮುಂದುವರೆಸಿಕೊಂಡು ಹೋಗುವ ಎದೆಗಾರಿಕೆಯು ಅನೇಕ ಸಮುದಾಯಗಳಿಗೆ ಆದಿಮಕಾಲದಿಂದಲೂ ಬಳುವಳಿಯಾಗಿ ಬಂದಿದೆ. ಇಂತಹ ಸಂಸ್ಕಾರ ಮತ್ತು ತನ್ನ ಸಂಸ್ಕೃತಿಯ ರಕ್ಷಣೆಗಳಿಗೆ ಹಬ್ಬದ ಆಚರಣೆಗಳು ಪುನಃಶ್ಚೇತನ ತಂದುಕೊಡುತ್ತಾ ಪುನರ್ ಮನನಕ್ಕೆ ದಾರಿ ಮಾಡಿಕೊಡುತ್ತವೆ. ಏಕೆಂದರೆ ಯಾವುದೇ ಒಂದು ಆಚರಣೆಯನ್ನು ವಿನಾಕಾರಣ ಕೈ ಬಿಡುವ ಮತ್ತು ಹೊಸದಾಗಿ ಸೇರಿಸಿಕೊಳ್ಳುವುದು ಸುಲಭ ಸಾಧ್ಯವಲ್ಲ. ಅನ್ಯರ ಪ್ರಭಾವಕ್ಕೆ ಒಳಗಾಗಿ ತನ್ನ ಮೂಲತನ ಬದಲಾವಣೆಯ ರಾಜೀಸೂತ್ರಕ್ಕೆ ಅಷ್ಟೊಂದು ಸುಲಭವಾಗಿ ಸಾಧ್ಯವಾಗದು. ಕಾರಣ ಅವರು ಆಚರಿಸುವ ಹಬ್ಬ ಮತ್ತು ಧಾರ್ಮಿಕ

ಆಚರಣೆಗಳಲ್ಲಿ ತಪ್ಪಾದರೆ ಪಾಪಕ್ಕೆ ಗುರಿಯಾಗುತ್ತೇವೆಂಬ ನಂಬಿಕೆ ಮತ್ತು ನಮ್ಮನ್ನು ರಕ್ಷಿಸುವ ದೇವರು ಮುನಿಸಿಕೊಳ್ಳುತ್ತಾನೆಂಬ ಹೆದರಿಕೆ, ಏಕೆಂದರೆ, ನಮ್ಮ ಕಲ್ಪನೆಗೂ ನಿಲುಕಲಾರದ ಮತ್ತು ಈ ಜಗತ್ತಿನ ಸಕಲ ಜೀವ ಜಂತುಗಳನ್ನು ಕಾಪಾಡುವ ಮತ್ತು ನಿಯಂತ್ರಿಸುವ ಶಕ್ತಿಯ ಬಗ್ಗೆ ನಮಗಿರುವ ಅಪಾರವಾದ ನಂಬಿಕೆ. ಆ ಶಕ್ತಿಯೇ ದೇವರೆಂದು ನಮ್ಮ ನಂಬಿಕೆಯಾಗಿದೆ. ದೇವರನ್ನು ನಮ್ಮ ಅನೇಕ ಹಬ್ಬ ಮತ್ತು ಆಚರಣೆಗಳಲ್ಲಿ ವಿಶೇಷವಾಗಿ ಪೂಜಿಸಿ ಶಾಂತಿಗೊಳಿಸುತ್ತೇವೆ. ಇದರ ಮೂಲ ಉದ್ದೇಶ ನಮಗೆ ಎದುರಾಗುವ ಅನೇಕ ಕಷ್ಟ ಕಾರ್ಪಣ್ಯಗಳನ್ನು ದೂರ ಮಾಡಿ ನಮ್ಮನ್ನು ಗಂಡಾಂತರಗಳಿಂದ ಪಾರು ಮಾಡಿ ರಕ್ಷಿಸಿ ಕಾಪಾಡಬೇಕೆನ್ನುವುದು. ಆ ಕಾರಣಕ್ಕಾಗಿ ಅಗೋಚರ ಶಕ್ತಿಯ ಪರಿಕಲ್ಪನೆಯು ಮಾನವನಲ್ಲಿ ಬೆಳೆದು ಬಂತು. ತನಗೆ ಅರ್ಥವಾಗದ ಮತ್ತು ಅಗಾಧವಾಗಿ ಕಂಡ ಪ್ರಾಣಿ ಪಕ್ಷಿ ಗಿಡ ಮರ, ಕಲ್ಲು ಬಂಡೆ, ಬೆಟ್ಟ ಗುಡ್ಡಗಳನ್ನು ದೇವರೆಂದು ಪೂಜಿಸುತ್ತಾ ಬಂದ. ಇದಕ್ಕೆ ಸಾಲದೆಂಬಂತೆ ತನ್ನ ಕಲ್ಪನೆಗೆ ತಕ್ಕಂತೆ ದೇವರ ಭೌತಿಕ ಆಕಾರವನ್ನು ಸೃಷ್ಟಿಸಿಕೊಂಡು ಆರಾಧಿಸತೊಡಗಿದ. ಹೀಗೆ ಮನುಷ್ಯ ದೇವರನ್ನು ಕಲ್ಪಿಸಿಕೊಂಡುದರ ಕುರಿತಾಗಿ ಡಾ. ಹಿ.ಚಿ. ಬೋರಲಿಂಗಯ್ಯ ಅವರು ಹೀಗೆ ಉಲ್ಲೇಖಿಸಿದ್ದಾರೆ. "ಮನುಷ್ಯ ಎರಡು ಕಾರಣಕ್ಕಾಗಿ ದೇವರನ್ನು ಕಲ್ಪಿಸಿಕೊಂಡ ಎಂಬ ವಾದಗಳಿವೆ. ಪ್ರಕೃತಿಯ ಎಲ್ಲ ವೈಚಿತ್ರ್ಯಗಳನ್ನು ಬಿಡಿಸಲಾರದ ನಿಗೂಢಗಳನ್ನು ಗಮನಿಸಿದ ಆದಿಮ ಮನುಷ್ಯ ತನ್ನನ್ನು ಮೀರಿದ ಅಗೋಚರ ಶಕ್ತಿಯೊಂದಿದೆ, ಎಂದು ನಂಬಿದ. ಆ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನ್ನ ಒಳ್ಳೆಯದನ್ನು ಸಾಧಿಸಿಕೊಳ್ಳಬೇಕು ಎಂಬುದು ಅವನ ಉದ್ದೇಶವಾಯಿತು. ಯಾಕೆಂದರೆ ನಿಸರ್ಗದ ಒಡಲಲ್ಲಿ ಬಾಳುತ್ತಿದ್ದ ಅವನಿಗೆ ಸಹಜವಾಗಿಯೇ ನೂರೆಂಟು ಕಂಟಕಗಳು ಎದುರಾಗುತ್ತಿದ್ದವು. ಆದ್ದರಿಂದ ಅಗೋಚರ ಶಕ್ತಿಯನ್ನು ಓಲೈಸಿಕೊಳ್ಳುವ ಮೂಲಕ ತನಗೆ ಒದಗುವ ಕಷ್ಟಗಳಿಂದ ಪಾರಾಗಬೇಕು ಎಂಬ ಸಹಜ ಉದ್ದೇಶವಿತ್ತು. ಆದ್ದರಿಂದ ಈ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಬಗೆ ಹೇಗೆ ಎಂಬ ಪ್ರಶ್ನೆಯಾಗಿದೆ. ಅವನು ಎರಡು ರೀತಿಯಲ್ಲಿ ದೈವವನ್ನು ಅಥವಾ ಶಕ್ತಿಯನ್ನು ಗೆಲ್ಲುವ ಪ್ರಯತ್ನ ಮಾಡಿದ್ದಾನೆ."

೧. ಆರಾಧನೆಯ ಮೂಲಕ ಒಲಿಸಿಕೊಳ್ಳುವುದು.

೨. ಮಾಟದ ಮೂಲಕ ನಿಯಂತ್ರಿಸುವುದು.

ಈ ಸಮುದಾಯದವರು ಹೇಳುವ ಹಾಗೆ ಆರಾಧನೆಯ ಮೂಲಕ ದೇವರನ್ನು ಒಲಿಸಿಕೊಳ್ಳುವ ಪ್ರಯತ್ನ ನಮ್ಮ ಲಿಂಗಾಯಿತ ಸಮುದಾಯಗಳನ್ನು ಹಬ್ಬಗಳ ಆಚರಣೆಯಲ್ಲಿ ತೊಡಗಿಸಿರಬೇಕು. ಅಂತೆಯೇ ಲಿಂಗಾಯಿತ ಗಾಣಿಗ ಸಮುದಾಯ ಅಂತಹ ಅನೇಕ ಹಬ್ಬ ಮತ್ತು ಧಾರ್ಮಿಕಾಚರಣೆಗಳನ್ನು ರೂಢಿಸಿಕೊಂಡು ಬಂದಿರುವರು.

ಗಾಣಿಗ ಸಮುದಾಯದವರು ಈಗ ತಾವಿರುವ ಸ್ಥಳಗಳಿಗೆ ವಲಸೆ ಬಂದು ನೆಲೆಸಿರುವುದಾಗಿ ತಿಳಿದು ಬರುತ್ತದೆ. ಹೀಗೆ ಇವರು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಬರುವಾಗ ತಮ್ಮ ಜೊತೆಗೆ ತಾವು ಆರಾಧಿಸುತ್ತಿದ್ದ ದೇವರುಗಳನ್ನು ಸಹ ಕರೆತಂದರು. ಕಾಲಾನುಸಾರ ತಮ್ಮ ದೇವರುಗಳ ಜೊತೆಗೆ

ಪ್ರಾದೇಶಿಕವಾಗಿ ಪ್ರಭಾವವಿರುವ ದೇವರುಗಳನ್ನು ಸಹ ಪೂರ್ವ ದೇವರುಗಳ ಜೊತೆಗೆ ಪೂಜಿಸತೊಡಗಿದರು. ಬಹುತೇಕವಾಗಿ ಕನ್ನಡ ಗಾಣಿಗರು ಕರ್ನಾಟಕದ ಆಯಾ ಭೌಗೋಳಿಕ ಪ್ರದೇಶಕ್ಕೆ ತಕ್ಕಂತೆ ಅನೇಕ ದೇವರುಗಳನ್ನು ಪೂಜಿಸುವುದು ಕಂಡುಬರುತ್ತದೆ. ಇವರು ಆರಾಧಿಸುವ ಕೆಲವು ದೇವರ ಹಬ್ಬ ಮತ್ತು ಜಾತ್ರೆಯನ್ನು ಮಾತ್ರ ಇಲ್ಲಿ ವಿವರಿಸಲಾಗಿದೆ.

ಅಧ್ಯಯನದ ಭೌಗೋಳಿಕ ವ್ಯಾಪ್ತಿಯಾದ ಬಳ್ಳಾರಿ ಜಿಲ್ಲೆಯ ಗಾಣಿಗ ಮನೆದೇವರು ಇಲ್ಲಿ ಪ್ರಾದೇಶಿಕವಾಗಿ ಪ್ರಸಿದ್ಧವಿರುವ ದೇವರುಗಳಾಗಿವೆ. ಬಳ್ಳಾರಿ ತಾಲೂಕಿನ ಗಾಣಿಗರು: ದುರುಗಮ್ಮ, ಯಲ್ಲಮ್ಮ, ಆಂಜಿನೇಯ, ಕೊಟ್ಟೂರೇಶ್ವರ, ಮೈಲಾರಲಿಂಗಪ್ಪ, ಗುಡ್ಡದ ಎಲ್ಲಮ್ಮ, ಹುಲಿಗೆಮ್ಮ, ಕುಮಾರಸ್ವಾಮಿ ಇತ್ಯಾದಿ ಜಾತ್ರೆಗಳನ್ನು ಮಾಡುತ್ತಾರೆ ಮತ್ತು ದೇವರುಗಳನ್ನು ಪೂಜಿಸುತ್ತಾರೆ.

**ಹಗರಿಬೊಮ್ಮನಹಳ್ಳಿಯ ತಾಲೂಕಿನ ಗಾಣಿಗರು:** ಹುಲಿಗೆಮ್ಮ, ವೀರಭದ್ರೇಶ್ವರ, ಆಂಜನೇಯ, ಮೈಲಾರ ಲಿಂಗಪ್ಪ, ಎಲ್ಲಮ್ಮ, ಇಟಗಿ ಭೀಮಮ್ಮ, ಗೋಣಿಬಸಪ್ಪ, ಗವಿಸಿದ್ದೇಶ್ವರ, ಕೊಟ್ಟೂರೇಶ್ವರ ಇತ್ಯಾದಿ ದೇವರುಗಳನ್ನು ಪೂಜಿಸುತ್ತಾರೆ.

**ಹೂವಿನ ಹಡಗಲಿಯ ತಾಲೂಕಿನ ಗಾಣಿಗರು:** ಮೈಲಾರ ಲಿಂಗೇಶ, ಎಲ್ಲಮ್ಮ, ಹುಲಿಗೆಮ್ಮ, ಕೊಟ್ಟೂರೇಶ್ವರ, ವೀರಭದ್ರೇಶ್ವರ, ಬೆಟ್ಟದ ಮಲ್ಲಣ್ಣ, ಆಂಜನೇಯ, ಗವಿಸಿದ್ಧೇಶ್ವರ, ಮಸಲವಾಡದ ವೀರಣ್ಣ, ಸಿಂಗಟಾಲೂರು ವೀರಣ್ಣ, ಕೂಲಳ್ಳಿ ಗೋಣಿ ಬಸವೇಶ್ವರ ದೇವರುಗಳನ್ನು ಪೂಜಿಸುತ್ತಾರೆ.

**ಹೊಸಪೇಟೆ ತಾಲೂಕಿನ ಗಾಣಿಗರು:** ಕಣವಿ ಈರಣ್ಣ, ಹುಲಿಗೆಮ್ಮ, ಗುಡ್ಡದ ಎಲ್ಲಮ್ಮ, ಕೊಟ್ಟೂರೇಶ್ವರ, ಕೊಪ್ಪಳದ ಗವಿಸಿದ್ಧೇಶ್ವರ, ಆಂಜನೇಯ, ಕುರುಗೋಡು ದೊಡ್ಡಬಸವೇಶ್ವರ, ಮೈಲಾರ ಲಿಂಗೇಶ, ಗೋಣಿ ಬಸವೇಶ್ವರ ಕೂಲಹಳ್ಳಿ, ದೇವರುಗಳನ್ನು ಪೂಜಿಸುತ್ತಾರೆ.

**ಕೂಡ್ಲಿಗಿ ತಾಲೂಕಿನ ಗಾಣಿಗರು:** ನಾಯಕನಟ್ಟಿ ತಿಪ್ಪೇಸ್ವಾಮಿ, ಹುಲಿಗೆಮ್ಮ, ಉಜ್ಜಿನಿ ಮರುಳ ಸಿದ್ದೇಶ್ವರ, ಕೊಟ್ಟೂರು ಕೊಟ್ಟೂರೇಶ್ವರ, ಆಂಜನೇಯ, ಬಸವೇಶ್ವರ ಇತ್ಯಾದಿ ದೇವರುಗಳನ್ನು ಪೂಜಿಸುವರು.

**ಸಿರುಗುಪ್ಪ ತಾಲೂಕಿನ ಗಾಣಿಗರು:** ಉರ್ಕುಂದಿ ವೀರಣ್ಣ, ತಾಯಮ್ಮ, ಯಲ್ಲಮ್ಮ, ಹುಲಿಗೆಮ್ಮ, ಕುರುಗೋಡು ದೊಡ್ಡಬಸವೇಶ್ವರ, ಗವಿಸಿದ್ದೇಶ್ವರ, ಆಂಜನೇಯ, ಗುಡ್ಡದ ಮಲ್ಲಯ್ಯ ದೇವರುಗಳನ್ನು ಪೂಜಿಸುತ್ತಾರೆ.

**ಸೊಂಡೂರು ತಾಲೂಕಿನ ಗಾಣಿಗರು:** ಕುಮಾರಸ್ವಾಮಿ, ಹುಲಿಗೆಮ್ಮ, ಮೈಲಾರಲಿಂಗೇಶ, ವೆಂಕಟೇಶ್ವರ, ಎಲ್ಲಮ್ಮ, ಕೊಲ್ಲೂರಮ್ಮ, ಆಂಜನೇಯ, ಗುಡ್ಡದ ಮಲ್ಲಯ್ಯ ದೇವರುಗಳನ್ನು ಪೂಜಿಸುತ್ತಾರೆ. ಈ ಜಿಲ್ಲೆಯ ಹಬ್ಬ ಮತ್ತು ಧಾರ್ಮಿಕ ಕಾರ್ಯಕ್ರಮಗಳನ್ನು ಇಲ್ಲಿ ವಿಶೇಷವಾಗಿ ಗಮನಿಸಿ ಪ್ರಸ್ತಾಪಿಸುತ್ತಿದ್ದೇನೆ.

ಲಿಂಗಾಯಿತ ಗಾಣಿಗ ಸಮುದಾಯದವರಿಗೆ ದೇವರೆಂದರೆ ಶಿವ. ಧರ್ಮವೆಂದರೆ ಹಿಂದು ಲಿಂಗಾಯಿತ "ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಪರಂಪರೆಯ ಪ್ರಕಾರ ಗಾಣಿಗರು ಮೂಲತಃ 'ಸೂರ್ಯವಂಶದ

ಕ್ಷತ್ರಿಯರು'. ಇವರು 'ಕಪಿಲ ಮಹಾಮುನಿ'ಯ ಶಿಷ್ಯರು, ಈ ಮಹಾಮುನಿಯ ಪ್ರಭಾವಕ್ಕೆ ಒಳಗಾದ ಒಂದು ದೊಡ್ಡ ಗುಂಪು ಅನಾದಿ ಕಾಲದಿಂದ ನಿಷ್ಠಾವಂತ ಶಿವೋಪಾಸಕರಾಗಿದ್ದು ಶಿವಶರಣರ ಧಾರ್ಮಿಕ ಕ್ರಾಂತಿಯಿಂದಾಗಿ ಈ ಗುಂಪಿನಲ್ಲಿ ಪರಿವರ್ತನೆಯುಂಟಾಯಿತು. ಇವರು ನಿಷ್ಠೆಯುಳ್ಳ ವೀರಶೈವರಾಗಿ ಬಾಳುತ್ತಾ ಬಂದರು. ಇತರ ಲಿಂಗಾಯತರಂತೆ ಇವರೂ ಮನೆದೇವರನ್ನು ಹೊಂದಿದ್ದಾರೆ. ಈ ಮೇಲೆ ಹೇಳಿದ ಎಲ್ಲಾ ದೇವರುಗಳನ್ನು ಪೂಜಿಸುತ್ತಾರೆ. ಶಕ್ತಿ ದೇವತೆಗಳು ಇವರ ಮನೆದೇವರುಗಳಾಗಿದ್ದಾರೆ. ತಿರುಪತಿ ವೆಂಕಟರಮಣ, ಪಂಡರಪುರ ವಿಠ್ಠಲ ಮುಂತಾದ ವೈದಿಕ ಪರಂಪರೆಯ ದೇವರುಗಳನ್ನು ಮನೆದೇವರೆಂದು ಪೂಜಿಸುತ್ತಾರೆ. ಊರ ದೇವರಾದ ಹನುಮಂತ, ದುರ್ಗಮ್ಮ ಗ್ರಾಮದೇವತೆಗಳನ್ನು ಪೂಜಿಸುತ್ತಾರೆ. ಜೊತೆಗೆ ಮಠ ಮಾನ್ಯಗಳಿಗೂ ನಡೆದುಕೊಳ್ಳುತ್ತಾರೆ.

ಕುರುಬರಿಗೆ ಬೀರದೇವರಿದ್ದಂತೆ ಗಾಣಿಗರಿಗೆ ನಿರ್ದಿಷ್ಟ ದೇವರಿಲ್ಲ. ಗಾಣಿಗ ಸಮುದಾಯದವರೆಲ್ಲರೂ ಸಾಮೂಹಿಕವಾಗಿ ಸೇರಿಕೊಂಡು ಆಚರಿಸುವ ಹಬ್ಬ ಹರಿದಿನಗಳಿಲ್ಲ. ಕೆಲವೊಂದು ಸಮಾಜದವರು ಗುರುಪೀಠವನ್ನು ಹೊಂದಿದಂತೆ ಗಾಣಿಗರು ಯಾವ ಗುರುಪೀಠವನ್ನೂ ಹೊಂದಿಲ್ಲ. ಅವರವರ ನಂಬಿಕೆಗೆ ಅನುಗುಣವಾಗಿ ದೇವರು ಗುರುಗಳಿಗೆ ನಡೆದುಕೊಳ್ಳುತ್ತಾರೆ. ಹಾಗೆಯೇ ಗಾಣಿಗರ ಒಳಪಂಗಡಗಳಲ್ಲಿ ಯಾವುದೇ ಧಾರ್ಮಿಕ ವಿಶಿಷ್ಟ ಆಚರಣೆಗಳು ಕಂಡು ಬರುವುದಿಲ್ಲ. ಬಳ್ಳಾರಿ ಜಿಲ್ಲಾ ಗಾಣಿಗರು ಲಿಂಗಾಯಿತರಾದ್ದರಿಂದ ಉಳಿದ ಲಿಂಗಾಯಿತರಂತೆಯೇ ಆಚಾರ ವಿಚಾರಗಳಿವೆ. ಅವರು ಅನುಸರಿಸಿಕೊಂಡು ಬಂದ ಕೆಲವು ಹಬ್ಬಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

## ವಿವಿಧ ಹಬ್ಬಗಳು

### ೬.೨. ಹಿರಿಯರ ಹಬ್ಬ

ಮಾನವನ ಮರಣದ ನಂತರದ ಭೌತಿಕ ದೇಹಕ್ಕೆ ಗೌರವವನ್ನು ಸಲ್ಲಿಸಿ ಸಂಸ್ಕಾರ ಮಾಡುತ್ತಾರೆ. ಇದರ ಜೊತೆಗೆ ಗಾಣಿಗರಿಗೆ ಮೃತನ ಆತ್ಮಸಂಬಂಧ ಕುರಿತಾಗಿ ಇವರಲ್ಲಿ ಅನೇಕ ಗಾಢವಾದ ನಂಬಿಕೆಗಳಿವೆ. ಮೃತರ ಆತ್ಮಶಾಂತಿಗಾಗಿ ಮತ್ತು ಅವರು ನಮ್ಮನ್ನು ಸಂರಕ್ಷಿಸಿ ಕಾಪಾಡಬೇಕು ಎನ್ನುವುದಕ್ಕಾಗಿ ಪ್ರತಿವರ್ಷ ಮಹಾನವಮಿಯಲ್ಲಿ ಗಾಣಿಗರು ಹಿರಿಯರ ಹಬ್ಬವನ್ನು ಶ್ರದ್ಧೆಯಿಂದ ಆಚರಿಸುತ್ತಾರೆ. ಹಿರಿಯರಿಗೆ ಎಡೆ ಹಾಕುವುದಕ್ಕೆ ಹಿರಿಯರ ಪೂಜೆ ಎಂದು ಕರೆಯುವರು. ಮಹಾನವಮಿಯ ದಿವಸ ಮಧ್ಯಾಹ್ನ ಸಿಹಿ ಅಡಿಗೆಯನ್ನು ಮಾಡಿ ದೇವರಿಗೆ ಎಡೆಹಾಕಿ ಎಲ್ಲರೂ ಊಟ ಮಾಡುವರು. ಸಾಯಂಕಾಲ ಹಿರಿಯರಿಗೆ ಎಡೆ ಹಾಕುವ ಕಾರ್ಯ ಮಾಡುತ್ತಾರೆ. ಅಂದು ಸಾಯಂಕಾಲ ದೇವರ ಮನೆಯನ್ನು, ಉಳಿದ ಭಾಗವನ್ನು ಮಡಿಮಾಡಿ, ದೇವರ ಜಗುಲಿಯ ಮುಂದೆ ಇಲ್ಲವೆ ಗೋಡೆಗೆ ಒಂದು ಮಣಿ ಇರಿಸಿ ಅದರ ಮೇಲೆ ಸ್ವಲ್ಪ ಅಕ್ಕಿಕಾಳು ಹಾಕಿ ಒಂದು ತುಂಬಿದ ಚರಿಗೆಯನ್ನು ಇಡುವರು. ಹಿರಿಯರಿಗೆ ಏರಿಸುವ ಬಟ್ಟೆಯನ್ನು ಸೆರಗು ಮೇಲೆಮಾಡಿ ಮಡಚಿ, ದಾರದಿಂದ ಕಟ್ಟಿ ಚರಿಗಿಯ ಮುಂದೆ ಇರಿಸುತ್ತಾರೆ. ಸಿಹಿಯ ವಿವಿಧ ಬಗೆಯ ಅಡಿಗೆಯನ್ನು ಮಾಡಿ ಈ ದಿವಸ ಎಡೆಮಾಡುತ್ತಾರೆ. ಮೃತರು ಉಪಯೋಗಿಸುತ್ತಿದ್ದ ಇಷ್ಟವಾದ ಕೆಲವು

ತಿನಿಸುಗಳನ್ನು ಇಡುತ್ತಾರೆ. (ಎಲೆ-ಅಡಿಕೆ, ತಂಬಾಕು, ಸಿಗರೇಟು, ಬೀಡಿ ಮುಂತಾದವು). ವಿಶೇಷವಾಗಿ ಈ ದಿವಸ ಗಾಣಿಗರು ಹೋಳಿಗೆಯನ್ನು ಮಾಡಿ ಎಡೆಗೆ ಇಡುವರು. ಮನೆಯವರೆಲ್ಲರು, ಬಂದು ಬಳಗದವರು ಸೇರಿ ಪೂಜೆ ಮಾಡುತ್ತಾರೆ. ಹೆಣ್ಣು ಮಗಳಾಗಿದ್ದರೆ ದಂಡೆ ಮತ್ತು ಮಂಗಳ ದ್ರವ್ಯಗಳನ್ನು ಮುಡಿಸುವರು. ಮೃತರು ಉಪಯೋಗಿಸಿದ ಆಭರಣಗಳು ಇದ್ದರೆ, ಅವುಗಳನ್ನು ತೊಡಗಿಸುವರು. ಪೂಜೆ ಮುಗಿದ ನಂತರ ಮನೆಯವರೆಲ್ಲರೂ ದೇವರ ಮನೆಯನ್ನು ಬಿಟ್ಟು ಹೊರಗಡೆ ಕಟ್ಟೆಗೆ ಬಂದು ಕೊಡುತ್ತಾರೆ. ಅಂದರೆ ಈ ಸಂದರ್ಭದಲ್ಲಿ ಹಿರಿಯರ ಆತ್ಮಬಂಧು ಪೂಜೆಯನ್ನು ಸ್ವೀಕರಿಸುವುದು ಎಂದು ಇವರ ನಂಬಿಕೆ. ಹಿರಿಯರಿಗೆ ಹಾಕಿದ ಎಡೆಯನ್ನು ಮನೆಯವರಿಗೆ ಮಾತ್ರ ಪ್ರಸಾದವೆಂದು ಕೊಡುತ್ತಾರೆ. ಮಾರನೆಯ ದಿವಸ ಹಿರಿಯರನ್ನು ಇಳಿಸಿ ತಂಬಿಗೆಯ ನೀರನ್ನು ಬೇವಿನ ಗಿಡ ಇಲ್ಲವೆ ಪತ್ರಿಗಿಡಕ್ಕೆ ಹಾಕುವರು. ಮುತ್ತೈದೆಯರು ಹಿರಿಯರಿಗೆ ಏರಿಸಿದ ಬಟ್ಟೆಯನ್ನು ಮೊದಲು ಉಡುತ್ತಾರೆ.

ಈ ಜಿಲ್ಲೆಯ ಕೆಲವು ಪ್ರದೇಶಗಳಲ್ಲಿ ಹಿರಿಯರಿಗೆ ಎಡೆ ಹಾಕುವ ಹಬ್ಬವನ್ನು ದಸರಾ ಹಬ್ಬದ ಅಖಂಡ ಪೂಜೆಯ ದಿವಸ ಮತ್ತು ವಿಜಯ ದಶಮಿಯ ದಿವಸ ಆಚರಿಸುವುದು ಕಂಡುಬರುತ್ತದೆ. ದಸರಾ ಹಬ್ಬದ ಸಂದರ್ಭದಲ್ಲಿ ಸಂಪ್ರದಾಯದ ಅನೇಕ ಲಿಂಗಾಯಿತ ಸಮುದಾಯದವರು ತಮ್ಮದೇ ಆದ ಪದ್ಧತಿಯಂತೆ ಹಬ್ಬವನ್ನು ಆಚರಿಸುತ್ತಾರೆ. ಸಾಮಾನ್ಯವಾಗಿ ಅಖಂಡ ಪೂಜೆಯ ದಿವಸ ಪ್ರತಿಯೊಬ್ಬ ಕಸುಬುದಾರರು, ಕುಶಲಕರ್ಮಿಗಳು, ವ್ಯಾಪಾರಿಗಳು, ಕೃಷಿಕರು ಬಳಸುವ ಸಾಮಗ್ರಿಗಳನ್ನು ಪೂಜಿಸುವುದು ವಾಡಿಕೆ. ಲಿಂಗಾಯಿತ ಸಮುದಾಯಗಳಲ್ಲಿ ಈ ಆಚರಣೆಯಲ್ಲಿ ಕೆಲವು ವಿಶಿಷ್ಟತೆಗಳನ್ನು ಗಮನಿಸಬಹುದು. ಗಾಣಿಗರು ಈ ದಿವಸ ದೇವರ ಜಗುಲಿಯ ಪಕ್ಕಕ್ಕೆ ಪುಸ್ತಕ, ತಾಳು, ಹಲಗು, ಸೆಡ್ಡಿ, ಸೇರು, ಗುದ್ಲಿ, ಕೊಡ್ಲಿ, ಕುಡಗೋಲು ಇತ್ಯಾದಿ ಆಯುಧಗಳನ್ನು ಮಡಿ ನೀರಿನಿಂದ ತೊಳೆದು ಇರಿಸುತ್ತಾರೆ. ಮಾವಿನ ತೋರಣ ಕಟ್ಟಿ ಐಬ್ರೀಡ್ ಜೋಳ ಮತ್ತು ಸಣ್ಣ ಗುರೆಳ್ಳಿನ ದಂಟುಗಳನ್ನು ಇರಿಸಿ ಸಿಂಗರಿಸುತ್ತಾರೆ. ದೇವರ ಜಗಲಿಯ ಮುಂದೆ ಕಳಸ ತುಂಬಿ, ಪೂಜೆಯನ್ನು ಮಾಡಿ ಹೋಳಿಗೆ ಮತ್ತು ಸಜ್ಜಕದ ಎಡೆಯನ್ನು ನೈವೇದ್ಯ ಮಾಡುವರು. ಮನೆಯಲ್ಲಿ ದೇವರಿಗೆ ಎಡೆಹಾಕಿ ಬನ್ನಿ ಮಹಾಕಾಳಿಗೆ ಉಡಿ ಮತ್ತು ಎಡೆಕೊಟ್ಟು ಬರುತ್ತಾರೆ. ಸಾಯಂಕಾಲ ಇಲ್ಲವೇ ರಾತ್ರಿ ಏಳರಿಂದ ಊರಿನ ಪದ್ಧತಿಯ ಪ್ರಕಾರ ಊರ ಸಮಾಜದ ಜೊತೆಗೆ ಬನ್ನಿ ಮುಡಿಯುವರು. ಮನೆಯಲ್ಲಿ ತಾಯಿ, ತಂದೆ, ದೊಡ್ಡಪ್ಪ, ದೊಡ್ಡಮ್ಮ, ಮನೆಯ ದೇವರಿಗೆ, ಓಣಿಯಲ್ಲಿರುವ ಎಲ್ಲಾ ಗೆಳೆಯರಿಗೆ ಮತ್ತು ಊರಿನ ದೇವಸ್ಥಾನಗಳಿಗೆ ಬನ್ನಿಯನ್ನು ಅರ್ಪಿಸಿ ಹಿರಿಯರಿಗೆ ಬನ್ನಿಕೊಟ್ಟು ನಮಸ್ಕರಿಸುವರು. ಸಣ್ಣವರಿಂದ ಬನ್ನಿಯನ್ನು ಸ್ವೀಕರಿಸಿ ಕೆಲವರು ಹಣ ಕೊಡುವರು, ಇನ್ನು ಕೆಲವರು 'ಬನ್ನಿಕೊಟ್ಟು ಬಂಗಾರದಂಗ ಇರೋಣ' ಎನ್ನುವರು. ಮಾರನೆಯ ದಿವಸ ಮತ್ತೇ ಹೋಳಿಗೆ ಮಾಡಿ ಕರಿ ಊಟ ಮಾಡುತ್ತಾರೆ.

### ೬.೩. ಯುಗಾದಿ

'ಯುಗಾದಿ' ಎಂಬ ಸಂಸ್ಕೃತ ಪದದ ತದ್ಭವ ರೂಪವೇ 'ಯುಗಾದಿ'. ಸಂಸ್ಕೃತದಲ್ಲಿ 'ಯುಗ' ಎಂದರೆ ವರ್ಷ. 'ಆದಿ'ಯೆಂದರೆ ಆರಂಭ ಎಂದರ್ಥ. ಆದ್ದರಿಂದ (ಯುಗ+ಆದಿ) ಯುಗಾದಿಯೆಂದರೆ, ವರ್ಷಾರಂಭ

ಅದು ಎಲ್ಲದಕ್ಕೂ ಹೊಸದಿನ. ನಿಸರ್ಗದಲ್ಲಿಯೂ ಗಿಡ ಮರ ಚಿಗಿತು ಹೊಸ ಜೀವ ಕಳೆ ಬಂದಂತಾಗುತ್ತದೆ.[೨] ಹೀಗಾಗಿ ಗಾಣಿಗರು ಕೂಡಾ 'ಯುಗಾದಿ'ಯನ್ನು ಹೊಸವರ್ಷವೆಂದು ಆಚರಿಸುತ್ತಾರೆ. 'ಉಗಾದಿ ಉದ್ರಿ' ಎಂಬುದು ಗಾಣಿಗರಲ್ಲಿ ಬಹಳ ಪ್ರಚಲಿತವಿರುವ ಮಾತು. ಯುಗಾದಿ ಬಂತೆಂದರೆ ಚಾದಂಗಡಿ, ಬಟ್ಟೆ ಅಂಗಡಿ, ಪಾನ್‌ಬೀಡಿ ಅಂಗಡಿ, ಕಿರಾಣಿ ಅಂಗಡಿ, ದಲ್ಲಾಳಿ ಅಂಗಡಿ ಮೊದಲಾದವುಗಳ ಹಳೆಯ ಬಾಕಿ ಕೊಡುವುದು, ಹೊಸದಾಗಿ ಸಾಲ ಕೊಡುವುದು, ಪಡೆಯುವುದು, ಹೊಸ ಅಂಗಡಿಗಳನ್ನು ತೆರೆಯುವುದು, ಹೊಸ ಕಾರು, ಬೈಕು ಟ್ರ್ಯಾಕ್ಟರ್‌ಗಳನ್ನು ತರುವುದು, ಬೋರು ಹೊಡೆಸುವುದು, ಮನೆಯ ಹಾಗೂ ಗುಡಿಗಳ ತರ ತೆಗೆಯುವುದು ಹಲವಾರು ಕಾರ್ಯ ಕಲಾಪಗಳು ನಡೆಯುತ್ತವೆ.

ಗಾಣಿಗ ಸಮುದಾಯದವರಿಗೆ ಬಿಡುವಿನ ದಿನಗಳೆಂದರೆ ಹೆಚ್ಚು ಯುಗಾದಿ ಹಬ್ಬದ ಸಂದರ್ಭದ ದಿನಗಳನ್ನೆಬೇಕು. ಏಕೆಂದರೆ, ಹಿಂಗಾರು ಬೆಳೆಗಳ ಸುಗ್ಗಿಯೆಲ್ಲ ಮುಗಿದು ನಿಶ್ಚಿಂತನಾಗಿದ್ದಾಗ ಯುಗಾದಿ ದಿಡೀರನೆ ಬಂದು ಬಿಡುತ್ತದೆ. ಹಬ್ಬದ ಮುನ್ನಾದಿನ ಮನೆ ಮಾರುಗಳಿಗೆ ಸುಣ್ಣ-ಬಣ್ಣ ಬಳಿಯುವುದು; ಗೋಡೆ, ಅಂಗಳ ಸಾರಿಸುವುದು; ಮನೆಗೆ ಹಾಸಿಗೆ-ಹೊತಿಗೆಗಳನ್ನು ನೀರಲ್ಲಿ ಹಾಕುವುದು; ಬಾಗಿಲು ಕಿಡಕಿ ಎತ್ತಿನ ಬಂಡಿಗಳಿಗೆ ಬಣ್ಣ (ವಾರ್ನಿಸ್) ಹಚ್ಚುವುದು; ಮೆನಯ ಬಾಗಿಲಿಗೆ ಅಗಸಿ ಎಣ್ಣೆ ಹಚ್ಚಿ ತಳಿರು ತೋರಣ ಕಟ್ಟಿ ಶೃಂಗಾರ ಮಾಡುವುದು.[೩] ಸಾಕು ಪ್ರಾಣಿಗಳಾದ ಆಕಳು, ಎಮ್ಮೆ, ಒರಿಗಳ ಮೈ ತೊಳೆಯುವುದು, ಇವೆಲ್ಲ ಅಮವಾಸ್ಯೆಯ ದಿನ ಇಲ್ಲವೆ ಅದಕ್ಕೂ ಮುನ್ನಾ ದಿನ ನಡೆಯುವ ಕಾರ್ಯ ಚಟುವಟಿಕೆಗಳು. ಅಮವಾಸ್ಯೆಯ ದಿನ ಬಹುಪಾಲು ಎಲ್ಲರೂ ತಮ್ಮ ಓಣಿಯ (ಕೇರಿಯ), ಮನೆಯ, ಊರ, ಗ್ರಾಮ ದೇವತೆಗಳಿಗೆ ದೀಪ ಹಚ್ಚಿ, ಕಾಯಿ ಒಡೆದು ಬಾನ ಹಿಡಿದು ಊದಿನಕಡ್ಡಿಯನ್ನು ಬೆಳಗುವರು. ಇದು ಯುಗಾದಿಯ ಪ್ರಥಮ ಘಟ್ಟ.

ಪಾಡ್ಯೆದ ದಿನ ಯುಗಾದಿ ಆಚರಣೆಯ ದ್ವಿತೀಯ ಘಟ್ಟ. ಅಂದು ನಸುಕಿನಲ್ಲಿಯೇ ಎದ್ದು ತಲೆ, ಮೈ-ಕೈ ತುಂಬ ಎಣ್ಣೆ ಹಚ್ಚಿಕೊಂಡು ಬಿಸಿ ನೀರಿನಿಂದ ಸ್ನಾನ ಮಾಡುತ್ತಾರೆ. ಅದಕ್ಕೂ ಮೊದಲು ಆ ನೀರಿನಲ್ಲಿ ಮುರಿದು ತಂದು ಬೇವಿನ ತಪ್ಪಲು ಚಿಗುರು, ಹೂವನ್ನು ಹಾಕಿರುತ್ತಾರೆ.[೪] ಮೈ ತೊಳೆದುಕೊಂಡ ಬಳಿಕ ಅತ್ತು-ಕರೆದು, ಕಾಡಿ-ಬೇಡಿ ತಂದು, ಹೊಲಿಸಿದ ಹೊಸ ಬಟ್ಟೆಗಳನ್ನುಟ್ಟು ದೇವರು ದಿಂಡರುಗಳನ್ನು ಪೂಜಿಸಿ ಬೇವು-ಬೆಲ್ಲ ತಿನ್ನುವರು. ಬೇವು-ಬೆಲ್ಲವನ್ನು ಅವರವರ ಶಕ್ತ್ಯಾನುಸಾರ ತಯಾರಿಸಿರುತ್ತಾರೆ. ಅಂದರೆ, ತುಂಬಾ ಬಡತನದಲ್ಲಿರುವವರು ಬೇವಿನ ಚಿಗುರು, ಬೆಲ್ಲ, ಪುಟಾಣಿ ಹಿಟ್ಟನ್ನು ಬಿಟ್ಟರೆ ಬೇರೆ ಮತ್ತೇನನ್ನೂ ಕೂಡಿಸುವುದಿಲ್ಲ. ಆದರೆ ಸ್ವಲ್ಪ ಅನುಕೂಲಸ್ಥರು, ಸ್ಥಿತಿವಂತರು ಪುಟಾಣಿ ಹಿಟ್ಟಿಗೆ ಬೀಸಿದ ಸಕ್ಕರೆಯನ್ನು ಅಥವಾ ಬೆಲ್ಲವನ್ನು, ಬೇವಿನ ಚಿಗುರನ್ನು ಕೂಡಿಸಿ ಹೊಳ್ಳಿನೊಳಗೆ ಹಾಕಿ ಕುಟ್ಟಿ ಸೂಸ್ಲ ತಯಾರು ಮಾಡುತ್ತಾರೆ. ಕೆಲವರು ಕೊಬ್ಬರಿ ಕಸಕಸಿಯನ್ನು ಬೆರೆಸುವುದುಂಟು. ಇದನ್ನೆಲ್ಲ ಬೋಗುಣಿ ಅಥವಾ ಗಡಿಗಿಯಲ್ಲಿ ಹಾಕಿಟ್ಟು ಮನೆಯವರೆಲ್ಲ ಒಂದೊಂದು ಕಪ್ (ವಾಟೆ) ತಿನ್ನುತ್ತಾರೆ. ಮನೆಗೆ ಬಂದವರಿಗೂ

ಹಾಕಿ ಕೊಡುತ್ತಾರೆ. ಇದನ್ನೇ ಬೇವು ತಿನ್ನುವುದು" ಎನ್ನುತ್ತಾರೆ. ಕೆಲವು ಕಡೆಗೆ ಬೇವು ಕುಡಿಯುವುದು ಎನ್ನುವುದುಂಟು.

ಜಳಕ, ಬೇವು ಸೂಸ್ಲ ಮುಗಿಯುವಷ್ಟರಲ್ಲಿ ಹೊತ್ತು ನೆತ್ತಿಗೇರುತ್ತ ನೆಲ ಕಾದು ಚುರುಗುಟ್ಟುವ ಬಿಸಿಲು ಪ್ರಾರಂಭವಾಗಿರುತ್ತದೆ. ಅದು 'ಎಳ್ಳಮಾಸಿಗಿ ಎಳ್ಳು ಕಾಳಷ್ಟು, ಅವರಾತ್ರಿಗೆ ಅವರಿಕಾಳಷ್ಟು, ಶಿವರಾತ್ರಿಗೆ ಶಿವಶಿವ, ಉಗಾದಿಗೆ ಉಗಿ ಹಾಯುವಂತಿರುತ್ತದೆ ಬಿಸಿಲು. ಮನೆಯಲ್ಲಿ ಹೆಂಗಸರು ಈ ಮೊದಲೇ ಕುದಿಯಲು ಹಾಕಿದ ಬ್ಯಾಳಿಯನ್ನು ಬಸಿದು, ಕಟ್ಟಿನ ಸಾರು, ಅನ್ನ ಮಾಡಿ, ಬ್ಯಾಳಿ ರುಬ್ಬಿ ಉಣ್ಣಾ ತಯಾರು ಮಾಡುತ್ತಾರೆ. ಹೋಳಿಗಿ, ಕಡುಬು ಮೊದಲಾದ ತಿಂಡಿ ತಿನಿಸುಗಳನ್ನು ತಯಾರಿಸುತ್ತಾರೆ. ಯುಗಾದಿಗೆ ಶ್ಯಾವಿಗೆಯ ಊಟ ಎಲ್ಲರ ಮನೆಯಲ್ಲಿ ಸರ್ವಸಾಧಾರಣವಾಗಿ ಇದ್ದೇ ಇರುತ್ತದೆ. ಈ ಚಿತ್ರಣ ಜನಪದ ತ್ರಿಪದಿಯಲ್ಲಿ ಬಲು ಸೊಗಸಾಗಿ ಮೂಡಿ ಬಂದಿದೆ.

"ಊರಾಗ ಉಗಾದಿ ಉಂಡ್ಹೋಗ ನನ್ನಣ್ಣ
ಶ್ಯಾಂವಿಗಾಗಿ ಗುಳಿಗಾಗಿ ಮ್ಯಾಲಿನ
ಬಾನ ಬಸಿಯೋದು ತಡವಿಲ್ಲ"[೬]

### ೬.೪. ಪಂಚಮಿ ಹಬ್ಬ

ಸ್ತ್ರೀ ಪ್ರಧಾನವಾದ ಹಲವಾರು ಹಬ್ಬಗಳಲ್ಲಿ ಪಂಚಮಿ ಹಬ್ಬವೂ ಒಂದು. ನಾಗರ ಅಮವಾಸ್ಯೆ, ಜೋಕಾಲಿ ಹಬ್ಬ ಎಂದು ಬೇರೆ ಬೇರೆ ಹೆಸರುಗಳಿಂದ ಕರೆಯುವ ಈ ಹಬ್ಬದಲ್ಲಿ ನಾಗಪ್ಪನಿಗೆ ಹಾಲೆರೆಯುವುದು ಹಾಗೂ ಜೋಕಾಲಿ ಪ್ರಮುಖವಾಗಿರುವುದರಿಂದ 'ನಾಗರ ಪಂಚಮಿ' ಅಥವಾ 'ಜೋಕಾಲಿ ಹಬ್ಬ' ಎಂದು ಕರೆಯುವುದು ರೂಢಿ. 'ನಾಗರ ಪಂಚಮಿ ನಾಡಿಗೆ ದೊಡ್ಡದು; ಜೋಕಾಲಿ ಆಡೂನ ಬಾರ ಜತುನದಿಂದ' ಎಂದು ಭಜನಾ ಪದಗಳಲ್ಲಿ ಮತ್ತು

"ಪಂಚಮಿ ಬರಲೆವ್ವ ಮಂಚ ಕಟ್ಟಲಿ ಮನಿಗಿ
ಕೆಂಚ ಗೆಳತೇರು ಕೂಡಲಿ| ನಮ್ಮ ಜೀಕ
ಮಿಂಚ ಮುಗಿಲೇರಲಿ"

ಎಂದು ಜನಪದರು ಹಾಡಿದ್ದಾರೆ. ಮದುವೆಯಾಗಿ ಗಂಡನ ಮನೆಗೆ ಹೋದ ಹೆಣ್ಣುಮಗಳು

"ಆಷಾಢ ಮಾಸ ಬಂದೀತವ್ವ
ಖಾಸ ಅಣ್ಣಾ ಬರಲಿಲ್ಲ ಕರಿಯಾಕ
ಎಷ್ಟ ನೋಡಲೆವ್ವ ಅಣ್ಣನ ದಾರಿ| ಸುವ್ವನಾರಿ ಸುವ್ವನಾರಿ"[೭]

ಎಂದು ಈ ಪರಿಯಾಗಿ ಪರಿತಪಿಸಬೇಕಾದರೆ ಇದರ ಹಿನ್ನೆಲೆ ಏನಿರಬೇಕು ಎಂಬುದನ್ನು ಆಲೋಚಿಸಬೇಕಾಗಿದೆ.

**'ನಾಗಚವತಿ' ಎಂಬ ಹೆಸರು**

ಶ್ರಾವಣ ಶುದ್ಧ ಪಂಚಮಿಯ ದಿವಸವೇ ಈ ನಾಗರಪಂಚಮಿ ಹಬ್ಬವನ್ನು ಆಚರಿಸುವುದಕ್ಕೆ ಖಚಿತವಾದ ಆಧಾರಗಳು ಸಿಗದೆ ಹೋದರೂ ಜನಪದ ಕಥೆಯೊಂದು ಇದಕ್ಕೆ ಸಾಕ್ಷಿ.

ರೈತನೊಬ್ಬನು ಹೊಲದಲ್ಲಿ ನೇಗಿಲು ಹೊಡೆಯುತ್ತಿರುವಾಗ ನೇಗಲಿ ಪಾಳಿಗೆ ಸಿಲುಕಿ ಹಾವಿನ ಮರಿಗಳೆಲ್ಲ ಸಾಯಲು ತಾಯಿ ಹಾವು ಸಿಟ್ಟಿಗೆದ್ದು, ಆ ದಿನ ರಾತ್ರಿ ರೈತನನ್ನೊಳಗೊಂಡು ಮನೆ ಮಂದಿಯನ್ನೆಲ್ಲ ಕಡಿದು ಸಾಯಿಸಿದರೂ, ಅದರ ರೋಷ ಕಡಿಮೆಯಾಗುವುದಿಲ್ಲ. 'ಹಾವಿನ ರೋಷ ಹನ್ನೆರಡು ವರುಷ'ವೆಂಬಂತೆ ಸಿಟ್ಟನ್ನಿರಿಸಿಕೊಂಡ ಹಾವು ಪರ ಊರಿನಲ್ಲಿಗೆ ಈ ಮನೆಯ ಹೆಣ್ಣುಮಗಳೊಬ್ಬಳು ಸೊಸೆಯಾಗಿ ಹೋಗಿದ್ದನ್ನು ತಿಳಿದು, ಅವಳನ್ನು ಕಚ್ಚಿ ಕೊಲ್ಲಲು ಹೋಯಿತು. ಅದೇ ಸಮಯದಲ್ಲಿ ಆ ಹೆಣ್ಣುಮಗಳು ಮಣ್ಣಿನ ನಾಗಪ್ಪನನ್ನು ಮಾಡಿ ಹಾಲೆರೆಯುತ್ತಿರುವುದನ್ನು ಕಂಡು ಸಮಾಧಾನವಾಯಿತು. ತಾನು ಆಕೆಯ ತವರು ಮನೆಯಲ್ಲಿ ರೈತನ ಕುಟುಂಬದವರನ್ನೆಲ್ಲ ಕಚ್ಚಿ ಸಾಯಿಸಿ ಬಂದ ವಿಷಯ ತಿಳಿಯಲು ಆಕೆ ಗೋಗರೆಯುತ್ತಾಳೆ. ತನ್ನ ಕರುಳ ಬಳ್ಳಿಯನ್ನೆಲ್ಲ ಬದುಕಿಸುವಂತೆ ನಾಗರಾಜನಲ್ಲಿ ಮೊರೆಯಿಡಲು, ಅವನಿಗೆ ಕರುಣೆ ಬಂದು ಅಲ್ಲಿಗೆ ಹೋಗಿ ಮತ್ತೆ ವಿಷಯವನ್ನೆಲ್ಲ ಹೀರಿಕೊಂಡು ಎಲ್ಲರನ್ನೂ ಬದುಕಿಸುತ್ತದೆ. ಆಗ ತವರಿಗೆ ಬಂದ ಹೆಣ್ಣುಮಗಳು ನಾಗಪ್ಪನನ್ನು ಪೂಜಿಸಿದಳು. ಅಂದಿನಿಂದಲೇ ನಾಗಪೂಜೆ ಆರಂಭಗೊಂಡು 'ನಾಗಚವತಿ', 'ನಾಗಪಂಚಮಿ' ಎಂಬ ಹೆಸರು ಆಚರಣೆಯಲ್ಲಿ ಒಂದು ಹಬ್ಬವಾಗಿ ಪರಿಣಮಿಸಿದೆ. ಈ ಕಾರಣವಾಗಿಯೇ ಹೆಣ್ಣುಮಕ್ಕಳನ್ನು ತಪ್ಪದೇ ನಾಗರ ಪಂಚಮಿಗೆ ತವರು ಮನೆಗೆ ಕರೆತರುತ್ತಾರೆ.

ಹಬ್ಬ ಇನ್ನೂ ಎಂಟ್ಹತ್ತು ದಿನ ಇದೆ ಎನ್ನುವಾಗಲೇ ಗಂಡನ ಮನೆಗೆ ಹೊಸದಾಗಿ ಹೋದ ಮತ್ತು ಒಂದೆರಡು ಹಡೆದ ಹೆಣ್ಣುಮಕ್ಕಳನ್ನು ತಪ್ಪದೆ ತವರುಮನೆಗೆ ಕರೆತರುತ್ತಾರೆ. ತವರಿಗೆ ಬಂದ ಹೆಣ್ಣುಮಕ್ಕಳೆಲ್ಲ ನಾಗಪ್ಪನ ಪೂಜೆಗಾಗಿ ಎಳ್ಳು ಹುರಿಯುವುದು, ಅಳ್ಳಿಟ್ಟ-ತಂಬಿಟ್ಟ ಮಾಡುವುದು, ಕರದಂಟು, ಬೆಲ್ಲ-ಸಕ್ಕರಿ ರವಾದುಂಡಿಗಳನ್ನು ಕಟ್ಟುವುದು, ಕರ್ಚಿಕಾಯಿ ಕರಿಯುವುದು ಮುಂತಾದ ಆಹಾರ ಪದಾರ್ಥಗಳನ್ನು ತಯಾರಿಸುತ್ತಾರೆ. ನಾಗಪಂಚಮಿಯ ಮೊದಲ ದಿನ ನಾಗರ ಅಮವಾಸ್ಯೆ. ಅದನ್ನು 'ರೊಟ್ಟಿ ಹಬ್ಬ' ಎನ್ನುವರು. ಎರಡನೆಯ ದಿನ 'ನಾಗಚವತಿ', ಮೂರನೆಯ ದಿನವೇ 'ನಾಗರ ಪಂಚಮಿ', ಅಮವಾಸ್ಯೆಯ ದಿನ ಬಂಧು-ಬಳಗದೊಂದಿಗೆ ಹೆಣ್ಣುಮಕ್ಕಳು 'ಹಣತೆ ಪೂಜೆ'ಯನ್ನು ನೆರವೇರಿಸುವರು. ಎರಡನೆಯ ದಿನವೇ ನಾಗಚೌತಿ. ಅಂದು ಹೆಣ್ಣು ಮಕ್ಕಳೆಲ್ಲ ತಲೆಯ ಮೇಲೆ ನೀರು ಹಾಕಿಕೊಂಡು ಹೊಸ ಬಟ್ಟೆಯನ್ನುಟ್ಟು ಸಮೀಪದ ಸ್ಥಳೀಯ ದೇವಸ್ಥಾನದ ಪಕ್ಕಕ್ಕೆ ಇಟ್ಟ ಕಲ್ಲಿನ ನಾಗ ಮೂರ್ತಿಗೆ ಅರಿಶಿಣ, ಕುಂಕುಮ, ವಿಭೂತಿ ಹಚ್ಚಿ, ಹೂ ಹಾಕಿ ಶೃಂಗಾರ ಮಾಡುವರು. ಕೊಕ್ಕಾಬತ್ತಿ, ಕೊಡಗ ಬತ್ತಿ, ಹಂಗನೂಲಸುತ್ತಿ ಹಚ್ಚುತ್ತಾರೆ. ಉಂಡಿ, ಕಡಬು, ಅಳ್ಳಿಟ್ಟ, ಎಳ್ಳಿನೆಡೆ ಹಿಡಿದು ಮನೆ ಮಂದಿಯೆಲ್ಲ ಕರಕಿ ಪತ್ತರಿಯಿಂದ ನಾಗಪ್ಪನಿಗೆ ಹಾಲೆರೆಯುತ್ತ ದೇವರ ದಿಂಡರ ಪಾಲು, ತಂದೆ-ತಾಯಿ ಪಾಲು, ಗುರು-ಹಿರಿಯರ ಪಾಲು, ಎಲ್ಲ ಬಂಧು-ಬಳಗದವರ ಪಾಲೆಂದು ಹಾಲೆರೆಯುತ್ತಾರೆ. ಅನಂತರ ಆರತಿ ಬೆಳಗಿ ಕಾಯಿ ಒಡೆದು ಪೂಜಿಸುತ್ತಾರೆ. ಎಷ್ಟೇ ಬರಗಾಲ ಬಂದರೂ ಹೇಗಾದರಾಗಲಿ ನಾಗಪೂಜೆ ಮಾತ್ರ ತಪ್ಪುವುದಿಲ್ಲ. ಎಡೆ ಹಿಡಿಯುವುದು ನಿಂತಿಲ್ಲ.

ನಾಗಪೂಜೆಯ ಮರುದಿನ ಜೋಕಾಲಿ ಆಡುವ ಸಂಭ್ರಮ. ಸಾಮಾನ್ಯವಾಗಿ ಅಂದು ಹೆಂಗಸರು-ಗಂಡಸರು ಸಣ್ಣ ಹುಡುಗರೆಲ್ಲ ಹೊಸ ಅರಿಬೆಯನ್ನುಟ್ಟು ಊರಿನ ಓಣಿ ಓಣಿಯಲ್ಲಿ ದೊಡ್ಡ ದೊಡ್ಡ ಮರದ ಟೊಂಗೆಗಳಿಗೆ, ಇಲ್ಲವೆ ಕಂಬ ನೆಟ್ಟು ಕಟ್ಟಿದ ಅಂತರ ಜೋಕಾಲಿಯನ್ನಾಡಲು ಗುಂಪು ಗುಂಪಾಗಿ ಸ್ತ್ರೀಯರು ಬರುತ್ತಾರೆ. ಗಂಡಸರಂತೆ ಕೆಲ ಹೆಂಗಸರು ನಿಂತೇ ಜೋಕಾಲಿಯಾಡುತ್ತಾರೆ. ಕೆಲವರು ಕುಂತು ತೂಗಿಸಿಕೊಳ್ಳುವುದುಂಟು. ಹೆಂಗಸರು ಕುಂತಾಡಲಿ ಇಲ್ಲವೆ ನಿಂತಾಡಲಿ ಜೋಕಾಲಿ ಆಡುವುದಕ್ಕೂ ಮೊದಲು ಗಂಡನ ಹೆಸರು ಹೇಳಬೇಕಾದುದು ಕಡ್ಡಾಯ. ಹೊಸದಾಗಿ ಮದುವೆಯಾದವರಿಗೆ ಗಂಡನ ಹೆಸರ್ಹೇಳಲು ತುಂಬಾ ನಾಚಿಕೆ. ಇದೊಂದು ರೀತಿಯ ಮುಜುಗುರದ ಸನ್ನಿವೇಶ. ಜೋಕಾಲಿಯನ್ನು ಮುಗಿಲು ಮುಟ್ಟುವಂತಾಡುವಾಗ ಜನಪದರು ತಮ್ಮ ಆಸರಿಕೆ ಬೇಸರಿಕೆಗಳನ್ನು ಕಳೆದುಕೊಳ್ಳುತ್ತಾರೆ ಮತ್ತು ವಾರಗಿಯ ಗೆಳತಿಯರೆಲ್ಲ ಗಂಡನ ಮನೆಯಿಂದ ಬಂದಿರುವುದರಿಂದ ತಮ್ಮ ಬಾಲ್ಯದ ನೆನಪುಗಳನ್ನು ನೆನಪಿಸಿಕೊಳ್ಳಲು ಸಾಧ್ಯ. ಅಂದು ಉಂಡುಟ್ಟು ಬಲು ಹುರುಪಿನಿಂದ ಜೋಕಾಲಿ ಆಡುವುದರೊಂದಿಗೆ ಹಬ್ಬ ಮುಗಿಯುತ್ತದೆ. ಆದರೆ ಜೋಕಾಲಿ ಆಡುವುದು ಮಾತ್ರ ಪ್ರತಿ ಶ್ರಾವಣ ಸೋಮವಾರದಿಂದ ಕಡಿ ಸೋಮುವಾರದವರೆಗೆ ಇರುತ್ತದೆ. ಗಾಣಿಗರು ಸ್ತ್ರೀ-ಪುರುಷರು, ಚಿಕ್ಕವರು-ದೊಡ್ಡವರು ಎಂಬ ತಾರತಮ್ಯವಿಲ್ಲದೆ ಸಂತೋಷದಿಂದ ಈ ಹಬ್ಬವನ್ನು ಆಚರಿಸುತ್ತಾರೆ.

### ೬.೫. ಬನ್ನಿಹಬ್ಬ

ನಮ್ಮ ನಾಡಿನಲ್ಲಿ ತುಂಬಾ ವಿಚಿತ್ರವಾದ ಹಬ್ಬಗಳಿವೆ. ಅಂದರೆ, 'ಹೋಳ್ಗಿ ತಿಂದು ಹೊಯ್ಕೊಳೋದು ಹೋಳಿಹಬ್ಬ' ಮನಿಕೂಳು ತಿಂದು ಮಂದಿಕಾಲ ಹಿಡಿಯೋದು 'ಮಹಾನವಮಿ ಹಬ್ಬ'. ಇದನ್ನು ದಸರಾ, ನವರಾತ್ರಿ, ಮಾನಾಮಿ, ವಿಜಯದಶಮಿ, ಬನ್ನಿ, ನಾಡಹಬ್ಬ ಎಂದೆಲ್ಲಾ ಕರೆಯುತ್ತಾರೆ. ಸಾಮಾನ್ಯವಾಗಿ ಪ್ರತಿಹಬ್ಬಕ್ಕೂ ಒಂದು ಪೌರಾಣಿಕ ಇತಿಹಾಸವಿರುವಂತೆ ಬನ್ನಿ ಹಬ್ಬಕ್ಕೂ ಹಿನ್ನೆಲೆಯಿರುವುದು ಜನಪದ ಹಾಡುಗಳಿಂದ ತಿಳಿದುಬರುತ್ತದೆ.

"ಕಲ್ಲ ಕಡಬವ ಮಾಡಿ ಮುಳ್ಳು ಶ್ಯಾವಿಗಿ ಮಾಡಿ
ಬನ್ನೀ ಎಲಿಯಾಗ ಎಡಿಮಾಡಿ| ಪಾಂಡವರು
ಉಂಡು ಹೋಗ್ಯಾರೋ ವನವಾಸೊ"

"ಬನ್ನೀಯ ಗಿಡದಾಗ ಬಾಣ ಇಟ್ಟೀವಿ ತಾಯಿ
ಯಾರ ಬಂದರೂ ಕೊಡಬ್ಯಾಡ| ಹಡದವ್ವ
ಅರ್ಜುನ ಬಂದರೆ ಕೊಡಬೇಕು"[೮]

ಎಂಬ ಜನಪದ ತ್ರಿಪದಿಗಳು ಬನ್ನಿ ಪೂಜೆಯ ಪ್ರಾಚೀನತೆಯನ್ನು ಮಹಾಭಾರತದ ಕಾಲಕ್ಕೆ ಒಯ್ಯುತ್ತವೆ. ಮಹಾನವಮಿಯಲ್ಲಿ ಬನ್ನಿಗಿಡವನ್ನು ಪೂಜಿಸಿ ಒಬ್ಬರಿಗೊಬ್ಬರು ಬನ್ನಿಯನ್ನು ಕೊಡು ಕೊಳ್ಳುವಿಕೆಯಿಂದ ಬನ್ನಿ ಹಬ್ಬವೆಂದು ಕರೆದಿದ್ದಾರೆ.

ಗಾಣಿಗರು ಮಹಾಲಯ ಅಮವಾಸ್ಯೆ ಇನ್ನೂ ಮುಂದೆ ಇರುವಾಗಲೆ ಮನೆಮಾರು ಸಾರಿಸುವುದು, ಹಾಸಿಗೆ ಶುದ್ಧ ಮಾಡಿಕೊಳ್ಳುವುದು ಮೊದಲಾದ ಕೆಲಸಗಳು ಆರಂಭಗೊಳ್ಳುತ್ತವೆ. ಈ ಹಬ್ಬ ಒಂಬತ್ತು ದಿನಗಳವರೆಗೆ ನಡೆಯುತ್ತದೆ. ಅಶ್ವಯುಜ ಶುಕ್ಲ ಪ್ರತಿಪದಿ ಪಾಡ್ಯದಿಂದ ಹಿಡಿದು ದಶಮಿವರೆಗಿನ ಆಚರಣೆಯಲ್ಲಿ ನಾಲ್ಕು ಹಂತಗಳಾಗುತ್ತವೆ. ಪ್ರಥಮ ದಿನ ಅಮವಾಸ್ಯೆ, ನಂತರ ಪ್ರಥಮ, ದ್ವಿತೀಯ, ತೃತೀಯಗಳೆಂದು ಮೂರು ದಿನ ರೋಗ-ರುಜಿನ, ದುಃಖ ದುಮ್ಮಾನಗಳ ಪರಿಹಾರಕ್ಕಾಗಿ ದೇವರುಗಳ ಪೂಜೆಯನ್ನು ಕೈಗೊಳ್ಳುತ್ತಾರೆ. ಎರಡನೆಯದಾಗಿ ಚತುರ್ಥಿ, ಪಂಚಮಿ, ಷಷ್ಠಿ ಈ ಮೂರು ದಿನ ಸುಖ ಸಂಪತ್ತು ಸಮೃದ್ಧಿಗೊಳ್ಳುವಂತೆ ಲಕ್ಷ್ಮಿಯನ್ನು ಆರಾಧಿಸುವರು. ಮೂರನೆಯದಾಗಿ ಅಷ್ಟಮಿ, ನವಮಿ, ಸಪ್ತಮಿ. ಈ ಮೂರು ದಿನ ವಿದ್ಯಾ-ಬುದ್ಧಿ-ಜ್ಞಾನಗಳು ಹೆಚ್ಚಲೆಂದು ಸರಸ್ವತಿಯನ್ನು ಪೂಜಿಸುವರು. ಹೀಗೆ ಮೂರು ಹಂತಗಳಲ್ಲಿ ಶಕ್ತಿ ಪೂಜೆ ನಡೆಯುವುದರಿಂದ ಈ ಹಬ್ಬಕ್ಕೆ ಮಹಾನವಮಿ, ನವರಾತ್ರಿ, ದಸರಾ ಎಂದು ಕರೆಯುವರು. ನಾಲ್ಕನೆಯದಾಗಿ ಈ ಹಬ್ಬದ ಪರಿಸಮಾಪ್ತಿಯೆಂಬಂತೆ ಬರುವ ಹತ್ತನೆಯ ದಿನವೇ ದಶಮಿ. ಅದನ್ನೇ 'ವಿಜಯ ದಶಮಿ' ಎಂದು ಕರೆಯುತ್ತಾರೆ. ದಶಹರ್ ಎಂದರೆ, ಹತ್ತು ದಿನಗಳ ರಾತ್ರಿ ಹಬ್ಬವನ್ನು ಆಚರಿಸುವುದರಿಂದ 'ದಸರಾ' ಎಂಬ ಹೆಸರೂ ಬಂದಿದೆ. ದಶಮಿಯ ದಿನದಂದು ಆಯಾಯ ವೃತ್ತಿಯವರು ತಮ್ಮ ತಮ್ಮ ಸಾಮಗ್ರಿಗಳನ್ನು ಪೂಜಿಸುವರು. ಕೆಲವರು ತಮ್ಮ ಗಾಣದ ಆಯುಧಗಳು, ಗಿರಣಿ, ಅಂಗಡಿ, ಬೈಕು, ಟ್ರಾಕ್ಟರ್, ಟ್ರಕ್ಕುಗಳನ್ನು ಪೂಜಿಸುವರು. ಇದನ್ನು 'ಆಯುಧ ಪೂಜೆ' ಎಂದು ಕರೆಯುವರು. ಮುಸ್ಸಂಜೆಯಿಂದ ಮೂರು ಚೆಂಜೀಲೆಯಿಂದ ಹಿಡಿದು ಗಂಡು-ಹೆಣ್ಣು, ಚಿಕ್ಕವರು-ದೊಡ್ಡವರು ಬೇಧವಿಲ್ಲದೆ ಎಲ್ಲರೂ ಸಾಮೂಹಿಕವಾಗಿ ಬನ್ನಿ ಮುಡಿದು, ಓಣಿ ಓಣಿಗೆ ಬಂದು ತಮ್ಮ ಸಂಬಂಧಿಕರುಗಳಿಗೆಲ್ಲ ಬನ್ನಿಕೊಟ್ಟು ಕಾಲು ಬೀಳುವುದು, ಕೈ ಮುಗಿಯುವುದು ನಡೆಯುತ್ತದೆ. ಈ ಚಿತ್ರಣ ಜನಪದ ತ್ರಿಪದಿಯೊಂದರಲ್ಲಿ ತುಂಬಾ ಸೊಗಸಾಗಿ ಮೂಡಿಬಂದಿದೆ.

"ಬನ್ನಿ ಮುಡಿಯೋದು ಬಂತು, ಬಂಗಾರ ಕೊಡೋದು ಬಂತು
ಬಂದ ನನಕಾಲ ಹಿಡಿದಾನ| ನನ ತಮ್ಮ
ಬಂಗಾರ ಮಾಲ ನನಗಿರಲಂತ"

ಈ ಹಬ್ಬವೂ ಕೂಡ ಜಾತಿ-ಮತದ ಗಡಿಯನ್ನು ಮೀರಿ ಆಚರಿಸಲ್ಪಡುವ ಹಬ್ಬವಾಗಿದೆ. ಯಾವ ಜಾತಿ, ಲಿಂಗ, ವಯಸ್ಸಿನ ತಾರತಮ್ಯವಿಲ್ಲದೆ ಬನ್ನಿಯನ್ನು ಕೊಟ್ಟು 'ನಾವು ನೀವು ಬಂಗಾರಾಗಿರೂನ್ರಿ' ಎಂದು ಹೇಳುವ ಒಂದೇ ವಯಸ್ಸಿನವರು ಸ್ನೇಹ, ಹೊಸದಾಗಿ ಮದುವೆಯಾದವರಿಗೆ 'ದೌಡ ಮಕ್ಕಳಾಗ್ಲಿ', ಶಾಲೆ ಕಲಿತು ಬಹಳ ಬುದ್ಧಿವಂತನಾಗು/ಳಾಗು, ದೇವರು ಒಳ್ಳೇದು ಮಾಡ್ಲಿ, ಬೇಗ ನೌಕರಿ ಸಿಗ್ಲಿ ಎಂದು ಹರಸುವ ಹಿರಿಯರ ಆಶೀರ್ವಾದ, ಬನ್ನಿ ಕೊಟ್ಟು ಬಾಗಿ (ಬಗ್ಗಿ) ಕಾಲು ಹಿಡಿಯುವವರಿಗೆ 'ಇರ್ಲಿ ಇರ್‍ಲಿಬಿಡು' ಎಂದು ಹೇಳುವ ಗುರು-ಹಿರಿಯರ, ತಂದೆ-ತಾಯಂದಿರು ಸೌಜನ್ಯತೆ ಈ ಹಬ್ಬದ ದಿನ ಸಂಬಂಧಿಕರು ಜಗಳದಿಂದ ದೂರ ಇದ್ದವರು ಬಂದು ಬನ್ನಿ ಕೊಟ್ಟು ನಮಸ್ಕಾರ ಮಾಡುವುದು ಒಳ್ಳೇದು ಕೆಟ್ಟದ್ದು ಬಗ್ಗೆ ಮಾತುಗಳನ್ನು ಆಡುವುದು ಹಬ್ಬದ ಸಂಭ್ರಮವನ್ನು ಹಂಚಿಕೊಳ್ಳುವರು. ಬನ್ನಿ ಹಬ್ಬವೆಂಬುದು ಗಾಣಿಗ ಸಮುದಾಯದವರಿಗೆ

ಮಾತ್ರ ಸೀಮಿತವಾಗಿರದೆ ಇಡೀ ಊರು, ನಾಡಿನ ಹೊರಗೆ ಪ್ರೀತಿ ಪ್ರೇಮ, ವಿಶ್ವಾಸ ಹಂಚಿಕೊಂಡು ಹರುಷ ಪಡುವ ಹಬ್ಬ ಇದಾಗಿದೆ.

### ೬.೬. ದೀಪಾವಳಿ

ದೀಪಗಳ ಹಾವಳಿಯನ್ನು ತಂದೊಡ್ಡುವ ದೀಪಾವಳಿ ಗಾಣಿಗರು ಆಚರಿಸುವ ನಾಡ ಹಬ್ಬಗಳಲ್ಲಿ ಒಂದು. 'ಉಂಡದ್ದೇ ಉಗಾದಿ, ಮಿಂದದ್ದೇ ದೀಪಾವಳಿ' ಎಂದಂತೆ ಮೈಮನವನ್ನು ಬೆಳಗಿಸಿ ಶುಭ್ರಗೊಳಿಸುವ ಹಬ್ಬವಾಗಿದೆ.[೯] ಇತರ ಹಬ್ಬಗಳಲ್ಲಿಯಂತೆ ಈಗಲೂ ಮಡಿ ಮೈಲಿಗೆಯನ್ನು ತಪ್ಪದೆ ಕಾಯ್ದುಕೊಳ್ಳುತ್ತಾರೆ. ಅಮವಾಸ್ಯೆಯ ದಿನ ಮನೆಯ ಒಳ ಹೊರಗೆ ಸಾಲು ದೀಪಗಳನ್ನು ಹಚ್ಚುತ್ತಾರೆ. ಗಂಡನ ಮನೆಯಿಂದ ಬಂದ ಹೆಣ್ಣುಮಕ್ಕಳು ತಮ್ಮ ಅಣ್ಣ ತಮ್ಮಂದಿರಿಗೆ 'ಕಷ್ಟ ಕಾರ್ಪಣ್ಯಗಳು' ಹೋಗಿ ಆಯುಷ್ಯ ಆರೋಗ್ಯ ಹೆಚ್ಚಲೆಂದು ಆರತಿ ಬೆಳಗುತ್ತಾರೆ. ಅದಕ್ಕೆ ಪ್ರತಿಯಾಗಿ ಅಕ್ಕ-ತಂಗಿಯರಿಗೆ ಹೊಸ ಸೀರೆ-ಚೋಲಿ (ಕುಪ್ಪಸ), ಬಂಗಾರವನ್ನು ಕೊಡುವ ಪದ್ಧತಿ ಇದೆ. ಮರುದಿನ ದೀಪಾವಳಿಯ ಪಾಡ್ಯ. ಅಂದು ಲಕ್ಷ್ಮಿಗೆ ಮತ್ತೆ ವಿಶೇಷ ಪೂಜೆ ಇರುತ್ತದೆ. ಗಾಣಿಗ ಸಮುದಾಯದವರು ಸಣ್ಣ ವ್ಯಾಪಾರದವರು, ದೊಡ್ಡ ವ್ಯಾಪಾರದವರು ಅವರವರ ಸಾಮರ್ಥ್ಯಕ್ಕೆ ತಕ್ಕಂತೆ ಪೂಜೆ ಅದ್ಧೂರಿಯಿಂದ ನಡೆಯುತ್ತದೆ. ಅಂಗಡಿ ಹೊಸದಾಗಿದ್ದರೆ ಸರಿ, ಒಂದು ವೇಳೆ ಹಳೆಯದಾಗಿದ್ದರೆ ಅದನ್ನು ರಿಪೇರಿ ಮಾಡಿಸಿ, ಸುಣ್ಣ-ಬಣ್ಣ ಬಳಿದು ಹೊಸದೆನ್ನುವಂತೆ ಮಾಡಿ ದಿನ್ನಾಗರಿ ಬಣ್ಣ ಬಣ್ಣದ ಪರಿಪರಿ, ವಿವಿಧ ಹೂವಿನ ಸರ, ತಳಿರು-ತೋರಣ ಕಟ್ಟಿ ಅವರವರ ಅಂಗಡಿಯ ಮುಂದೆ ಧ್ವನಿ ವರ್ಧಕ (ಮಾಯಿಕ್)ಗಳನ್ನು ಹಚ್ಚುತ್ತಾರೆ. ಬೆಳಿಗ್ಗೆಯಿಂದ ಮಧ್ಯಾಹ್ನದೊಳಗಾಗಿ ಶಾಸ್ತ್ರೋಕ್ತವಾಗಿ ಊರಿನ ಜಂಗಮರಿಂದ ಪೂಜೆ ನೆರವೇರಿಸುವರು. ಪೂಜಾ ಸಮಯದಲ್ಲಿ ನೆರೆದವರಿಗೆ (ಬಂದವರಿ)ಗೆಲ್ಲ ಫಳಾರ ಹಂಚಿ ಬಡವರಿಗೆ, ಅಂಗಡಿಯಲ್ಲಿ ದುಡಿದವರಿಗೆ ಬಟ್ಟೆ-ಬರೆ, ಹಣವನ್ನು ಕೊಟ್ಟು ಅಂದು ವಿಶೇಷವಾಗಿ ಸಿಹಿ ಅಡುಗೆಯ ಊಟ ಮಾಡಿಸಿದ ನಂತರ ಕೆಲವರು ಅಂಗಡಿಯ ಮುಂದೆ ಇಸ್ಪೇಟು ಆಡಿದರೆ ಇನ್ನು ಕೆಲವರು ಲಕ್ಷ್ಮಿಯ ಮುಂದೆ 'ಹುಲಿಮನಿ' ಆಡುತ್ತಾರೆ. ಹೀಗೆ ಆಡುವುದರ ಮುಖಾಂತರ ಹಬ್ಬದ ಸಂತೋಷ ಹಂಚಿಕೊಳ್ಳುತ್ತಾರೆ.[೧೦]

ಇದೇ ಸಂದರ್ಭದಲ್ಲಿ ಈ ಸಮುದಾಯದ ಹೆಣ್ಣು ಮಕ್ಕಳು ಅಂದು ನಸುಕಿನ ಜಾವದಲ್ಲಿ ಎತ್ತಿನ ಸಗಣಿ ತಂದು ತಮ್ಮ ತಮ್ಮ ಮನೆಗಳ ಮುಂದೆ ನೆಲಸಾರಿಸಿ ಚೆಂದಾಗಿ ರಂಗೋಲಿ ಆಕಿ ಸಗಣಿಯಿಂದ ಪಾಂಡವರನ್ನು ಮಾಡಿ ಅವಕ್ಕೆ ಉತ್ರಾಣಿ ಕಡ್ಡಿ, ಅವರಿ ಹೂ, ನೆವಣಿ ತೆನೆ, ಚೆಂಡು ಹೂ ಚುಚ್ಚಿ ಎಡೆ ಬೆಳಗಿ, ಸಣ್ಣ ಹುಡುಗರಿಗೆ ಉಣಿಸಿ, ಮನೆಯ ಬಾಗಿಲುಗಳಿಗೆ, ದಂದಕ್ಕಿಯಲ್ಲಿ, ಇನ್ನು ಬೇರೆ ಸ್ಥಳಗಳ ಪಕ್ಕದಲ್ಲಿ ಇಡುತ್ತಾರೆ. ಈ ಆಚರಣೆ ಪಾಂಡವರು ವನವಾಸ ಮುಗಿಸಿ ಬಂದ ನೆನಪು ತಂದುಕೊಡುತ್ತದೆ.

### ೬.೭. ಸೀಗಿ ಹುಣ್ಣಿಮೆ

ಅಶ್ವಿನಿ ಶುದ್ಧ ಹುಣ್ಣಿಮೆಯೇ ಶೀಗೆಯ ಹುಣ್ಣಿಮೆ. ಹಬ್ಬದ ಅಡಿಗೆಯ ವಿವಿಧ ಬಗೆಯ ಮೃಷ್ಟಾನ್ನವನ್ನು ಉಂಡು ಸವಿಯಬೇಕಾದರೆ ಈ ಹುಣ್ಣಿಮೆಯ ಹಬ್ಬವೇ ಸರಿ. ಈ ಹಬ್ಬದ ಆಚರಣೆ ವಿಶೇಷವಾದದ್ದು.

ಅದೇನೇ ಇದ್ದರೂ ಈ ಸೀಗೆ ಹಬ್ಬವನ್ನು ಎಲ್ಲಾ ಸಮುದಾಯದವರು ಆಚರಿಸುವುದರಿಂದ ಭೂಮಿ ಪೂಜೆಯೇ ಎನ್ನುವುದಕ್ಕೆ ಹಲವಾರು ಆಚರಣೆಗಳೂ ಸಹಾಯಕವಾಗುತ್ತವೆ. ಸೀಗೆ ಹುಣ್ಣಿಮೆಯ ಪ್ರಮುಖವಾದ ಸಂಪ್ರದಾಯವೇ ಇದು. ಇದಕ್ಕೆ 'ಚರಗ ಚೆಲ್ಲುವುದು' ಅನ್ನುತ್ತಾರೆ. ಭೂಮಿ ತಾಯಿಗೆ ಬಯಕೆಯ ಊಟವೆಂದೂ ಅನ್ನುತ್ತಾರೆ. ಈ ಹುಣ್ಣಿಮೆ ಅಶ್ವಯಜ್ಞ, ಶುದ್ಧ ಪೂರ್ಣಿಮೆಯೆಂದು ಇದ್ದು ಈ ಕಾಲದಲ್ಲಿ ಮುಂಗಾರು ಬೆಳೆಗಳಿಂದ ನೆಲದಾಯಿ ಫಲವತಿಯಾಗಿ ನಲಿಯುತ್ತಿರುತ್ತಾಳೆ. ಈ ತಾಯಿಗೆ ಉಣಿಸುವ ಬಯಕೆಯ ಊಟವೇ ಸೀಗಿ ಹುಣ್ಣಿಮೆಯ ಹಬ್ಬ. ಇದನ್ನು ಗಾಣಿಗರು ಉತ್ಸಾಹದಿಂದ ಆಚರಿಸುತ್ತಾರೆ.

ಈ ಹುಣ್ಣಿಮೆಯ ಅಡಿಗೆ ವೈವಿಧ್ಯವೇ ಬೆರಗುಗೊಳಿಸುವಂಥದು. ಜೋಳದ ಕಡಬು, ಗೋದಿಯ ಹುಗ್ಗಿ ನವಣೆಯ ಅನ್ನ ಶೇಂಗಾದ ಹೋಳಿಗೆ ಕಿಚಡಿ, ರೊಟ್ಟಿ, ಎಣ್ಣೆಗಾಯಿ ಎಲ್ಲ ತರದ ಪಲ್ಯೆಗಳು ಶೇಂಗಾ ಪುಠಾಣಿ ಎಳ್ಳು ಅಗಸಿಯ ಹಿಂಡಿಗಳು, ಖೊಬ್ರಿ, ಉಳ್ಳಾಗಡ್ಡಿ ಬೆಳ್ಳೊಳ್ಳಿ ಚಟ್ನಿಗಳು, ಮೊಸರನ್ನ ಚಿತ್ರಾನ್ನಗಳು ಹೀಗೆ ಬಗೆ ಬಗೆಯ ಅಡಿಗೆಯ ಪದಾರ್ಥಗಳನ್ನು ಮಾಡಿ ಕಟ್ಟಿಕೊಂಡು ಓಣಿಯ ಜನರನ್ನು ಕರೆದುಕೊಂಡು ತಮ್ಮ ಹೊಲಗಳಿಗೆ ಹೋಗುವುದೇ ಒಂದು ಸಂಭ್ರಮ. ಅಲ್ಲಿ ಹೊಲದ ಒಂದು ಭಾಗದಲ್ಲಿ ಐದು ಸಾಧಾರಣ ಗಾತ್ರದ ಕಲ್ಲುಗಳನ್ನು ಇಡುತ್ತಾರೆ. ಅವುಗಳ ಹತ್ತಿರ ಸ್ವಲ್ಪ ದೊಡ್ಡ ಕಲ್ಲೊಂದನ್ನು ಇಡುತ್ತಾರೆ. ಇವು ಪಾಂಡವರೆಂದೂ ಒಂದೇ ಕಲ್ಲು ಕುಂತಿ ಎಂದೂ ಭಾವಿಸಿ ಪೂಜಿಸಲಾಗುತ್ತದೆ. ಕುಂತಿ ಸಂತಾನದೇವತೆ ಎಂದೂ ಅವಳ ಕೃಪೆಯಿಂದ ಬೆಳೆ ಇಮ್ಮಡಿ ಮುಮ್ಮಡಿಯಾಗಿ ಬರಲೆಂದು ಆಶಿಸಲಾಗುತ್ತದೆ. ಕೆಲವು ಭಾಗಗಳಲ್ಲಿ ಈ ಐದೂ ಕಲ್ಲುಗಳ ಮೇಲೆ ಸುಣ್ಣದಿಂದ ಹೀಗೆ ಬರೆಯಲಾಗುತ್ತದೆ. ಮುಂದೆ ಸುಗ್ಗಿಯನ್ನು ಮಾಡುವಾಗ ಕಣದಲ್ಲಿ ಇವುಗಳನ್ನು ಹುಡುಕಾಡಿ ತಂದಿಟ್ಟು ಪೂಜೆ ಮಾಡಲಾಗುತ್ತದೆ. ಪಾಂಡವರಿಗೆ ವಿಭೂತಿ ಕುಂಕುಮಗಳಿಂದ ಪೂಜಿಸಿ ಊದಿನಕಡ್ಡಿಯಿಂದ ಬೆಳಗಿ ನಂತರ ತಂದ ಎಡೆಯನ್ನು ನೈವೇದ್ಯ ಮಾಡುತ್ತಾರೆ.[೧೧]

ಇದಾದ ಮೇಲೆ ತಾವು ತಂದ ಅಡಿಗೆಯ ಪದಾರ್ಥಗಳಿಂದ ಒಂದನ್ನು ಬಿಡದೆ ಸ್ವಲ್ಪ ಸ್ವಲ್ಪ ತೆಗೆದುಕೊಳ್ಳುತ್ತಾರೆ. ಎಲ್ಲವನ್ನೂ ಕಲಿಸಿ ಈ ಮಿಶ್ರಣವನ್ನು ಹೊಲದ ತುಂಬ ಚೆಲ್ಲುತ್ತಾರೆ. ಇದೇ ಚರಗ ಚೆಲ್ಲುವುದು. ಭೂದೇವಿಗೆ ಬಯಕೆಯೂಟ ಉಣ್ಣಿಸುವುದು, ಹೀಗೆ ಚರಗ ಚೆಲ್ಲುವಾಗ ಹೊಲದ ಬೆಳೆಯನ್ನು ಹುಲುಸಾಗಲೆಂದು ಭೂಮಿತಾಯಿಯನ್ನು ಬೇಡಿಕೊಳ್ಳುವ ವಾಡಿಕೆ ಅನೇಕ ಕಡೆಗಳಲ್ಲಿದೆ. ನಂತರ ಎಲ್ಲರೂ ಕೂಡಿಕೊಂಡು ಊಟ ಮಾಡುತ್ತಾರೆ. ಇದು ಸೀಗೀ ಹುಣ್ಣಿಮೆಯ ಆಚರಣೆ. ಇಲ್ಲಿ ಮುಖ್ಯವಾಗಿ ರೈತ ಭೂಮಿ ತಾಯಿಗೆ ತೋರಿಸುವ ಗೌರವ ಕೃತಜ್ಞತೆ ಭಕ್ತಿಗಳು ವ್ಯಕ್ತವಾಗುತ್ತವೆ. ರೈತರು ಮಾನವ ಸಹಜವಾದ ಗರ್ಭಿಣಿ ಸ್ತ್ರೀಯ ಬಯಕೆಯೂಟವನ್ನು ಭೂಮಿಗೂ ಹೋಲಿಸಿ ಅವಳಿಗೆ ಉಣಬಡಿಸುತ್ತಾರೆ. ಅದಕ್ಕೇ ಆವತ್ತು ಒಂದು ಬಿಡದೆ ಎಲ್ಲಾ ಪದಾರ್ಥಗಳನ್ನು ಮಾಡುತ್ತಾರೆ. ತನಗೆ ಅಷ್ಟೊಂದು ಧಾನ್ಯ ಸಂಪತ್ತನ್ನು ನೀಡುವ ಅವಳಿಗೆ ಈ ಮೂಲಕ ಕೃತಜ್ಞತೆಯನ್ನು ತೋರಿಸುತ್ತಾರೆ.

### ೬.೮. ಗೌರಿ ಹುಣ್ಣಿಮೆ

ಮಳೆಗಾಲದ ಕೊನೆಯ ಹಬ್ಬವೆಂದರೆ ಗೌರಿಯ ಹುಣ್ಣಿಮೆ. ಬಹುತರ ಈ ಹುಣ್ಣಿಮೆಯಾದ ನಂತರ

ಹಿಂಗಾರಿಯ ಮಳೆಗಳ ಅವಸಾನವೂ ಕಡಿಮೆಯಾಗಿ ಚಳಿಯ ಆವೇಶವು ಬಲವಾಗುವದು. ಗೌರಿಯ ಪೂಜೆಯೂ ನಮ್ಮ ಜನತೆಯಲ್ಲಿ ಅನೇಕ ವಿಧಾನದಲ್ಲಿ ಬಂದಿದೆ. ಗಜ ಗೌರಿಯ ಪೂಜೆ, ಮಂಗಲಗೌರಿಯ ಪೂಜೆ, ಸಂಪತ್ತು ಗೌರಿಯ ಪೂಜೆ ಮೊದಲಾದವುಗಳು ಕಂಡುಬರುವವು. ಹಳ್ಳಿಗಳಲ್ಲಿ ಗೌರಿಯ ಆಡದ ಹೆಣ್ಣುಮಕ್ಕಳಿಲ್ಲ. ಹತ್ತು ಮನೆಗಳುಳ್ಳ ಹಳ್ಳಿಗಳಲ್ಲಿ ಎರಡು ಬಣಗಳಾಗಿ ಗೌರಿಯ ಆಟದಲ್ಲಿ ಕಡಿದಾಡಿದ್ದೂ ಉಂಟು. ಅಷ್ಟು ಬೇರೂರಿಬಿಟ್ಟಿದೆ ಗೌರಿಯ ಆಟವು ನಮ್ಮ ಹಳ್ಳಿಯ ಹೆಣ್ಣು ಮಕ್ಕಳಲ್ಲಿ.

ಗೌರಿಯ ಹುಣ್ಣಿಮೆಯು ಐದು ದಿನವಿರುವಾಗಲೇ ಗಾಣಿಗರ ಹೆಣ್ಣುಮಕ್ಕಳುಗಳು ಸಣ್ಣವರು-ದೊಡ್ಡವರು ಬೇಧವಿಲ್ಲದೆ ಬೆಳದಿಂಗಳಲ್ಲಿ ಆಡುವರು. ಗೌರಿಗೆ ದಿನವೊಂದು ತರದ ಆರತಿಗಳನ್ನು ಮಾಡಿ ಹೂಗಳನ್ನು ಗೌರಿಗೆ ಏರಿಸಿ ಆರತಿ ಬೆಳಗುವರು, ಸಣ್ಣ ಮಕ್ಕಳು ಅನೇಕ ಹಾಡುಗಳನ್ನು ಆರತಿಯನ್ನು ಬೆಳಗುವಾಗ ಹಾಡುವುದನ್ನು ನಾವು ಕೇಳಬಹುದು.

ಗೌರಿ, ಗೌರಿ, ಗಾಣಾಗೌರಿ, ಮ್ಯಾಣಾಗೌರಿ, ಕುಳ್ಳೀಗೌರಿ, ಕುಂಕುಮಗೌರಿ|
ಅವರಿಯಂತಾ ಅಣ್ಣನ ಕೊಡೆ ಅಣ್ಣನ ಕೊಡೆ|
ತೊಗರಿಯಂತಾ ತಮ್ಮನ ಕೊಡ- ತಮ್ಮನ ಕೊಡ|
ನಿಲ್ಲ ನಿಲ್ಲ ಗೌರವ್ವ, ಗೌರವ್ವ|
ನಿಲ್ಲಿಸಿಕೋರೋ ಬಸಪ್ಪ ಬಸಪ್ಪ|
ವರುಷಕ್ಕೊಮ್ಮೆ ಕರಿಸೇನೆ ಕರಿಸೇನೆ|
ಅರಿಶಿಣ ಪತ್ತಲ ಉಡಿಸೇನೆ ಉಡಿಸೇನೆ|
ಹಸಿರು ಬಳಿಯ ಇಡಿಸೇನೆ ಇಡಿಸೇನೆ|
ಉಡಿಯಕ್ಕಿ ಹಾಕಿ ಕಳಿಸೇನೆ ಕಳಿಸೇನೆ|
ಅಗಸಿಮಟ ಕಳಿಸೇನೆ ಕಳಿಸೇನೆ|
ಆಡಲಾರಿನೆ ಗೌರಿ, ಪಾಡಲಾರಿನೆ ಗೌರಿ, ಚಿನ್ನದ ಬೆಟಗಾಳೆ ಗೌರಿ
ಬಣ್ಣದ ಬಾಚುಣಿಕೆ ಗೌರಿ ದಾಳಿಂಬ್ರೊ|

ಎಂದು ಹಾಡಿ ಆರತಿಯನ್ನು ಎತ್ತುವರು. ಆ ಹೆಣ್ಣುಮಕ್ಕಳು 'ಅವರಿಯಂತ ಅಣ್ಣನು ಬೇಕು, ತೊಗರಿಯಂತ ತಮ್ಮನ್ನು ಬೇಕು' ಎಂದು ಗೌರಿಗೆ ಬೇಡಿಕೊಳ್ಳುತ್ತಾರೆ.

ಕಣಕದಾರೊತಿ ಮಾಡೇನ ಗೌರಿ
ಭಾಳ ದೀವಿಗೆ ಹಚ್ಚೇನ ಗೌರಿ
ಹಾರೂರಾಡುದು ಹಾದೀ ಬೀದ್ಯಾಗ
ಸೆಟರಾಡುದು ಪಟ್ಟಣ ಸಾಲ್ಯಾಗ
ಏಕದಾರೂತೆ ಗೌರಿಗೆ ಬೆಳಗಿರಾರೂತೆ॥

ಎಂದು ಹಾಡುತ್ತಾರೆ. ಗೌರಿಯ ಹುಣ್ಣಿಮೆಯ ದಿವಸ, ಬಹಳ ಸಂಭ್ರಮದಿಂದ ಹೆಣ್ಣುಮಕ್ಕಳು ಕೂಡಿ ಗೌರಿಯನ್ನು ಕಳಿಸುವರು. 'ಗೌರಿಯು' ತನ್ನ ಗಂಡನ ಮನೆಗೆ ನಂದಾದೀವಿಗೆಯ ಬೆಳಕಿನಲ್ಲಿ ಹೋಗಲೆಂದು ಕೊಂಗಡಗಳ ಬತ್ತಿಗಳನ್ನು ಸಿಂಗಾರ ಮಾಡಿ ಊರ ಮುಂದಿನ ದೊಡ್ಡ ಜಲಾಶಯಗಳಲ್ಲಿ ಬಿಡುವುದನ್ನು ನಾವು ಬಳ್ಳಾರಿಯ ಎಲ್ಲಾ ಹಳ್ಳಿಗಳಲ್ಲಿಯೂ ಕಾಣಬಹುದು. ಈ ಸಮಯದಲ್ಲಿ ಹಿರಿಯ ಹೆಣ್ಣುಮಕ್ಕಳು ಗೌರಿಗಂಗೆಯ ಸಂವಾದ, ಮಹಾದೇವನಿಗೆ ಇಬ್ಬರ್ಹೆಂಡರ ಕಾಟ, ಸವತಿ ಮತ್ಸರ, ಮೊದಲಾದವುಗಳಿಗೆ ಸಂಬಂಧ ಜಿದ್ದಿಗೆ ಜಿದ್ದು ಹಾಡುಗಳನ್ನು ಹಾಡುವರು. ಹಲಕೆಲವುಗಳಲ್ಲಿ ಕೋಲು ಹಾಕುವರು, ಹಲ ಕೆಲವುಗಳನ್ನು ಪಲ್ಲವಿ, ಸೊಲ್ಲುಗಳೊಡನೆ ಹಾಡುವರೂ 'ಗೌರಿಗಂಗೆಯರ ಸಂವಾದ'ದ ಹಾಡು ಎಲ್ಲಾ ಭಾಗಗಳಲ್ಲಿ ಕಂಡುಬರುವುದು. ಏನೇ ಇದ್ದರೂ ಹಳ್ಳಿಗಳಲ್ಲಿ ಹೆಣ್ಣು ಮಕ್ಕಳುಗಳು ದೊಡ್ಡವರು-ಚಿಕ್ಕವರು ತಾರತಮ್ಯವಿಲ್ಲದೆ ಈ ಹುಣ್ಣಿಮೆಯನ್ನು ಸಂಭ್ರಮದಿಂದ ಆಚರಿಸುವರು.

### ೬.೯. ಸಂಕ್ರಾಂತಿ

ಜಗತ್ತಿಗೆ ಕಣ್ಣಾದ ಇಂತಹ ಸೂರ್ಯನ ಚಲನೆಯ ಹಬ್ಬ, ಸಂಕ್ರಮಣ ಅಥವಾ ಸಂಕ್ರಾಂತಿ. ಸಂಸ್ಕೃತದಲ್ಲಿ 'ಕ್ರಮಣ' ಎಂದರೆ 'ಹೆಜ್ಜೆ ಇಡುವಿಕೆ' (ಕ್ರಮುಪಾದನಿಕ್ಷೇಪೆ) ಎಂದರ್ಥ. 'ಸಂಕ್ರಮಣ' ಎಂದರೆ ಚೆನ್ನಾಗಿ ಹೆಜ್ಜೆ ಇಡುವಿಕೆ. ಸೂರ್ಯನು ಒಂದು ರಾಶಿಯಲ್ಲಿ ತನ್ನ ಇರುವುದನ್ನು ಮುಗಿಸಿ ಇನ್ನೊಂದು ರಾಶಿಗೆ ಹೆಜ್ಜೆ ಇಡುವುದೇ ಸಂಕ್ರಮಣ ಅಥವಾ ಸಂಕ್ರಾಂತಿ. ಆದ್ದರಿಂದ ಸೂರ್ಯನ ಚಲನೆಯ ಹಬ್ಬ, ಈ ಸಂಕ್ರಾಂತಿ. ವರ್ಷಕ್ಕೆ ಹನ್ನೆರಡು ಸಂಕ್ರಾಂತಿ ಅಥವಾ ಸಂಕ್ರಮಣಗಳು (ಏಕೆಂದರೆ ರಾಶಿಗಳು ಹನ್ನೆರಡು; ಸೌರಮಾಸಗಳೂ ಹನ್ನೆರಡು) ಆದರೆ ಇವುಗಳಲ್ಲಿ ಪ್ರಮುಖವಾದವು ಎರಡು ಮಾತ್ರ. ಸೂರ್ಯನು ಮಿಥುನರಾಶಿಯನ್ನು ಬಿಟ್ಟು ಕರ್ಕಾಟಕ ರಾಶಿಯನ್ನು ಪ್ರವೇಶಿಸುವ 'ಕರ್ಕಾಟಕ ಸಂಕ್ರಮಣ' ಮತ್ತು ಧನುರಾಶಿಯನ್ನು ಬಿಟ್ಟು ಮಕರ ರಾಶಿಯನ್ನು ಸಂಕ್ರಮಿಸುವ 'ಮಕರ ಸಂಕ್ರಮಣ'. ಇವು ಸೂರ್ಯನ ಪಯಣಕ್ಕೆ ಸಂಬಂಧಿಸಿದ 'ದಕ್ಷಿಣಾಯನ' ಮತ್ತು 'ಉತ್ತರಾಯಣ'ವನ್ನು ಸೂಚಿಸುವುದರಿಂದ ಇವೆರಡಕ್ಕೆ ಹೆಚ್ಚಿನ ಮಹತ್ವ. ಉತ್ತರಾಯಣವನ್ನು 'ದೇವಯಾನ' ಮತ್ತು ದಕ್ಷಿಣಾಯನವನ್ನು 'ಪಿತೃಯಾನ' ಎಂದು ವೇದಗಳು ಕರೆದಿವೆ. ಉಪನಿಷತ್ತು ಭಗವದ್ಗೀತೆ ಮತ್ತು ಮಹಾಭಾರತಗಳಲ್ಲಿ ದೇವಯಾನದ ಪ್ರಶಂಸೆ ಇದೆ. ಆಧ್ಯಾತ್ಮಿಕ ದೃಷ್ಟಿಯಿಂದ ಈ ಉತ್ತರಾಯಣ-ದಕ್ಷಿಣಾಯನ ಮಾರ್ಗಗಳು ದೇಹದ ನಾಡಿಗಳನ್ನು ಅನುಸರಿಸಿವೆ-ಎಂದು ಬ್ರಹ್ಮಸೂತ್ರಗಳು ಹೇಳುತ್ತವೆ. ಯೋಗಿಗಳ ಉತ್ಕ್ರಮಣಕ್ಕೆ ಕಾಲನಿಯಮವಿಲ್ಲ. ಆದರೂ ಬೀಷ್ಮಾದಿಗಳು ಉತ್ತರಾಯಣವನ್ನು ನಿರೀಕ್ಷಿಸಿದರು.[೧]

ಯುಗಾದಿಯು ಬೇವು ಬೆಲ್ಲದ ಹಬ್ಬವಾದರೆ, ಸಂಕ್ರಾಂತಿಯು ಎಳ್ಳು ಬೆಲ್ಲದ ಹಬ್ಬ. ಅಂದು ಎಣ್ಣೆಯನ್ನು ಮೈಗೆ ಹಚ್ಚಿಕೊಂಡು ಸ್ನಾನ, ಎಳ್ಳಿನ ದಾನ, ಎಳ್ಳಿನ ಹೋಮ, ಎಳ್ಳೆಣ್ಣೆಯ ದೀಪಗಳನ್ನು ಬೆಳಗಿಸುವುದು. ಇವೆಲ್ಲಕ್ಕೂ ವಿಶೇಷ ಪ್ರಾಶಸ್ತ್ಯ. ಎಳ್ಳು ಯಾವಾಗಲೂ ಪಾಪಗಳನ್ನು ಪರಿಹರಿಸುವುದು. ದೇಹದ ಬಲ ಮತ್ತು ಪುಷ್ಟಿಗಳನ್ನು ಬೆಳೆಸುವುದು. ಆದ್ದರಿಂದ ಅದನ್ನು ಈಗ ದಾನಮಾಡುತ್ತಿರುವನು.

ಇದರಿಂದ ನನಗೆ ಶಾಂತಿಯನ್ನು ಕೊಡು ಎಂಬುದು ಎಳ್ಳುದಾನ ಮಾಡುವ ಸಂದರ್ಭದಲ್ಲಿ ಹೇಳುವ ಶ್ಲೋಕದ ಸಾರ. ಬರಿಯ ಎಳ್ಳನ್ನು ಮಾತ್ರ ಕೊಡುವುದು ಅಷ್ಟು ಪ್ರಾಶಸ್ತವಲ್ಲವೆಂದು, ಜೊತೆಗೆ ಬೆಲ್ಲವನ್ನು ಸೇರಿಸಲಾಗುವುದು. 'ಎಳ್ಳು ಬೆಲ್ಲ ತಿಂದು ಒಳ್ಳೆಯ ಮಾತುಗಳನ್ನು ಮಾತಾಡು' ಎಂಬುದು ಈ ಗಾಣಿಗ ಸಮುದಾಯದ ಹಾರೈಕೆ.

ಚಳಿಗಾಲದಲ್ಲಿ ನಮ್ಮ ದೇಹದಲ್ಲಿರುವ ತೈಲ(Fat) ಅಂಶವು ಶಾಖಕ್ಕಾಗಿ ಖರ್ಚಾಗಿ, ಕೊರತೆ ಏರ್ಪಡುವುದು. ಇದರ ಜೊತೆಗೆ ಶೀತ ವಾತ ಸಂಬಂಧಿ ರೋಗಗಳು ಈ ಕಾಲದಲ್ಲಿ ಕಾಣಿಸುವ ಸಾಧ್ಯತೆಗಳಿವೆ. ಎಳ್ಳಿನ ಸೇವನೆ ಈ ಕೊರತೆಯನ್ನು ತುಂಬಿ, ಈ ರೋಗಗಳನ್ನು ದೂರ ಮಾಡಬಲ್ಲದು. ಇದು ರೂಢಿಯ ವೈದ್ಯಕೀಯ ಹಿನ್ನೆಲೆ. ಹಾಗೆಯೇ ಎಣ್ಣೆಯ ಅಂಶ ಹೆಚ್ಚಾಗಿರುವ ಒಣ ಕೊಬ್ಬರಿ, ನೆಲಗಡಲೆ ಬೀಜ ಇವುಗಳನ್ನು ಎಳ್ಳಿನ ಜತೆಗೆ ಸೇರಿಸಲಾಗುವುದು. ಬೆಲ್ಲದ ಬದಲು ಸಕ್ಕರೆ ಬರೀ ಸಕ್ಕರೆಯ ಬದಲು ಸಕ್ಕರೆಯಿಂದ ಮಾಡಿದ ವಿವಿಧ ಆಕಾರದ ಅಚ್ಚುಗಳು. ಹಬ್ಬಗಳು, ಕುಸುರಿಕಾಳು ಹೀಗೆ ಈ ವೈವಿಧ್ಯಗಳೆಲ್ಲ ಸದಾಭಿರುಚಿ ಮತ್ತು ಕಲಾವಂತಿಕೆಗಳ ಕುರುಹುಗಳಾಗಿವೆ. ಇವುಗಳನ್ನು ಮನೆಮನೆಗೆ ಕೊಂಡೊಯ್ದು ಇಷ್ಟಮಿತ್ರರಿಗೆ ವಿತರಿಸುವುದು ಎಳ್ಳುಬೀರುವುದು ಈ ಹಬ್ಬದ ಸಂಭ್ರಮ.

### ೬.೧೦. ಶಿವರಾತ್ರಿ

ಶಿವ-ಶಿವ ಎಂದರೆ ಸಿಡಿಲೆಲ್ಲ ಬಯಲಾಗಿ|
ಕಲ್ಲು ಬಂದೆರಗಿ ಕಡೆಗಾಗಿ| ಎಲೆ ಮನವೆ|
ಶಿವನೆಂಬ ಶಬುದ ಬಿಡಬ್ಯಾಡ||

ಎಂಬಂತೆ ಶಿವಧ್ಯಾನ ನಿರತರಾಗಿದ್ದರೆ ಯಾವ ವಿಪತ್ತೂ ಬರಲಾರದು ಎಂಬುದು ನಮ್ಮ ಪ್ರಾಚೀನರ ನಂಬಿಕೆ. ಶಿವನ ಧ್ಯಾನ- ಆರಾಧನೆಗಳಿಗೆ ಅತ್ಯಂತ ಪ್ರಶಸ್ತವಾದ ದಿನ ಶಿವರಾತ್ರಿ. ಪ್ರತಿ ಅಮವಾಸ್ಯೆಯ ಹಿಂದಿನ ದಿನ ಮಾಸ ಶಿವರಾತ್ರಿಯಾದರೆ, ಮಾಘ ಬಹುಳ ಚತುರ್ದಶಿ ಮಹಾಶಿವರಾತ್ರಿ.

ಮಹಾಶಿವರಾತ್ರಿಯಂದು ನಡುರಾತ್ರಿ ಜಗತ್ತಿನ ತಂದೆಯೆನಿಸಿದ ಪರಶಿವನು ಸ್ವಯಂಭುವಾಗಿ ಲಿಂಗರೂಪದಿಂದ ಉದ್ಭವಿಸಿದನೆಂದು ಹೇಳುತ್ತಾರೆ. ಇದಲ್ಲದೆ ಶಿವರಾತ್ರಿ ಶಿವನು ಹಾಲಾಹಲ ವಿಷ ಕುಡಿದ. ದಿನವೆಂತಲೂ, ತಾಂಡವ ನೃತ್ಯ ಮಾಡಿದ ದಿನವೆಂದೂ ಪ್ರತೀತಿ ಇದೆ. ಅಂತೂ ಶಿವನಿಗೆ ಅತ್ಯಂತ ಪ್ರಿಯವಾದ ದಿನ, ಈ ಮಹಾಶಿವರಾತ್ರಿ. ಅಂದು ಶಿವಾಲಯಗಳಲ್ಲಿ, ದ್ವಾದಶ ಜ್ಯೋತಿರ್ಲಿಂಗ ಕ್ಷೇತ್ರಗಳಲ್ಲಿ, ಯಾಣ-ಕಾಶೀ-ಗೋಕರ್ಣ-ರಾಮೇಶ್ವರ ಮುಂತಾದ ತೀರ್ಥಕ್ಷೇತ್ರ ನದಿಗಳಲ್ಲಿ ಲಕ್ಷ ಲಕ್ಷ ಜನರು ಪೂಜೆ-ಪುನಸ್ಕಾರಗಳಲ್ಲಿ ಮಗ್ನರಾಗಿರುತ್ತಾರೆ. ಬಳ್ಳಾರಿಯಲ್ಲಿ ಪ್ರಸಿದ್ಧವಾದ 'ಹಂಪಿ' ದರ್ಶನ, ತುಂಗಭದ್ರದಲ್ಲಿ ಸ್ನಾನ (ಜಳಕ) ಮಾಡಿ ದರ್ಶನ ಪಡೆಯುವರು.

ಗಾಣಿಗ ಸಮುದಾಯದವರು ಶಿವರಾತ್ರಿಯ ದಿನ ಅರುಣೋದಯಕ್ಕೆ ಎದ್ದು, ಸ್ನಾನಮಾಡಿ ಶುಭ್ರವಸ್ತ್ರವನ್ನುಟ್ಟು, 'ಸಮಸ್ತ ಪಾಪನಿವಾರಣೆಗಾಗಿ, ಜ್ಞಾನಮೋಕ್ಷ ಪ್ರಾಪ್ತಿಗಾಗಿ ಶಿವರಾತ್ರಿ ವ್ರತ ಆಚರಿಸುತ್ತೇನೆ'

ಎಂದು ಸಂಕಲ್ಪ ಮಾಡಬೇಕು. ತ್ರಯೋದಶಿಯಂದು ಒಪ್ಪತ್ತು ಊಟ; ಚತುರ್ದಶಿಯ ದಿನ ಪೂರ್ಣ ನಿರಾಹಾರ; ಅಮವಾಸ್ಯೆಯಂದು ಪಾರಾಣೆ. ತೀರ ಅಸಮರ್ಥರಾಗಿದ್ದರೆ ಕ್ಷೀರಾಹಾರ ಅಥವಾ ಫಲಾಹಾರ. ಪ್ರದೋಷ ಕಾಲದಲ್ಲಿ ಶಿವಾಲಯಕ್ಕೆ ಹೋಗಿ ರಾತ್ರಿ ನಾಲ್ಕು ಯಾಮಗಳಲ್ಲಿ ರುದ್ರಾಭಿಷೇಕ, ಹರಿಕಥೆ, ಸತ್ಸಂಗಾದಿಗಳಲ್ಲಿ ಮಗ್ನರಾಗಬೇಕು. ಕೊನೆಯಲ್ಲಿ 'ನಾನಾ ವಿಧದ ಪಾಪಕರ್ಮಗಳಿಂದ ಭವಬಂಧನದಲ್ಲಿ ಸಿಲುಕಿದ ನನ್ನನ್ನು, ಲೋಕಕ್ಕೆ ಸುಖವನ್ನು ಕೊಡುವ ಸ್ವಾಮಿಯಾದ ನೀನು ಉದ್ಧರಿಸು ಎಂದು ಬೇಡಿಕೊಳ್ಳಬೇಕು ಎಂದು ಗಾಣಿಗ ಸಮುದಾಯದ ಹಿರಿಯರು ಹೇಳುವರು.

### ೬.೧೧. ರಕ್ಷಾಬಂಧನ

ಶ್ರಾವಣ ಶುದ್ಧ ಹುಣ್ಣಿಮೆಯಂದು ಆಚರಿಸುವ 'ರಕ್ಷಾಬಂಧನ' ರಾಖಿ ಹಬ್ಬವೆಂದೇ ಪ್ರಸಿದ್ಧಿ ಪಡೆದಿದೆ. ಸಮಾಜದ ಸ್ತ್ರೀ ಪುರುಷರಲ್ಲಿ ಪರಸ್ಪರ ಸೋದರತೆಯ ಪವಿತ್ರ ಸಂಬಂಧವನ್ನು ಮತ್ತಷ್ಟು ಬಲಪಡಿಸುವ ಹಬ್ಬ ಇದು. 'ಸಮಾಜದಲ್ಲಿರುವ ಸ್ತ್ರೀಯರೆಲ್ಲ ತನ್ನ ಅಕ್ಕ-ತಂಗಿಯರು, ಆಪತ್ಕಾಲದಲ್ಲಿ ಅವರ ಮಾನ ಪ್ರಾಣಗಳನ್ನು ರಕ್ಷಿಸುವುದು ನನ್ನ ಆದ್ಯ ಕರ್ತವ್ಯ. ಈ ಕರ್ತವ್ಯ ನಿರ್ವಹಣೆಯಲ್ಲಿ ಸಂದರ್ಭ ಬಂದರೆ ಪ್ರಾಣ ಕೊಡಲು ನಾನು ಸಿದ್ಧ ಎಂಬ' ಪ್ರತಿಜ್ಞೆಯ ಸಂಕೇತ. ಪವಿತ್ರ ರಕ್ಷಾಬಂಧನ.

ರಕ್ಷಾಬಂಧನ ನಮ್ಮ ಜೀವನಯಜ್ಞದ ಕಂಕಣಬಂಧನ ಹಬ್ಬವೂ ಹೌದು. ರಥೋತ್ಸವ, ಯಜ್ಞ, ಮದುವೆ, ಮೊದಲಾದ ಉತ್ಸವಗಳು ನಿರ್ವಿಘ್ನವಾಗಿ ನಡೆಯಲೆಂದು ಶ್ರೀದೇವರನ್ನು ಪ್ರಾರ್ಥಿಸಿ, ದೀಕ್ಷೆ ತೊಟ್ಟು ಕಂಕಣಕಟ್ಟುವ ಆಚರಣೆ ಗಾಣಿಗ ಸಮುದಾಯದಲ್ಲೂ ರೂಢಿಯಲ್ಲಿದೆ. ನಮ್ಮ ಜೀವನವೂ ಒಂದು ಯಜ್ಞವಷ್ಟೆ. ವರ್ಷದಲ್ಲಿ ಒಂದು ದಿನ ಪವಿತ್ರವಾದ ರಕ್ಷೆಯನ್ನು ಕಂಕಣದಂತೆ ಧರಿಸಿ, ಆ ವರ್ಷವೆಲ್ಲ ನಮ್ಮ ಕಾರ್ಯಗಳು ಆತಂಕವಿಲ್ಲದೆ ನಡೆಯಲಿ; ಜೀವನ ಯಜ್ಞಕ್ಕೆ ದುಷ್ಟಶಕ್ತಿಗಳು ಆತಂಕವೊಡ್ಡದಿರಲಿ ಎಂದು ಭಗವಂತನನ್ನು ಪ್ರಾರ್ಥಿಸುವ ಪವಿತ್ರ ಆಚರಣೆ ಈ ರಕ್ಷಾಬಂಧನ.

ಪ್ರಾಂತ ಬೇದ, ಭಾಷಾ ಬೇದ, ಪಕ್ಷ, ಜಾತಿ, ಧರ್ಮ, ವೃತ್ತಿ-ಪಂಥಗಳ ಹೆಸರಿನಲ್ಲಿ ಸಮಾಜದ ಏಕತೆ, ನುಚ್ಚುನೂರಾಗುತ್ತಿರುವ ಇಂದಿನ ಪರಿಸ್ಥಿತಿಯಲ್ಲಿ, ರಾಷ್ಟ್ರದ ಐಕ್ಯತೆ, ರಾಷ್ಟ್ರದ ಮಕ್ಕಳಲ್ಲಿ ಅಬೇದ್ಯ ಸ್ನೇಹ-ಸಹಕಾರ ಮನೋಭಾವ, ರಾಷ್ಟ್ರ ರಕ್ಷಣೆಗಾಗಿ ಸರ್ವಸ್ವವನ್ನೂ, ಅರ್ಪಿಸುವ ಸಿದ್ಧತೆ, ಪರಸ್ತ್ರೀ-ಪುರುಷರಲ್ಲಿ ಸೋದರ ಮನೋಭಾವ ಬೆಳೆಸಿಕೊಳ್ಳಬೇಕಾದದ್ದು ಅತ್ಯಗತ್ಯವಾಗಿದೆ. ಇಂತಹ ಸಂದರ್ಭದಲ್ಲಿ ಸ್ನೇಹ ಸಂಜೀವಿನೀ ಮಂತ್ರದ ಸಂಕೇತವೇ, 'ರಕ್ಷಾ ಬಂಧನ' ಹಬ್ಬವಾಗಿದೆ ಎಂದು ಗಾಣಿಗ ಸಮುದಾಯದ ಹಿರಿಯರಿಂದ ತಿಳಿದು ಬಂದ ವಿಚಾರಗಳಾಗಿವೆ.

ಟಿಪ್ಪಣಿಗಳು

೧. ಡಾ. ಅರ್ಜುನ ಯು. ಗೊಳಸಂಗಿ, ಗೊಳಸಂಗಿ ಗ್ರಾಮ: ಒಂದು ಸಾಂಸ್ಕೃತಿಕ ಅಧ್ಯಯನ, ೧೯೯೫, ಪು.೮೪

೨. ಅದೇ, ಪು.೮೫

೩. ತಮ್ಮ ತಮ್ಮ ಮನೆಗಳನ್ನು ಬಸವಣ್ಣನ ಸೆಗಣಿಯಿಂದ ಸಾರಿಸುತ್ತಾರೆ. ಮಣ್ಣಿನ ಗೋಡೆಗಳಿಗೆ ಸುಣ್ಣ, ಕೆಮ್ಮಣ್ಣು, ಬಣ್ಣ, ಮಣ್ಣನ್ನು ಉಪಯೋಗಿಸುತ್ತಾರೆ.

೪. ತಮಗಾಗಿ ತರುವ ಸಂತಸದ ಸಮೃದ್ಧಿ ಸಂಕೇತ ಎನ್ನುತ್ತಾರೆ.

೫. ಕೆಲವು ರೋಗಗಳು ನಿವಾರಣೆಯಾಗುತ್ತವೆ ಎಂಬುದು ಜನಪದ ವೈದ್ಯಕೀಯ ಅಂಶ.

೬. ಡಾ. ಅರ್ಜುನ ಯು. ಗೊಳಸಂಗಿ, ಗೊಳಸಂಗಿ: ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ೧೯೯೫, ಪು.೮೭

೭. ಡಾ. ಅ.ಯು.ಗೊ.ಗೊ.ಗ್ರಾ.ಒ.ಸಾ.ಅ., ೧೯೯೫, ಪು.೯೨

೮. ಅದೇ, ಪು.೯೫

೯. ಕೆಲವು ಹಳ್ಳಿಗಳಲ್ಲಿ ಆರ್ಥಿಕವಾಗಿ ಚೆನ್ನಾಗಿದ್ದ ಗಾಣಿಗರು ಈ ಹಬ್ಬವನ್ನು ಅದ್ದೂರಿಯಾಗಿ ಮಾಡುತ್ತಾರೆ.

೧೦. ಒಡ ಹುಟ್ಟಿದವರು ಯಾವುದೇ ವಿಷಯದಲ್ಲಿ ಜಗಳ ಮಾಡಿಕೊಂಡು ದೂರ ಸರಿದವರನ್ನು ಬರಮಾಡಿಕೊಂಡು ಕಪ್ಪು-ಕಾಣಿಕೆ ಕೊಟ್ಟು ಸುಖ-ದುಃಖವನ್ನು ಹಂಚಿಕೊಳ್ಳುವರು.

೧೧. ಡಾ. ಶಿವಾನಂದ ಕೆಳಗಿನ ಮನಿ, ಸುವರ್ಣ ನಗರಿ ಸುಣ್ಣಕಲ್ಲು ಬಿದರಿ, ೨೦೦೫, ಪು.೧೧೩

೧೨. ಡಾ. ಬಿ.ಎಸ್. ಗದ್ದಗಿಮಠರ ಬರಹಗಳು, ೧೯೮೮, ಪು.೪೫

೧೩. ಡಾ. ಎಚ್.ವಿ. ನರಸಿಂಹ ಮೂರ್ತಿ, ನಮ್ಮ ಹಬ್ಬಗಳು, ೨೦೦೨, ಪು.೧೧೫

೧೪. ಅದೇ, ಪು.೧೨೭

# ಅಧ್ಯಾಯ ೭

# ಗಾಣಿಗರ ಸಾಹಿತ್ಯ

೭.೧. ಗಾಣಿಗರ ಗಾದೆಗಳು

೭.೧.೧. ಕೌಟುಂಬಿಕ ಗಾದೆಗಳು

೭.೧.೨. ಸಾಮಾಜಿಕ ಗಾದೆಗಳು

೭.೧.೩. ನೈತಿಕ ಗಾದೆಗಳು

೭.೧.೪. ಲೈಂಗಿಕ ಗಾದೆಗಳು

೭.೧.೫. ಸಂಕೀರ್ಣ ಗಾದೆಗಳು

೭.೨. ಗಾಣಿಗರ ಒಗಟುಗಳು

೭.೩. ಗಾಣಿಗರ ಒಡಪುಗಳು

೭.೪. ಗಾಣಿಗರ ನಂಬಿಕೆಗಳು

೭.೪.೧. ಅಂಗ ಸಂಬಂಧಿ ನಂಬಿಕೆಗಳು

೭.೪.೨. ವಸ್ತು ಸಂಬಂಧಿ ನಂಬಿಕೆಗಳು

೭.೪.೩. ಕಾರ್ಯ ಸಂಬಂಧಿ ನಂಬಿಕೆಗಳು

೭.೪.೪. ಶವ ಸಂಸ್ಕಾರ ಮತ್ತು ನಂಬಿಕೆಗಳು

೭.೫. ಶಕುನಗಳು

## ೭.೧. ಗಾಣಿಗರ ಗಾದೆಗಳು

"The Wisdom of many and the wit of one" ಎಂಬ ಇಂಗ್ಲಿಷ್ ಗಾದೆಯಂತೆ ಗಾದೆ ವೇದಕ್ಕೆ ಸಮಾನ ಎಂಬುದೂ ಒಂದು ಗಾದೆ. ವೇದವೆಂದರೆ ತಿಳುವಳಿಕೆ ಅಥವಾ ಜ್ಞಾನ. ಗಾದೆಗಳು ಕೂಡ ಮಾನವ ತನ್ನ ಬದುಕಿನ ಅನುಭವದಿಂದ ಗಳಿಸಿಕೊಂಡ ತಿಳುವಳಿಕೆ ಅಥವಾ ಜ್ಞಾನದ ಕಿಡಿಗಳೇ ಆಗಿರುತ್ತವೆ.[೧]

ನಿತ್ಯದ ಭಾಷೆಯಂತೆಯೇ ಸಹಜವಾಗಿ, ಅನಿವಾರ್ಯವಾಗಿ ಜನಜೀವನದೊಡನೆ ಗಾದೆ ಬೆಳೆದು ಬಂದಿದೆ. ನಿತ್ಯ ಜೀವನದಲ್ಲಿ ಎಲ್ಲ ಸಂದರ್ಭಗಳಲ್ಲಿಯೂ ಅವಶ್ಯಕತೆಗಳಿಗನುಗುಣವಾಗಿ ಗಾದೆಗಳು ಪ್ರಯೋಗವಾಗುತ್ತಿರುತ್ತವೆ. ಆ ಅರ್ಥದಲ್ಲಿ ಇದೊಂದು ಜನಪ್ರಿಯವಾದ ಪ್ರಕಾರ ಕೂಡ ಹೌದು. 'ಗಾದೆ' ಪದವು ಮೂಲತಃ ಸಂಸ್ಕೃದ 'ಗಾಥಾ' ಎಂಬುದರಿಂದ ನಿಷ್ಪನ್ನಗೊಂಡಿದೆ ಎಂದು ವಿದ್ವಾಂಸರು ಭಾವಿಸಿರುತ್ತಾರೆ. ಸಂಸ್ಕೃತದ ಗಾಥವು ಪ್ರಾಕೃತದಲ್ಲಿ 'ಗಾಹೆ' ಆಗಿ ಕನ್ನಡದಲ್ಲಿ 'ಗಾದೆ' ಆಗಿರಬೇಕು. ಆದರೆ ಸಂಸ್ಕೃತದಲ್ಲಿ 'ಗಾಥವು' ಛಂದಸ್ಸಿನ ಒಂದು ಜಾತಿಯಾಗಿದೆ. ಕನ್ನಡದಲ್ಲಿ ಇದರ ಅರ್ಥ ಬೇರೆಯಾಗಿದೆ ಎಂಬುದನ್ನು ಗಮನಿಸಬೇಕು. ಕನ್ನಡದಲ್ಲಿ 'ಗಾದೆ'ಗೆ ಸಂವಾದಿಯಾಗಿ 'ನಾಣ್ನುಡಿ' ಎಂಬ ಅಚ್ಚಗನ್ನಡ ಪದ ಬಳಕೆಯಲ್ಲಿದೆ. ಇದರ ಜೊತೆಗೆ ಜಾಣ್ನುಡಿ, ನಲ್ನುಡಿ, ಲೋಕೋಕ್ತಿ, ಶಾಸ್ತ್ರ ಎಂಬ ಪದಗಳೂ ಕ್ವಚಿತ್ತಾಗಿ ಬಳಕೆಯಲ್ಲಿದೆ. ಸಂಸ್ಕೃತದಲ್ಲಿ ಲೋಕೋಕ್ತಿ, ಸಾಮತಿ, ಸಾರೋಕ್ತಿ ಎಂಬಿತ್ಯಾದಿ ಹೆಸರುಗಳಿವೆ. ಹಿಂದಿಯಲ್ಲಿ ಕಹಾವತ್, ಮರಾಠಿಯಲ್ಲಿ ಅಹಣಾ, ಬಂಗಾಳಿಯಲ್ಲಿ ಪ್ರವಾದ, ತಮಿಳಿನಲ್ಲಿ ಪಳಮೊಳ, ಗುಜರಾತಿಯಲ್ಲಿ ಉಖಾಣಿ, ತೆಲುಗಿನಲ್ಲಿ ನಾನುಡಿ, ಕೊಡಗಿನಲ್ಲಿ ಗಾದೆ, ತುಳುವಿನಲ್ಲಿ 'ಗಾದೆ' ಎಂಬ ಪ್ರಯೋಗಗಳಿವೆ. ಇಂಗ್ಲಿಷಿನಲ್ಲಿ "Proverb" ಎಂಬ ಪದವಿದ್ದು, ಅದು ಲ್ಯಾಟಿನ್ ಪದವಾದ 'Poverbium' ನಿಂದ ಹುಟ್ಟಿಕೊಂಡಿದೆ. ಗ್ರೀಕ್‌ನಲ್ಲಿ ಗಾದೆಗೆ ಸಮನಾದ ಪದವೆಂದರೆ Paroemia ಜನರೆದುರು ಅಥವಾ ಬೀದಿಯಲ್ಲಿ ಉದ್ಗರಿಸಿದ ಮಾತೆಂಬ ಅರ್ಥ ಈ ಪದಕ್ಕೆ ಅಲ್ಲಿದೆ. ಈ ಗಾದೆಗಳು ಬಹಳ ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿವೆಯಾದರೂ ಅವು ಯಾವಾಗ ಹುಟ್ಟಿಕೊಂಡವು ಎಂದು ನಿಖರವಾಗಿ ಹೇಳಲಾಗದು."[೨]

ಗಾದೆಯೆಂದರೆ 'ಅನೇಕರು ಅನುಭವದಿಂದ ಮೂಡಿ ಒಬ್ಬನ ಮಾತಿನಲ್ಲಿ ಮೈಮರೆತು ಮತ್ತೆ ಹಲವರಿಂದ ಸಂಸ್ಕಾರವನ್ನು ಪಡೆದು ಸಮಾಜದಲ್ಲಿ ಸೇರಿ ಹೋಗಿರುವ ಮುಕ್ತ ಪ್ರಾಯವಾದ ಉಕ್ತಿಗಳು" ಎಂದು ಹೇಳಲಾಗಿದೆ. ಆಂಗ್ಲ ತತ್ವವೇತ್ತ ಬ್ರಟ್ರ್ಯಾಂಡ್ ರಸೆಲ್ "ಗಾದೆ, ಅನೇಕರ ಬುದ್ದಿವಂತಿಕೆ ಮತ್ತು ಒಬ್ಬನ ವಿವೇಕ" ಎಂಬುದು ಕೂಡಾ ಇದೇ ಅರ್ಥದ್ದಾಗಿದೆ. ಲಾರೆಂಜನ ಪ್ರಕಾರ ಗಾದೆಗಳು 'ಶಬ್ದಗಳಲ್ಲಿ ಸಂಕ್ಷಿಪ್ತವಾಗಿದ್ದು ಜ್ಞಾನದಲ್ಲಿ ಅಗಾಧವಾಗಿರುತ್ತವೆ'. ಬೆನ್‌ಹಾಂನ ಪ್ರಕಾರ 'ಗಾದೆಗಳೆಂದರೆ ಬೀದಿಯಲ್ಲಿ ಸಿಕ್ಕುವ ಜ್ಞಾನ' ಗಾದೆಗಳು ಒಬ್ಬರ ಸೃಷ್ಟಿಯೋ? ಹಲವರ ಸೃಷ್ಟಿಯೋ? ಈ ಪ್ರಶ್ನೆಗೆ ಉತ್ತರ

ಕಂಡುಕೊಳ್ಳುವುದು ತೀರಾ ಕಷ್ಟದ ಕೆಲಸ. ಏಕೆಂದರೆ "ಯಾವುದೇ ಹೇಳಿಕೆ ಎಷ್ಟೇ ಸುಂದರವಾಗಿರಲಿ, ಅದು ಗಾದೆಯಾಗುವುದು ಅದಕ್ಕೆ ಜನ ಸಮ್ಮತಿಯ ಮುದ್ರೆ ಬಿದ್ದಾಗಲೇ ಜನ ಸಮ್ಮತಿ ಪಡೆಯದ, ಅಂದರೆ ಜನರ ಬಾಯಲ್ಲಿ ನಲಿಯುವ ಪುಣ್ಯ ಪಡೆಯದೆ ಹೋದ ಯಾವ ಬುದ್ಧಿವಂತಿಕೆಯ ಮಾತಿಗೂ ಗಾದೆಯ ಪಟ್ಟ ಸಿಗುವುದಿಲ್ಲ"[೬] ಹೀಗಾಗಿ ಗಾದೆಗಳು ಏಕಕಾಲಕ್ಕೆ ವ್ಯಕ್ತಿ ಸೃಷ್ಟಿಯೂ, ಸಮುದಾಯ ಸೃಷ್ಟಿಯೂ ಆಗಿ ಚಲಾವಣೆಗೆ ಬರುತ್ತವೆ.

ಗಾದೆಗಳ ಜನಪ್ರಿಯತೆಗೆ ಅವುಗಳಲ್ಲಿನ ಅನುಭವ ಔಚಿತ್ಯ ಹಾಗೂ ಮೊನಚುಗಳೇ ಕಾರಣವಾಗುತ್ತವೆ. ಗಾದೆಗಳಲ್ಲಿ ಜನಸಾಮಾನ್ಯರ ನಗು, ಆಚಾರ, ವಿಚಾರ, ನಂಬಿಕೆ, ಧರ್ಮ, ನಡಾವಳಿಕೆ, ಪ್ರೀತಿ, ಸತ್ಯ, ಭಕ್ತಿ, ನೀತಿ, ಮತ್ಸರ, ತಾಪ, ಕೋಪ, ಬದುಕಿನ ಸುಖಸಂಪದ, ಅರೆಕೊರೆಗಳು ಮುಂತಾಗಿ ವೈವಿಧ್ಯ ತುಂಬಿಕೊಂಡಿರುತ್ತವೆ. ಒಂದರ್ಥದಲ್ಲಿ ಗಾದೆಗಳು ಒಂದು ಸಮುದಾಯದ ಬದುಕಿನ ಪ್ರತಿಬಿಂಬಿತವಾಗಿರುತ್ತವೆ.

ಲಿಂಗಾಯಿತರಲ್ಲಿ ಒಂದು ಪಂಗಡವಾದ ಗಾಣಿಗರು ಅವರದೇ ಆದ ಜೀವನ ಕ್ರಮ, ಜೀವನ ದೃಷ್ಟಿ ಇದೆ. ಅದು ಅವರ ಮಾತುಕತೆಗಳಲ್ಲಿ ರೂಪು ಪಡೆಯುತ್ತದೆ. ಅದರಲ್ಲಿ ಸಾಹಿತ್ಯಿಕ ಅಂಶಗಳು ಕಾಣಸಿಗುತ್ತವೆ. ಅಂತ ಸಾಹಿತ್ಯಿಕ ಅಂಶಗಳು ಅವರ ಗಾದೆ, ಒಗಟು, ಒಡಪು ಹಾಗೂ ಬೈಗುಳಗಳಲ್ಲಿ ವ್ಯಕ್ತವಾಗಿವೆ. ಗಾಣಿಗರ ಸಾಹಿತ್ಯ ಏನಿದದ್ದರೂ ಅದೂ ಮೌಖಿಕವಾಗಿಯೇ ಉಳಿದು ಬಂದಿದೆ. ಅವುಗಳನ್ನಿಲ್ಲಿ ಸಂಗ್ರಹಿಸಿಕೊಡಲಾಗಿದೆ.

ಇಲ್ಲಿನ ಎಲ್ಲಾ ಗಾದೆಗಳು ಗಾಣಿಗರು ಹೇಳಿದವುಗಳು. ಇವು ಅವರ ಅನುಭವದ ಫಲಗಳು, ವೃತ್ತಿ, ವ್ಯವಹಾರ, ಬದುಕಿನ ಬವಣೆ, ಜೀವನಾದರ್ಶ, ಗುಣಸ್ವಭಾವ ಇತ್ಯಾದಿಗಳು ಗಾದೆಗಳ ಪಡೆಯಚ್ಚುಗಳಾಗಿ, ಹೊರಹೊಮ್ಮಿವೆ. ಊಟದ ಜೊತೆಗೆ ಉಪ್ಪಿನ ಕಾಯಿ ಬಳಸುವಂತೆ, ಮಾತಿನ ನಡುವೆ ಗಾಣಿಗರು ಗಾದೆಗಳನ್ನು ಬಳಸುತ್ತಾರೆ.

ಇವರು ಬಳಸುವ ಗಾದೆಗಳು ಒಬ್ಬರಿಂದ ಇನ್ನೊಬ್ಬರಿಗೆ, ಊರಿಂದ ಊರಿಗೆ ಅಲೆಯುವಾಗ ಅವರಿಂದ ಕೇಳಿದ, ಹೇಳಿದವುಗಳಾಗಿ ಕಂಡುಬರುತ್ತವೆ. ಒಮ್ಮೊಮ್ಮೆ ನೆನಪಿಗೆ ಬರದೆ ಗಾದೆಗಳಿಗಾಗಿ ಒದ್ದಾಡುತ್ತಾರೆ. ಆಗ "ಅದೇನೋ ಹೇಳ್ತಾರ ನೋಡು, ಓ... ಅಂಗೇ ಅಂದಗಾಯಿತೆಂದು ಮಾತನ್ನು ಮುಗಿಸುತ್ತಾರೆ."

ಗಾಣಿಗರು ಪ್ರಚುರವಾಗಿರುವ ಗಾದೆಗಳು ಒಳಗೊಳ್ಳುವ ವಿಷಯಗಳನ್ನು ಲಕ್ಷಿಸಿ ಅವುಗಳನ್ನು

೧. ಕೌಟುಂಬಿಕ ಗಾದೆಗಳು

೨. ಸಾಮಾಜಿಕ ಗಾದೆಗಳು

೩. ನೈತಿಕ ಗಾದೆಗಳು

೪. ಲೈಂಗಿಕ ಗಾದೆಗಳು

೫. ಸಂಕೀರ್ಣ ಗಾದೆಗಳು ಎಂಬುದಾಗಿ ವಿಂಗಡಿಸಿಕೊಳ್ಳಲಾಗಿದೆ.

### ೭.೧.೧. ಕೌಟುಂಬಿಕ ಗಾದೆಗಳು

ಕೌಟುಂಬಿಕ ಸಂಬಂಧ ನಡಾವಳಿ, ಕುಟುಂಬ ಜೀವನದ ಸಿಹಿಕಹಿ ಮುಂತಾಗಿ ಕೌಟುಂಬಿಕ ಪರಿಸರದಲ್ಲಿ ಹುಟ್ಟಿದವುಗಳನ್ನು ಈ ವರ್ಗಕ್ಕೆ ಸೇರಿಸಬಹುದು. ಇಂಥ ಸುಮಾರು ೪೨ ಗಾದೆಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

೧. ಗಂಡ ಹೆಂಡ್ತಿ ಜಗಳದಾಗ ಕೂಸು ಗಸಿಬಿಸಿಯಾಯ್ತು

೨. ಪಾಲಿಗೆ ಬಂದಿದದ್ದು ಪಂಚಾಮೃತ

೩. ದುಡ್ಡು ಇದ್ದವನೇ ದೊಡ್ಡಪ್ಪ

೪. ಮನಿಮಗ ಉಂಡ್ರೆ ಕೇಡಲ್ಲ, ಮಳಿಬಂದ್ರೆ ಕೇಡಲ್ಲ

೫. ಕಾಸಿದ್ರೆ ಕೈಲಾಸ

೬. ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲಾ

೭. ಮಾತು ಬಲ್ಲವನಿಗೆ ಜಗಳವಿಲ್ಲ, ಊಟಬಲ್ಲವನಿಗೆ ರೋಗವಿಲ್ಲ

೮. ಅನುಮಾನಕ್ಕೆ ಔಷಧವಿಲ್ಲ

೯. ಗಂಡ ಸತ್ತಮೇಲೆ ಹೆಂಡ್ತಿಬುದ್ದಿಬಂತಂತೆ

೧೦. ಕತ್ತಿಗೇನು ಗೊತ್ತು ಕಸ್ತೂರಿ ವಾಸ್ನಿ

೧೧. ತಾಯಿ ಇದ್ರೆ ತವರೆಚ್ಚು, ಕಾಗೆಗೆ ಬಳಗ ಹೆಚ್ಚು

೧೨. ಕೂಳ್ಹೆಚ್ಚಾದ್ರೆ ಕೂಗಾಟ ಹೆಚ್ಚು

೧೩. ಅನುಮಾನಂ ಪೆದ್ದರೋಗ

೧೪. ಗಡಿಗೆ ಬಾಯ್ನ ಮುಚ್ಚಬಹುದು, ಹೆಂಡ್ತಿಬಾಯ್ನ ಮುಚ್ಚಾಕಾಗುತ್ತಾ?

೧೫. ತಾಯಿಯಂಗೆ ಮಗಳು, ನೂಲಿನಂಗೆ ಸೀರೆ

೧೬. ಬಗಿಸಿ ಬಾಳೆ ಹಣ್ಣು ತಿಂದ್ರು ಬಾಯಿ ತುಂಬಾ ಶಂಠ ಬಂದ್ವಂತೆ!

೧೭. ಹಡದಾಳ ಕಷ್ಟ ನೆರೆತಾಳು ಏನು ಬಲ್ಲಳು?

೧೮. ಊಟ ತನ್ನಿಚ್ಛ, ನೋಟ ಪರರಿಚ್ಛೆ

೧೯. ಸಾವಿರ ಕುದ್ರಿ ಸರದಾರ, ಮನೆ ಹೆಂಡ್ತಿಗೆ ಗುಲಾಮ

೨೦. ಹುಚ್ಚಪ್ಪನ ಬಡತನ ಗೆಣಸೇನು ಬಲ್ಲದು?

೨೧. ಊರ್ಯಾಗಳದ್ದು ಮುದ್ದೆ, ಗುಡ್ಯಾಗಳದ್ದು ನಿದ್ದೆ!

೨೨. ಹಿತ್ಲಗಿಡ ಮದ್ದಲ್ಲ

೨೩. ಹೊಟ್ಟೆಗೆ ಹಿಟ್ಟಿಲ್ಲಾಂದ್ರೆ, ಜುಟ್ಟಿಗೆ ಮಲ್ಲಿಗೆ ಹೂವು ಕೇಳಿದ್ರಂತೆ!

೨೪. ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ

೨೫. ಅಳಿಯಾ ಮನೆ ತೊಳಿಯಾ

೨೬. ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ

೨೭. ಹಿರಿಯ ಮಗನಾಗಬೇಡ, ಬಾಗಿಲ ಕದವಾಗಬೇಡ

೨೮. ಸೊಸೆ ಸತ್ತರೆ ಸೋಬಾನ, ಮಗ ಸತ್ತರೆ ಮನೆಹಾಳು

೨೯. ಮಲಗುವುದಕ್ಕೆ ಹೋಗಿ ಮಗಕೆಟ್ಟ, ಬೀಸುವುದಕ್ಕೆ ಹೋಗಿ ಸೊಸೆಕೆಟ್ಟಳು

೩೦. ಅತ್ತೆ ಇಲ್ಲದ ಮನೇಲಿ ಸೊಸೆ ಬಿತ್ರಿ

೩೧. ತುಂಬಿದ ಕೆರೇನೂ, ತುಂಬಿದ ಮನೇನೂ ಒಡೀಬಾರದು.

**೭.೧.೨. ಸಾಮಾಜಿಕ ಗಾದೆಗಳು**

ಸಾಮಾಜಿಕ ವರ್ತನೆ, ನಡತೆ, ವೃತ್ತಿ, ಕಸುಬು, ಕುಲ, ರೀತಿ, ರಿವಾಜು ಇತ್ಯಾದಿಯಾಗಿ ಸಾಮಾಜಿಕ ಘಟನೆ, ಸನ್ನಿವೇಶಗಳ ಹಿನ್ನೆಲೆಯಲ್ಲಿ ಹುಟ್ಟಿಕೊಂಡವುಗಳನ್ನು ಈ ವರ್ಗದಲ್ಲಿ ಸೇರಿಸಬಹುದು. ಇಂಥ ೩೯ ಗಾದೆಗಳನ್ನು ಈ ಕೆಳಗೆ ಕೊಡಲಾಗಿದೆ.

೧. ಗಾಣಿಗರ ಕೂಡ ಜಗಳವಾಡಿದರೆ, ಒಣರೊಟ್ಟಿ ತಿನ್ನಬೇಕಾಗತೈತಿ

೨. ಎಳ್ಳು ಗಾಣಿಗ ಬಲ್ಲ

೩. ಹಾರುವಾಗ ಆಳಾಗಬಾರದು, ಗಾಣಿಗನ ಎತ್ತಾಗಬಾರದು

೪. ಇದ್ದಾಗ ಯಾರು ಬೇಡ, ಇಲ್ಲದಾಗ ಎಲ್ಲರೂ ಬೇಕು

೫. ಇದ್ದ ಮೂವರಲ್ಲಿ ಕದ್ದವರ್‍ಯಾರು

೬. ಆಳಾಗಿ ದುಡಿ ಅರಸನಾಗಿ ಉಣ್ಣು

೭. ಆರಿ ಹೋಗುವ ದೀಪಕ್ಕೆ ಕಾಂತಿ ಹೆಚ್ಚು

೮. ಗಡ್ಡಕ್ಕೆ ಬೆಂಕಿ ಹತ್ತಿದಾಗ ಬಾವಿ ತೋಡಿದರಂತೆ

೯. ಗತಿಯಿಲ್ಲದವನಿಗೆ ಮತಿಯಿಲ್ಲ

೧೦. ಹಣ ಇಲ್ಲದವ ಹೆಣಕ್ಕಿಂತ ಕಡೆ

೧೧. ಗಾಳಿ ಬಂದಾಗ ತೂರಿಕೋ, ರೇಟು ಬಂದಾಗ ಮಾರಿಕೋ

೧೨. ಕೊಟ್ಟೋನು ಕೋಡಂಗಿ, ತಿಂದಾನು ಈರ್‍ಭದ್ರ

೧೩. ಯಾರದೋ ರೊಕ್ಕ, ಎಲ್ಲಮ್ಮನ ಜಾತ್ರೆ

೧೪. ಐಗಳು ಸತ್ರೆ, ಅಮವಾಸ್ಯೆ ನಿಲ್ಲುತ್ತಾ

೧೫. ಆರು ಹಡದಾಕಿ ಮುಂದ, ಮೂರು ಹಡದಾಕಿ ಹೇಳಿದ್ಳು

೧೬. ತುಪ್ಪದಂಗ ಇದ್ರೂ ತುರಕರನ್ನು ನಂಬಬೇಡ

೧೭. ಅಡಿಕೆಗ್ಹೋದ ಮಾನ ಆನೆಕೊಟ್ರೂ ಬಾರದು

೧೮. ಆಳು ನೋಡಿ ಅನ್ನ ಹಾಕು

೧೯. ಆನೆ ತಿಂಬೋನಿಗೆ ಹಪ್ಪಳ ಕೊಟ್ಟಂಗೆ

೨೦. ಊರಿಗೆ ಬಂದಾಕಿ, ನೀರಿಗೆ ಬರಲೇಬೇಕು

೨೧. ಮನೆಗೆ ಮಾರಿ, ಊರಿಗೆ ಉಪಕಾರಿ

೨೨. ಅತಿಯಾಸೆ ಗತಿಗೇಡಿಸಿತು

೨೩. ಕೈ ಕೆಸರಾದರೆ ಬಾಯಿ ಮೊಸರು

೨೪. ಹಾವು ಸಾಯಬಾರ್ದು, ಕೋಲು ಮುರಿಯಬಾರ್ದು ಎಂದ್ರೆ ಹೆಂಗೆ?

೨೫. ನಾಯಿ ಬಾಲ ಡೊಂಕು

೨೬. ಕೋತಿ ತಾನು ಕೆಡೋದಲ್ದೆ ವನವೆಲ್ಲಾ ಕೆಡಸಿತಂತೆ!

೨೭. ಉಪ್ಪಿಗಿಂತ ರುಚಿಯಿಲ್ಲ ತಾಯಿಗಿಂತ ಬಂಧುವಿಲ್ಲ

೨೮. ತಾಮ್ರ್ದುಡ್ಡು, ತಾಯಿ ಮಕ್ಕಳ್ನ ಅಗಲಿಸ್ತು

೨೯. ಯೋಗಿ ಪಡೆದದ್ದು ಯೋಗಿಗೆ, ಜೋಗಿ ಪಡೆದದ್ದು ಜೋಗಿಗೆ

೩೦. ಬೆಕ್ಕಿಗೆ ಚೆಲ್ಲಾಟ, ಇಲಿಗೆ ಪ್ರಾಣ ಸಂಕಟ

೩೧. ಅಳಿಯ ಮನೆ ತೊಳಿಯ

೩೨. ಬೊಗಳೋ ನಾಯಿ ಕಚ್ಚಲ್ಲ ಕಚ್ಚೋ ನಾಯಿ ಬೊಗಳೊಲ್ಲ

೩೩. ಸೇರಿಗೆ ಸವ್ವಾಸೇರು

೩೪. ರಾತ್ರಿಯೆಲ್ಲಾ ರಾಮಾಯಣ ಕೇಳಿ, ಬೆಳಿಗ್ಗೆ ರಾಮ ಸೀತೆಗೆ ಏನಾಗಬೇಕಂದ್ರಂತೆ?

೩೫. ಕಳ್ಳನ ಮನಸ್ಸು ಉಳ್ಳುಳ್ಳುಗ

೩೬. ಗರ್ವದಿಂದ ಸರ್ವನಾಶ

೩೭. ಕತ್ತಿಗೇನು ಗೊತ್ತು ಕಸ್ತೂರಿ ವಾಸನಿ

೩೮. ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು

೩೯. ಹಾರುವನ ತೊತ್ತಾಗಬೇಡ, ಗಾಣಿಗನ ಎತ್ತಾಗಬೇಡ

೪೦. ಗಾಣಗಿತ್ತಿ ಅಯ್ಯೋ ಅಂದರೆ ನೆತ್ತಿ ತಣ್ಣಗಾದೀತೆ?

೪೧. ಗಾಣಿಗನ ಸ್ನೇಹಕ್ಕಿಂತ ಗಂಧದ ಹುಡಿಯವನ ಗುದ್ದಾಟ ಲೇಸು

೪೨. ಗಾಣದೆತ್ತಿಗೆ ಗೆಜ್ಜೆಯಾಕೆ ಗೋಣಿಗೆ ಗವಸಣಿಕೆ ಯಾಕೆ?

### ೭.೧.೩. ನೈತಿಕ ಗಾದೆಗಳು

ಈ ಗಾದೆಗಳು ಸಮಾಜ ಕುಟುಂಬದ ಮೂಲ ವ್ಯಕ್ತಿ ಎಲ್ಲಕ್ಕೂ ನೈತಿಕತೆಯ ತಳಹದಿಯೊಂದು ಇದ್ದೇ ಇರುತ್ತದೆ. ಕೌಟುಂಬಿಕ, ಸಾಮಾಜಿಕ ಹಾಗೂ ವ್ಯಕ್ತಿ ಜೀವನದ ಸ್ವಾಸ್ಥ್ಯ ಹಾಗೂ ನೈತಿಕತೆಯ ಮೌಲ್ಯ

ಅದರ ಅತೀತನದ ವಿಡಂಬನೆ ಇತ್ಯಾದಿಯಾದ ಗಾದೆಗಳನ್ನು ಈ ವರ್ಗದಲ್ಲಿ ಸೇರಿಸಬಹುದು. ಅಂತಹ ೧೮ ಗಾದೆಗಳನ್ನು ಇಲ್ಲಿ ಹೆಸರಿಸಲಾಗಿದೆ.

೧. ಮಾಡ್ದೋರ ಪಾಪ, ಆಡ್ದೋರು ಬಾಯಲ್ಲಿ
೨. ಕಳ್ಳನ್ನ ನಂಬಿದ್ರೂ ಕುಳ್ಳನ್ನ ನಂಬಂಗಿಲ್ಲ
೩. ಬರಬರ್ತಾ ರಾಜನ ಕುದ್ರಿ ಕತ್ತೆ ಆಯ್ತು
೪. ಕುಣಿಲಾರದವಳಿಗೆ ನೆಲ ಡೊಂಕೆ
೫. ಹೇಳೋದು ಆಚಾರ, ಮಾಡೋದು ಅನಾಚಾರ
೬. ದೇಶ ಸುತ್ತು, ಕೋಶ ಓದು
೭. ಹಾಲಿಂದು ಹಾಲಿಗೆ, ನೀರಿಂದು ನೀರಿಗೆ
೮. ಕೊಟ್ಟು ಕುದಿ ಬೇಡ, ಇಟ್ಟು ಹಂಗ್ಸಬೇಡ
೯. ಮೂರು ದಿನದ ಸಂತೆ
೧೦. ಆರಡಿ ಮೂರಡಿಗೆ ಯಾಕೆ ಬಡಿದಾಡುತ್ತೀರಿ
೧೧. ಜಾಣನಿಗೆ ಮಾತಿನ ಪೆಟ್ಟು, ಕೋಣನಿಗೆ ದೊಣ್ಣೆಪೆಟ್ಟು
೧೨. ಉಂಡಮನಿಗೆ, ಜಂತಿ ಎಣಿಸಬೇಡ
೧೩. ಗಂಡನ ಪ್ರೀತಿ ತೀಟಿ ತೀರಾತನಕ
೧೪. ಹರೆಯ ಇದ್ದಾಗ ಹಾದ್ರ ಮಾಡಿ, ಮುದ್ಕಿ ಆಗಿ ಜೋಗ್ತಿ ಆದ್ಲು
೧೫. ಹಣ ಎಂದರೆ, ಹೆಣಬಾಯಿ ಬಿಡುತ್ತೆ
೧೬. ಕರೆದು ಅಳಿಯನಿಗೆ ಮಗಳ ಕೊಟ್ರೆ ಅಳಿಯನಿಗೆ ಮಲರೋಗ
೧೭. ಇಟ್ಟುಕೊಂಡೋಳು ಇರೋತನಕ ಕಟ್ಟಿಕೊಂಡೋಳು ಕಡೆತನಕ
೧೮. ಕಟ್ಟಿದ ಬುತ್ತಿ ಹೇಳಿದ ಬುದ್ದಿ ಕೊನೆತನಕ

### ೭.೧.೪. ಲೈಂಗಿಕ ಗಾದೆಗಳು

ಚತುರ್ವಿದ ಪುರುಷಾಥಗಳಲ್ಲಿ ಕಾಮವು ಒಂದು. ಹೀಗಾಗಿ ಅದಕ್ಕೆ ಸಂಬಂಧಿಸಿದಂತೆ, ಲೈಂಗಿಕ ಗಾದೆಗಳು ಹುಟ್ಟಿಕೊಂಡಿರುವುದನ್ನು ಕಾಣಬಹುದಾಗಿದೆ. ಲೈಂಗಿಕತೆಗೆ ಸಂಬಂಧಿಸಿದ ಗಾದೆಗಳು ಎಲ್ಲಾ ಸಮಾಜಗಳಲ್ಲಿರುವಂತೆ, ಇವರಲ್ಲಿಯೂ ಕಂಡು ಬರುತ್ತವೆ. ಇವು ವೈಯಕ್ತಿಕವಾಗಿರಬಹುದು. ಅಲ್ಲದೆ ಸಾರ್ವತ್ರಿಕವಾಗಿಯೂ ಇರಬಹುದು. ಇಂಥ ಸುಮಾರು ೨೩ ಗಾದೆಗಳನ್ನು ಇಲ್ಲಿ ಕಾಣಬಹುದು.

೧. ಕಾಮಕ್ಕೆ ಕಣ್ಣಿಲ್ಲ, ಸೂಳೆಗೆ ತಾಳಿಯಿಲ್ಲ
೨. ಮರ ಮುಪ್ಪಾದ್ರು, ಹುಳಿ ಮುಪ್ಪೇ?
೩. ಸೂಳೆ ಸಹವಾಸ, ರಾತ್ರಿಗೆ ಉಪವಾಸ

೪. ಮಿಂಡನ ಪ್ರೀತಿ, ಗಂಡ ಬರೋತನಕ

೫. ಹಟ್ಟಾರ್ನ ಬಿಟ್ಟು, ಅಣಿಕಿ ನೋಡಿದ್ರ ಹಿಡಕೊಂಡ್ರು

೬. ಸೂಳೆಗೇನು ಗೊತ್ತು ಪತಿವ್ರತದ ಮಾತು?

೭. ರಾತ್ರಿ ಗಂಡನ ಕಾಟ, ಹಗಲು ಮಿಂಡನ ಕಾಟ

೮. ಮುದಿಯಗೇನು ಗೊತ್ತು, ಸೋಬನದ ಗತ್ತು

೯. ಪುಗಸಟ್ಟೆ ಮಿಂಡಾ, ಹೊಟ್ಟೆ ತುಂಬಾ ಉಂಡಾ

೧೦. ಏ ಬಜಾರಿ ಅಂದ್ರೆ, ನಾ ತಯಾರು ಅಂದ್ಲಂತೆ!

೧೧. ತಿಂದು ಸಾಯಬೇಕು, ಇಲ್ಲ ದೆಂಗಿ ಸಾಯಬೇಕು

೧೨. ಕುಡಿಯೋ ನೀರಿಗೆ, ಹಡೋ ತುಲ್ಲಿಗೆ ಎಂಜಲಿಲ್ಲ

೧೩. ನಿಂಬೆಕಾಯಿ ಮೊಲೆಯವಳಿಗೆ, ಗೊಂಬೆನಾದ್ರುಬೇಕು

೧೪. ಮೇಲೆ ಬಂದು ಬಿದ್ದವಳು, ಹೇಲಿಗೆ ಸಮಾನಳು

೧೫. ಒಳ್ಳೆವಳು ಅಂದ್ರೆ, ವಳ್ಳಾಗ ಉಚ್ಚೆ ಉಯ್ಕಿದ್ಲಂತೆ

೧೬. ಕರಿ ತುಲ್ಲಿಗೆ ಬಿಳಿ ಗೂಟ ಯಾಕೆ

೧೭. ಮಕ ಮಕ ನೋಡಿದ್ರೆ ಮಕ್ಕಳಾಗ್ತಾವೇನು

೧೮. ಮಾಗಿ ಬಿಸಿಲು ಕಾಯಿಸಬೇಡ,

೧೯. ಹರೆಯದ ಹುಡುಗಿನ ಕೆಣಕ ಬೇಡ,

೨೦. ಮೂರು ಬಿಟ್ಟೋರು ಊರಿಗೆ ದೊಡ್ಡೋವ್ರು

೨೧. ಹರೆಯ ಹುಡುಗಿ ಮೊಲೆ ಚೆಂದ,

೨೨. ಮೊಲೆ ಬಂದವಳಿಗೆ ನೆಲ ಕಾಣಲ್ಲ, ಮೀಸೆ ಬಂದವನಿಗೆ ದೇಶ ಕಾಣಲ್ಲ

೨೩. ಅಜ್ಜಿಗೆ ಮೊಮ್ಮಗಳ ಚಿಂತೆಯಾದರೆ, ಮೊಮ್ಮಗಳಿಗೆ ಮಿಂಡ್ರ ಚಿಂತೆ

**೭.೧.೫. ಸಂಕೀರ್ಣ ಗಾದೆಗಳು**

ಈವರೆಗೆ ಕೊಡಮಾಡಿದ ವರ್ಗೀಕರಣಕ್ಕೆ ಒಳಪಡದ ಗಾದೆಗಳನ್ನಿಲ್ಲಿ ಸಂಕೀರ್ಣವೆಂದು ಗುರುತಿಸಿದೆ. ಇವು ಗಾಣಿಗರು ಗ್ರಾಮದಿಂದ ಗ್ರಾಮಕ್ಕೆ, ಊರಿನ ಇತರ ಜನರೊಂದಿಗೆ ಸಂಪರ್ಕ, ಇತರೆ ಬದುಕಿನ ಸಂದರ್ಭಗಳಲ್ಲಿ ಸಂಪರ್ಕಕ್ಕೆ ಬಂದ ವ್ಯಕ್ತಿ ಸಮುದಾಯಗಳಿಂದ ಸ್ವೀಕರಿಸಲಾದವುಗಳಾಗಿರಬಹುದು. ಬಹುಶಃ ಈ ಕಾರಣಕ್ಕಾಗಿಯೇ ಇಂಥ ಗಾದೆಗಳ ಸಂಖ್ಯೆ ಅಧಿಕವಾಗಿದೆ. ಇಂಥ ೪೦ ಗಾದೆಗಳನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

೧. ರೋಣಿ ಮಳೆ ಬಿದ್ರೆ ಓಣಿಯೆಲ್ಲ ಜೋಳ

೨. ಸ್ವಾತಿ ಮಳೆ ಹೇತೇನೆಂದ್ರು ಬಿಡೋಲ್ಲ

೩. ಕಳ್ಳಿಮಾತು ಉಳ್ಳಿ ತಿಂದಂಗೆ

೪. ಆಚಾರ ಹೇಳೋದು, ಬದನೆಕಾಯಿ ತಿನ್ನೋದು

೫. ಕೈಲಿ ಆಗದವನು ಮೈಯಲ್ಲಿ ಪರಚಿಕೊಂಡು

೬. ಮಳೆ ಬಂದ್ರೆಕೇಡಲ್ಲಾ? ಮಕ್ಕಳಾದ್ರ ಕೇಡಲ್ಲಾ

೭. ಕರತಿಂತು ಹೊರೆಹುಲ್ಲು

೮. ಕೂಳು ಹೆಚ್ಚಾದರೆ, ಕೂಗಾಟ ಹೆಚ್ಚು

೯. ಮಕ ನೋಡಿ ಮಣೆ ಹಾಕ್ತಾರ

೧೦. ಸುಡುಗಾಡಿಗೆ ಹೋದ ಹೆಣ, ಸರ್ಕಾರಕ್ಕೋದ ಹಣ ಎರಡೂ ಒಂದೇ

೧೧. ಚಿಂತಿಲ್ಲವನಿಗೆ ತಿಪ್ಪೇಲಿ ನಿದ್ದೆ ಬಂತು

೧೨. ತೋಳ ತೆಗ್ಗಿಗೆ ಬಿದ್ರೆ ಆಳಿಗೊಂದು ಕಲ್ಲು

೧೩. ಕಾಡು ಬಾ ಅನ್ನುತೆ, ಊರು ಹೋಗು ಅನ್ನುತ್ತೆ

೧೪. ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ

೧೫. ಹಾಸಿಗೆ ಇದ್ದಷ್ಟು ಕಾಲು ಚಾಚು

೧೬. ಐನಾರು ಮುಕುಳಾಗ ಮೂರು ಮಂಗ

೧೭. ಹಾವಿಗೆ ಹಾಲೆರೆದರೆ ವಿಷ ಹೋದೀತೆ

೧೮. ಸತ್ಯಕ್ಕೆ ಸಾವಿಲ್ಲ, ಸೂಳಿಗೆ ಸುಖವಿಲ್ಲ

೧೯. ಸಾಲ ಶೂಲಕ್ಕೆ ಸಮಾನ

೨೦. ಇತ್ಲಾಗ ಗಂಡೂ ಅಲ್ಲ ಹೆಣ್ಣೂ ಅಲ್ಲ

೨೧. ಕಾಗೆಗೆ ಅಧಿಕಾರ ಕೊಟ್ರೆ ಕಛೇರಿಯೆಲ್ಲ ಹೊಲಸು

೨೨. ಒಗ್ಗಟ್ಟಿನಲ್ಲಿ ಬಲವಿದೆ

೨೩. ವೇದ ಸುಳ್ಳಾದರು ಗಾದೆ ಸುಳ್ಳಾಗದು

೨೪. ಸಂಕಟ ಬಂದಾಗ ವೆಂಕಟರಮಣ

೨೫. ಆನೆ ಭಾರ ಆನೆಗೆ, ಇರುವೆ ಭಾರ ಇರುವೆಗೆ

೨೬. ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲ

೨೭. ಕೊಡೋರಿಗೆ ಕೊಟ್ರೆ ನನಗೇನು ಉಳೀತು?

೨೮. ಹುಚ್ಚನ ಮದ್ವೇಲಿ ಉಂಡೋನೆ ಜಾಣ

೨೯. ದಿನಾ ಸಾಯೋರಿಗೆ ಆಳೋರ್‍ಯಾರು?

೩೦. ನಾಲಿಗೆ ಒಳ್ಳೆದಿದ್ರೆ ನಾಡೆಲ್ಲ ನೆಂಟ್ರು

೩೧. ಹದ ನೋಡಿ ಹರಗ ಬೇಕು, ಬೆದಿ ನೋಡಿ ಬಿತ್ತಬೇಕು

೩೨. ಎಲ್ರ ರಕ್ತ ಕೆಂಪಗೆ

೩೩. ತುಂಬಿದ ಕೊಡ ತುಳಕಲ್ಲ

೩೪. ಅತಿಯಾದ್ರೆ ಅಮೃತವೂ ವಿಷ

೩೫. ಕೋತಿಗೇನು ಗೊತ್ತು ಮಾಣಿಕ್ಯದ ಬೆಲೆ

೩೬. ಹಣೆ ಬರಹಕ್ಕೆ ಯರು ಹೊಣೆ

೩೭. ನಾಯಿಗೆ ಹೇಳಿದ್ರೆ ನಾಯಿ ಬಾಲಕ್ಕೆ ಹೇಳಿತಂತೆ

೩೮. ದೂರದ ಗುಡ್ಡ ಕಣ್ಣಿಗೆ ನುಣ್ಣಗೆ

೩೯. ಇದ್ದದ್ದು ಇದ್ದಂಗ ಹೇಳಿದ್ರೆ ಸಿದ್ದಪ್ಪಗ ಸಿಡಿಲು ಬಡಿತಂತೆ

೪೦. ಅಕ್ಕನ ಬಂಗಾರವಾಗಲಿ ಅಕ್ಕಸಾಲಿಗ ಕದಿಯೋದು ಬಿಡಲಾರ

## ೭.೨. ಗಾಣಿಗರ ಒಗಟುಗಳು

ಒಗಟು ಬುದ್ಧಿವಂತಿಕೆಗೆ ಒಡ್ಡುವ ಸವಾಲುಗಳು. ಒಂದು ವಸ್ತುವನ್ನು ಮತ್ತೊಂದರ ಮೂಲಕ ತುಂಬಾ ಚಮತ್ಕಾರವಾಗಿ ವರ್ಣಿಸುವ ಕ್ರಿಯೆ ಇಲ್ಲಿ ನಡೆದಿರುತ್ತದೆ. ಒಡಪು, ಒಂಟು, ಒಡಗತೆ, ಒಡಚುವಕತೆ ಎಂದೆಲ್ಲಾ ಬೇರೆ ಬೇರೆ ಹೆಸರುಗಳಲ್ಲಿ ಕರೆಯಲ್ಪಟ್ಟಿವೆ.[೪] ಕಿಟೆಲ್ ಕೋಶದಲ್ಲಿ a riddle, an enigma ಎಂಬರ್ಥಗಳಿವೆ. ಬಹುಶಃ ಒರ್+ಕಟ್ಟು(ಬಂಧ)>ಒರ್ಗಟ್ಟು>ಒಗ್ಗಟ್ಟು ಸುಲಭೀಕರಣಗೊಂಡು ಒಗಟು ಆಗಿರಬಹುದು. ಇದು ಅನ್ವರ್ಥಕವೂ ಆಗಿದೆ. ಅನೇಕ ಮಾತಿನ ಎಲೆಗಳನ್ನು ಜೋಡಿಸಿ ಒಂದು ಕಟ್ಟನ್ನು (ಬಂಧವನ್ನು) ಹಾಕಲಾಗಿರುತ್ತದೆ. ಆ ಒಂದೇ ಒಂದು ಕಟ್ಟನ್ನು ಬಿಚ್ಚಿದರೆ, ಎಲ್ಲ ಸಾಲುಗಳ ಮರ್ಮ ಪಕ್ಕನೆ ಬಯಲಾಗಿ ಬಿಡುತ್ತದೆ. ಒಂದು ವಸ್ತುವಿನ ಚಿತ್ರ ಕಣ್ಮುಂದೆ ಕಟ್ಟುತ್ತಿರುವಂತೆಯೇ ಅದರ ಹಿಂದೆ ಬೇರೊಂದು ವಸ್ತುವಿನ ಪ್ರತೀತಿಯಾಗಿ ಬೆರಗನ್ನುಂಟು ಮಾಡುತ್ತದೆ.

ಒಗಟುಗಳು ಜಗತ್ತಿನಲ್ಲಿ ಎಲ್ಲ ಜನಾಂಗಗಳಲ್ಲಿಯೂ ಇವೆ. ಹಾಗೆಯೇ ಗಾಣಿಗರಲ್ಲಿಯೂ ಇವೆ. ಗಾಣಿಗರು ಮದುವೆಗಳ ವೇಳೆಯಲ್ಲಿ, ಹಬ್ಬಹರಿದಿನಗಳಲ್ಲಿ, ರಾತ್ರಿ ಹೊತ್ತು ಬೆಳದಿಂಗಳ ಬೆಳಕಿನಲ್ಲಿ ಊಟವಾದ ನಂತರ ಒಗಟುಗಳ ಮಹಾಪೂರವನ್ನು ಹರಿಸುತ್ತಾರೆ. ಒಗಟಿಗೆ ಪ್ರತಿ ಒಗಟು ಹಾಕಿ ಅಟ್ಟಹಾಸದಿಂದ ಬೀಗುತ್ತಾರೆ. ತಮ್ಮಲ್ಲಿನ ಬುದ್ಧಿಚಾತುರ್ಯವನ್ನು ಪ್ರದರ್ಶಿಸಿ ಇತರರನ್ನು ಅದರಲ್ಲಿಯೂ ತಮ್ಮ ಆಶ್ರಯದಾತರೂ, ಕೇಳುಗರೂ ಆದ ಬಂದು ಬಳಗದವರನ್ನು "ಇಂಥ ಸಣ್ಣ ಮತ್ತು ಸಾಮಾನ್ಯ ಒಗಟನ್ನು ಬಿಡಿಸಲು, ನಿಮ್ಮ ಕೈಲಿ ಆಗುವುದಿಲ್ಲವೇ?" ಎಂದು ಕೆಣಕುತ್ತಾರೆ.

ಒಗಟುಗಳು ಮಾನವನಲ್ಲಿ ಕುತೂಹಲ ಹೆಚ್ಚಿಸುವುದರ ಜೊತೆಗೆ ಲೋಕಾಶಕ್ತಿ, ಲೋಕಜ್ಞಾನವನ್ನು ಮಾಡಿಕೊಡುತ್ತವೆ. ಗಾಣಿಗರು ತಮ್ಮ ಮೂಲ ವೃತ್ತಿಯಾದ ಗಾಣದಿಂದ ಎಣ್ಣೆ ತೆಗೆಯುವಾಗ, ಒಕ್ಕಲು ಮಾಡುವಾಗ, ತಮ್ಮ ಜನರಿಗೆ ಬೇಸರವಾಗದಿರಲೆಂದೂ, ನಿದ್ರೆಗೆ ಅವಕಾಶವಾಗದಿರಲೆಂದೂ ತಮ್ಮ ಬದುಕು ಬಾಳ್ವೆ ಸಾಗಲೆಂಬ ಉದ್ದೇಸದಿಂದಲೂ ಮಧ್ಯ ಮಧ್ಯ ಒಗಟುಗಳನ್ನು ಹೇಳಿ ಕೇಳುಗರನ್ನು ರಂಜಿಸುತ್ತಾರೆ.

ಇಲ್ಲಿ ಸಂಗ್ರಹಿಸಲಾದ ಒಗಟುಗಳಲ್ಲಿ ಕೆಲವು ಗಾಣಿಗ ಸಮುದಾಯದ ಬದುಕು ಪರಿಸರವನ್ನು ಬಿಂಬಿಸುತ್ತವೆ. ಹಾಗೆಯೇ ಇತರ ಜನರೊಂದಿಗೆ ಕಂಡುಂಡ ಹಲವಾರು ಅನುಭವಗಳೂ ಒಗಟಿಗೆ ಜನ್ಮ ನೀಡುತ್ತವೆ. ಇದರಲ್ಲಿ ಗಾಣಿಗರ ಸ್ವಂತಿಕೆ ಕಾಣಬಹುದು. ಇನ್ನು ಕೆಲವು ಅಲ್ಲಲ್ಲಿ ಕೇಳಿದ್ದು, ಹೇಳಿದ್ದು ಇದ್ದಂತಿವೆ. ಅಂಥವನ್ನು ಕೂಡ ತಮ್ಮ ಬದುಕಿಗೆ ತಕ್ಕಂತೆ ಅಳವಡಿಸಿಕೊಂಡಿರುವುದನ್ನು ಕಾಣಬಹುದಾಗಿದೆ. ಅದೇನಿದ್ದರೂ ಇವರ ಒಗಟುಗಳು ಹೊಟ್ಟೆ ತುಂಬಿದಾಗ ಅನೇಕರು ಒಂದೆಡೆ ಸೇರಿದಾಗ ಪ್ರಕಟಗೊಳ್ಳುತ್ತವೆ.

ಗಾಣಿಗರು ಹೇಳುವ ಬಹಳಷ್ಟು ಒಗಟುಗಳು ವ್ಯಕ್ತಿಯ ಬದುಕು, ಪ್ರಕೃತಿ ದೈನಂದಿನ ಜೀವನಕ್ಕೆ ಸಂಬಂಧಿಸಿದವುಗಳಾಗಿವೆ. ಅಲ್ಪದರಲ್ಲಿ ಅಗಾಧವಾದುದನ್ನು ಹೇಳುವ ಈ ಒಗಟುಗಳು ಒಮ್ಮೊಮ್ಮೆ ಎಂಥ ಮಾತುಗಾರನನ್ನು ಕ್ಷಣ ಹೊತ್ತು ಮೌನವಾಗಿಸುತ್ತದೆ. ಅನಂತರ, ಆ ಒಗಟು ಬಿಡಿಸಿ ಹೇಳಿದಾಗ "ಇಷ್ಟೇನಾ?" ಎಂಬ ಅಭಿಪ್ರಾಯ ಮೂಡಿದರೂ ಒಗಟಿನ ಸಾಹಿತ್ಯ ಸೊಬಗುಗಳಿಗೆ ಪಂಡಿತರು ಪಾಮರರೂ ವಿಸ್ಮಯರಾಗಿ ಬಿಡುತ್ತಾರೆ. ಅಂದರೆ ಒಗಟುಗಳನ್ನು ಕಾವ್ಯಮಯವಾಗಿ, ಕುತೂಹಲ ಹುಟ್ಟುವಂತೆ ಮಾಡಿ, ಕೇಳುಗರನ್ನು ವಿಸ್ಮಯದಲ್ಲಿ ಮುಳುಗಿಸಿ ಬಿಡುವ ಕಲೆಗಾರಿಕೆ ಗಾಣಿಗರಲ್ಲಿ ಮೈಗೂಡಿಸಿಕೊಂಡು ಬಂದಂತಿದೆ. ಕರಿಮಣಿ ಸರದಲ್ಲಿ ಅಲ್ಲಲ್ಲಿ ಮುತ್ತು ಪೋಣಿಸಿದಂತೆ ಬದುಕಿನ ಮಧ್ಯದಲ್ಲಿ ಒಗಟು ಹೇಳುತ್ತಾರೆ. ಒಗಟು ಹಾಕಿ ನೆರೆದು ಜನರಿಗೆ ನೀರು ಕುಡಿಯುವುದು ಇಲ್ಲವೆ ಮೂತ್ರ ವಿಸರ್ಜನೆಗಾಗಿ ಹೋಗಿ ಬರುವುದು ಇತ್ಯಾದಿಯಾಗಿ ಬಳಸಿಕೊಳ್ಳುವ ಚತುರತೆಯನ್ನು ತೋರುತ್ತಾರೆ.

ಗಾಣಿಗರು ಒಗಟು ಹಾಕುವುದನ್ನು ನೋಡಿದರೆ, ಕುರಿತೋದದಿದ್ದರೂ ಅವರ ಪರಿಣಿತ ಮತಿಗೆ ಬೆರಗಾಗುತ್ತೇವೆ. ಇಲ್ಲಿ ಗಾಣಿಗರಿಂದ ಸಂಗ್ರಹಿಸಲಾದ ಒಗಟುಗಳನ್ನು ಕೊಡಲಾಗಿದೆ.

೧. ಕುಂಬಾರ, ತಿಂಜಾರ, ಗಾಣಿಗ ಮೂವರು ಕೂಡಿ ಉಣ್ತಾರ - ಹಣತೆ

೨. ಎರಡು ಮನೆಗೆ ಒಂದೇ ಕಂಬ

೩. ಕೈಲಿ ಬಿತ್ತೋದು; ಬಾಯಲಿ ಆರಿಸೋದು - ಬರಹ-ಓದು

೪. ಮಳೆಯಿಲ್ಲಿ ಬೆಳೆಯಿಲ್ಲ ಹೊಲವೆಲ್ಲ ಹಸಿರು; ಎಲೆಯಿಲ್ಲ ಸುಣ್ಣವಿಲ್ಲ ಬಾಯೆಲ್ಲ ಕೆಂಪು - ಗಿಳಿ

೫. ಕೈಯುಂಟು ಕೆಲಸ ಮಾಡುವುದಿಲ್ಲ; ಕಾಲುಂಟು ನಡೆಯುವುದಿಲ್ಲ; ಬಾಯುಂಟು ಮಾತನಾಡುವುದಿಲ್ಲ; ಇದನ್ನು ಹೇಳಿದರೆ ಬಾಯಿಗೆ ಉಂಡೆ ಬೆಲ್ಲ - ಗೊಂಬೆ

೬. ಮೂಗಲ್ಲಿ ಕಪ್ಪುಂಟು ಕಾಗೆಯಲ್ಲ; ಜೋಡು ನಾಲಗೆಯುಂಟು, ಸರ್ಪವಲ್ಲ; ಐದು ಮಂದಿ ಗಂಡಂದಿರುಂಟು ದ್ರೌಪದಿಯಲ್ಲ - ಲೇಖನಿ

೭. ಕಲ್ಲರಳಿ ಹೂವಾಗಿ; ಎಲ್ಲರಿಗೂ ಬೇಕಾಗಿ; ಮಲ್ಲಿಕಾರ್ಜುನ ಶಿಕರಕ್ಕೆ ಬೆಳಕಾಗಿ - ಸುಣ್ಣ

೮. ಹತ್ತು ಎಂದರೆ ಹತ್ತುವುದಿಲ್ಲ; ಇಪ್ಪತ್ತು ಎಂದರೆ ಹತ್ತುತ್ತೆ - ತುಟಿಗಳು

೯. ಹೋಗೋದು ಒಂದೇ ದಾರಿ; ತಂಗೋದೊಂದು ದಾರಿ; ಬರೋದೊಂದು ದಾರಿ - ಊಟ

೧೦. ಒಂದು ಕಂಬಕ್ಕೆ ನಾಲ್ಕು ಕಿವಿ - ಲವಂಗ

೧೧. ಎರಡು ಎತ್ತು ಎಡಕ್ಕೆ ಬಂದಿದ್ದು ಬಲಕ್ಕೆ ಬರಲ್ಲ; ಬಲಕ್ಕೆ ಬಂದಿದದ್ದು ಎಡಕ್ಕೆ ಬರಲ್ಲ - ಚಪ್ಪಲಿಗಳು

೧೨. ಅಕ್ಕ ಪಕ್ಕದ ಮನೆಯವರು ಚಕ್ಕನೆ ಬರುವರು; ಪಕ್ಕನೆ ಬೀಳುವರು; ಥಕ್ಕಾಂತ ಹೇಳಿರಿ - ಮೂಗು, ಸಿಂಬಳ

೧೩. ಅಟ್ಟದ ಮೇಲೆ ಪುಟ್ಟಲಕ್ಷ್ಮಿ - ಕುಂಕುಮ

೧೪. ಚೋಟುದ್ದ ಹುಡುಗನಿಗೆ, ಚೀಟಿ ಕುಲಾವಿ - ಬೆಂಕಿ ಕಡ್ಡಿ

೧೫. ಅವನಿಗೆ ಎರಡು ಕಣ್ಣು; ನನಗೆ ಮೂರು ಕಣ್ಣು - ತೆಂಗಿನಕಾಯಿ

೧೬. ಚೋಟುದ್ದ ಹುಡುಗಿಗೆ, ಮಾರುದ್ದ ಜಡೆ - ಸೂಜಿ ಮತ್ತು ದಾರ

೧೭. ಚಿಕ್ಕ ಮನೆ ತುಂಬ ಚಿಕ್ಕಿ ತುಂಬವೆ - ಬಾಯಿ ಮತ್ತು ಹಲ್ಲು

೧೮. ಅಕ್ಕ ತಂಗಿಯರಿಬ್ಬರು ಅಳ್ತಾರೆ; ಒಬ್ಬರನ್ನೊಬ್ಬರು ನೋಡ್ಕಳಾಕೆ ಆಗಲ್ಲ - ಕಣ್ಣುಗಳು

## ೭.೩. ಗಾಣಿಗರ ಒಡಪುಗಳು

ಜನಪದ ಸಾಹಿತ್ಯ ಪ್ರಕಾರಗಳಲ್ಲಿ 'ಒಡಪು' ಒಂದು. ಒಡಪನ್ನು ಕೆಲವೆಡೆ ತೊಡಗು, ಬೆಡಗು ಒಗಟು, ಒಡಪು ಹಾಗೂ ಅರ್ಥ ಹಾಕುವುದು ಎನ್ನುತ್ತಾರೆ. ಒಡಪು ಎಂದರೆ ಒಂದರ್ಥದಲ್ಲಿ ಗಂಡನ ಹೆಸರು ಹೇಳುವುದು. ಒಮ್ಮೊಮ್ಮೆ ಗಂಡನ ಹೆಸರಿನೊಂದಿಗೆ, ಅತ್ತೆ ಮಾವನನ್ನು ಅಷ್ಟೇ ಏಕೆ ನಾದಿನಿಯರ ಹೆಸರುಗಳನ್ನು ಸೇರಿಸಿ ಹೇಳುವ ಚಮತ್ಕಾರವನ್ನು ನಾವು ಕಾಣುತ್ತೇವೆ. ನೇರವಾಗಿ ಗಂಡನ ಹೆಸರನ್ನು ಹೇಳದೆ, ಹೇಳುವಾಗ ಸ್ವಲ್ಪ ಭಿನ್ನಾಣವಾಗಿ, ವೈಯಾರವಾಗಿ, ವೈಭವವಾಗಿ, ಸುತ್ತಿ ಬಳಸಿ, ರಂಜಿಸಿ ವಿನೋದವಾಗಿ, ಅದ್ಭುತವಾಗಿ ಹೇಳುವುದಕ್ಕೆ ಒಡಪು ಎಂದು ಹೆಸರು. ಇವು ಹೆಣ್ಣುಮಕ್ಕಳ ಆಸಕ್ತಿಯ ಸಾಹಿತ್ಯ, ಸೃಷ್ಟಿ ಕೂಡಾ. ಏಕೆಂದರೆ ನೆರೆದವರ ಮುಂದೆ, ತನ್ನ ಗಂಡನ ಸ್ವಭಾವ, ಇಲ್ಲವೆ ಗಂಡನ ಬಗೆಗಿನ ಮೆಚ್ಚಿಗೆ ಸೂಚಿಸುವ ಅಂದರೆ ತನ್ನ ಗಂಡನ ಕುರಿತು ತನ್ನಲ್ಲಿ ಹುದುಗಿಕೊಂಡ ಭಾವನೆಗಳಿಗೆ ತನ್ನದೇ ಆದ ಅಭಿವ್ಯಕ್ತಿಕೊಡಲು ಬಳಸುವ ಮಾತು ಎಂದೇ ಅರ್ಥ. ಇಂಥ ಮಾತುಗಳಲ್ಲಿ ಪ್ರಾಸದ ಚೆಲುವು, ಮಾತಿನ ಚಮತ್ಕಾರ ಅಥವಾ ಧ್ವನಿ ಅಡಕವಾಗಿರುತ್ತದೆ.

ವಿಶೇಷವಾಗಿ ಒಡಪುಗಳು ಕಾಣಿಸಿಕೊಳ್ಳುವುದು ಮಂಗಳ ಕಾರ್ಯಗಳಲ್ಲಿ ಅದೂ ವಿಶೇಷವಾಗಿ ಮದುವೆ ಋತುಮತಿಯಾದಾಗ, ಸೀಮಂತ, ಪ್ರಸ್ಥ ಅಲ್ಲದೆ ಆರತಿ ಎತ್ತುವ ಯಾವುದೇ ಮಂಗಲ ಪ್ರಸಂಗಗಳಲ್ಲಿ ಅದೂ ಆರತಿ ಮಾಡಬೇಕಾದಾಗ, ಗಂಡನ ಹೆಸರು ಹೇಳುವ, ಕೇಳುವ ಪ್ರಸಂಗಗಳಲ್ಲಿ ಒಡಪಿಟ್ಟು ಹೇಳುವ ಸಂದರ್ಭ ಕಂಡುಬರುವುದು.

"ಒಡಪು ಎಂದರೆ ಒಡವೆ ಇಲ್ಲವೆ ವಿಶೇಷಣ ಎಂದು ಅರ್ಥೈಸಬಹುದು. ಗಂಡನ ಸೌಂದರ್ಯ, ಗುಣ, ಬಲ, ಸ್ವಭಾವ ಮುಂತಾದವುಗಳ ಹೆಚ್ಚಳವನ್ನು ಕುರಿತು ವರ್ಣನೆಯೇ ಒಡಪೆನಿಸಿಕೊಳ್ಳುವುದು, ನಿರ್ದಿಷ್ಟ ನಿಷ್ಪತ್ತಿ ಹೇಳುವುದು ಕಠಿಣವಾದರೂ ಪೊಡರ್ಪು ಹೋಗಿ ಒಡಪು ಆಗಿರಬೇಕು. ಒಡಪು ಅನ್ಯ ಭಾಷೆಯಿಂದ ಸ್ವೀಕೃತವಾದ ಪದವಲ್ಲ."

"ಪೊಡರ್ ಮೂಲ ಶಬ್ದಕ್ಕೆ 'ಪು' ಪ್ರತ್ಯಯ ಸೇರಿ 'ಪೊಡರ್ಪು' ಆಗಿದೆ. ಪೊಡರ್ಪು ಎನ್ನುವುದಕ್ಕೆ Glitter, Shine, Lustre, brightness, Glary, Power ಎನ್ನುವ ಅರ್ಥಗಳು ಕಿಟೆಲ್‌ರ ಕೋಶದಲ್ಲಿದೆ

(ಪುಟ ೧೯೦೧). ಪೊಡರ್ಪು>ಪೊಡಪು>ಪೊಡಪು>ಒಡಪು ಎಂದಾಗಿರಬೇಕು. ಸೌಲಭ್ಯಾಕಾಂಕ್ಷೆಯಿಂದಾಗಿ ಒಡಪು ಶಬ್ದ, ಒಳ್ಳು>ಒಪ್ಪು ಎಂದಾಗಿರಬೇಕು. ಅಂದ ಚೆಂದದ ಈ ಒಡಪುಗಳಿಗೆ ಒಡ್ಡಾ ಇಟ್ಟು ಹೇಳು, ಅರ್ಥಾ ಇಟ್ಟು ಹೇಳು ಎಂದು ಕರೆಯುವ ಸಂಪ್ರದಾಯವಿದೆ" ಎನ್ನಲಾಗಿದೆ.

ಇಂಥ ಸಂಪ್ರದಾಯ ಅದರೊಟ್ಟಿಗೆ ಉಳಿದು ಒಡಪು ಸಾಹಿತ್ಯವು ಗಾಣಿಗರಲ್ಲಿಯೂ ಕಂಡುಬರುತ್ತದೆ. ಒಡಪುಗಳು ಏನಿದ್ದರೂ ಮೌಖಿಕ ಸಾಹಿತ್ಯವೇ ಪ್ರಚಲಿತ ಇದ್ದ ಒಡಪುಗಳಿವೆ ತಮ್ಮ ತಮ್ಮ ಗಂಡನ ಹೆಸರು ಸೇರಿಸಿಕೊಳ್ಳುತ್ತಾ ಬಾಯಿಂದ ಬಾಯಿಗೆ ಹರಿಯುತ್ತವೆ. ಆಗ ಸ್ವಲ್ಪ ಸ್ವಲ್ಪ ವ್ಯತ್ಯಾಸಗೊಳ್ಳುತ್ತಲೂ ಇರುತ್ತದೆ.

ವಿಶೇಷವಾಗಿ ಹೆಣ್ಣುಮಕ್ಕಳು, ಗಂಡಸರ ಮೋಜಿಗೆ ಕ್ವಚಿತ್ತಾಗಿ, ಒಡಪುಗಳನ್ನು ಹೇಳುತ್ತಾರೆ. ಹಾಗೆ ಗಾಣಿಗರಲ್ಲಿಯ ಹೆಂಗಸರು, ಗಂಡಸರು ಕೂಡ ಒಡಪುಗಳನ್ನು ಹೇಳುವುದುಂಟು. ಸಣ್ಣ ಸಣ್ಣ ಪದ್ಯಗಳಂತಿರುವ ಒಡಪುಗಳಲ್ಲಿ ಪ್ರಾಸ ಅನುಪ್ರಾಸಗಳ, ಲಯ, ಆಪ್ಯಾಯಮಾನವಾದ ಕೆಲವೊಮ್ಮೆ ವಿಡಂಬನೆಯೂ ಆಗಬಹುದಾದ ಉಪಮಾನಗಳು ಒಂದಕ್ಕೊಂದು ಕೊಂಡಿಯಂತೆ ಹೆಣೆದುಕೊಂಡು ಪಂಕ್ತಿಗಳು ಮುಂತಾಗಿ ಸಾಹಿತ್ಯದ ಅಂಶಗಳನ್ನು ಒಳಗೊಂಡಿರುತ್ತದೆ. ಒಡಪುಗಳ ವಸ್ತು ಕೂಡ ವೈವಿಧ್ಯಮಯವಾದುದು. ಪ್ರೀತಿ, ಹಾಸ್ಯ, ಸಾಹಸ, ವ್ಯಂಗ್ಯ, ಚಮತ್ಕಾರ, ಹೆಗ್ಗಳಿಕೆ, ಅನುರಾಗ, ದೊಡ್ಡಸ್ತಿಕೆ, ಬಿಗುಮಾನ ಒಟ್ಟಿನಲ್ಲಿ ಅವರ ಇಡೀ ಬದುಕಿಗೆ ವಿಶೇಷವಾಗಿ ದಾಂಪತ್ಯ ಜೀವನಕ್ಕೆ ಹಿಡಿದ ಕೈಗನ್ನಡಿಯಾಗಿರುತ್ತವೆ.

ಇಲ್ಲಿ ಗಾಣಿಗರಿಂದ ಸಂಗ್ರಹಿಸಲಾದ ಒಡಪುಗಳನ್ನು ಕೊಡಲಾಗಿದೆ:

೧. ಹೇಳಾಕ ಹೆಸರ ಚೆಂದ
ಕೇಳಾಕ ಕತೆ ಚೆಂದ
ರಾಮಗ ಸೀತೆ ಚೆಂದ
ನಮ್ಮ ಹಿರ್‍ಯಾಗ ನಾನಃ ಚೆಂದ...

೨. ಇಳಕಲ್ಲದಡಿ ಸೀರಿ
ಕಿಮ್ಮತ ಬಲೆ ಭಾರಿ
ಅವ ತರಲಿಲ್ಲ ನಾ ಉಡಲಿಲ್ಲ....

೩. ಹರಕ ಜಂತಿಗಿ, ಮುರಕ ನಗಾ
ಹರಗಾಕ ಹೋಗ ಅಂದರ
ಮೂರಮನಿ ತಿರಗಾಕ ಹೊಕ್ಕಾನ...

೪. ಹರಕ ದೋತರ, ಹೊಲಸ ಅಂಗಿ
ಹರದಾರಿಗೊಂದ ಕಾಲಿಟಕೋತ
ಹರಗಾಕ ಹೊಕ್ಕಾನ...

೫. ಕಂಚಿನ ಬಟ್ಲ
ಕಮಲದ ಹೂವು
ಮಂಚದ ಮೇಲೆ
ಕುಳಿತು ಮೊಮ್ಮಕ್ಕಳಾಡಿಸುತ್ತಾರೆ...

೬. ಕಟಗ ರೊಟ್ಟಿ
ಖಾರದ ಚಟ್ನಿ
ಕಟಗೊಂಡು ಹೋಗಂದ್ರ
ಸೆಟಗೊಂಡು ಹೋಗ್ತಾನ...

೭. ಬೆಳದಿಂಗಳ ಬೆಳಕು
ಕಲ್ಲುಸಕ್ಕರೆ ಅಲುಕು
ನಕ್ಷತ್ರ ಬೆಳಕಲಿ
ಅಕ್ಷರ ಓದುತ್ತಾರೆ...

೮. ಹಳಸಿದ್ ಮುದ್ದೆ
ಉಳ್ಳುಗ ತಿಂದು
ಉಳ್ಳಾಡ್ತಾನೆ....

೯. ಬೆಳ್ಳಿ ಕೂರಿಗೆ
ಬಂಗಾರದ ತೆಳುವು
ಎರೆಗೆ ಬಿತ್ತಿ ದೊರೆಯಂಗ
ಬರ್ತಾನ...

೧೦. ಪಟ ಪಟಾಂಗಿ
ಪಾವನ ಗೆಜ್ಜೆ
ಪಾತ್ರದವಳ ಕರ್ಕೊಂಡು
ಜಾತ್ರೆ ಹೋಗ್ತಾನೆ...

೧೧. ಕತ್ತೆ ಅಂಥ ಬೈತಾನ
ಮತ್ತೆ ಮುಂದಕ ಕರಿತಾನ
ಸುತ್ತ ಮುತ್ತ ನೋಡತಾನ
ಮುತ್ತು ಕೊಟ್ಟು ನಗುತಾನ...[೬]

೧೨. ಬಳ್ಳಾರಿ ಎಂಬುದು ಬಡಿವಾರ
ಅಲ್ಲಿ ಮುತ್ತಿನ ಬಜಾರ
ಬಾಗಿಲಾಗೆ ನಿಂತಾನೆ ಬಾಳೆ ಗೊನೆ ಹಿಡಿದಾನೆ
ಅಂಗಡಿಲಿಕುಂತಾನ ಅಡಿಕೆಗೊನೆ ಹಿಡಿದಾನೆ
ಒಂಟಿ ಮೇಲೆ ಕುಂತಾನ
ಗಂಟೆ ಸರ ಹಾಕೇನೆ
ಆನೆ ಮೇಲೆ ಕುಂತಾನೆ ಅಂಬಾರಿ ಹಾಕ್ತೇನೆ
ಬಲವಂತರ ಮಗಳು ರತ್ನಮ್ಮ ಬರ್‍ತಾಳೆಂದು
ಹಾದಿ ಬಿಟ್ಟು ಅರ್ಧಾರಿ ಹೋಗ್ತಾನೆ...

೧೩. ಗಣಪತಿಯನ್ನು ಪೂಜಿಸುವುದು ವಿಘ್ನ ನಿವಾರಣೆಗಾಗಿ
...ರನ್ನು ಪೂಜಿಸುವೆನು ಮಾಂಗಲ್ಯ ರಕ್ಷಣೆಗಾಗಿ

೧೪. ಪರಮೇಶ್ವರನ ಹೆಂಡತಿ ಪಾರ್ವತಿ
.....ರ ಹೆಸರು ಹೇಳುವನು ನಾ ಅವರ ಸತಿ

೧೫. ನಾರಾಯಣನನ್ನು ಪೂಜಿಸುವುದು ಮುಕ್ತಿಗಾಗಿ
ಲಕ್ಷ್ಮಿಯನ್ನು ಪೂಜಿಸುವುದು ಭಾಗ್ಯಕ್ಕಾಗಿ
ನಾನು ...ರನ್ನು ಪೂಜಿಸುವುದು ಚಿರಮಾಂಗಲ್ಯಕ್ಕಾಗಿ

೧೬. ಪಾರ್ವತಿ ಜನಿಸಿದ್ದು ಶಿವನ ಸಲುವಾಗಿ
ನಾನು ಜನಿಸಿದ್ದು ... ರಸಲುವಾಗಿ

೧೭. ಕೈಯಾಗಿಲ್ಲ ಕಾಸ
ಮನ್ಯಾಗ ಹಚ್ಚರ ತ್ರಾಸ
ನನ್ನ ಬಿಟ್ಟು ...ಇರೊದಿಲ್ಲ ತಾಸು

೧೮. ಆಕಳು ಹುಟ್ಟಿತು ಆಕಾಶದಲ್ಲಿ
ಕರು ಹುಟ್ಟಿತು ಭೂಲೋಕದಲ್ಲಿ
...ರೊಡನೆ ಲಗ್ನವಾಯಿತು ಬಾಲ್ಯದಲ್ಲಿ

೧೯. ಗುರು ಕಟ್ಟಿದ್ದು ಬ್ರಹ್ಮಗಂಟು
ಪತಿದೇವರು ಕಟ್ಟಿದ್ದು ಮಂಗಳಸೂತ್ರ
ಮಾಯದಿಂದ ಮಾಲಿ ಹಾಕಿ ಮಳ್ಳ ಮಾಡ್ಯಾರ....

೨೦. ತಂದರ ಹಿಗ್ಗತಾಳ

ತರದಿದ್ರ ಕುಗ್ಗತಾಳ

ಬಂದ ಮಂದಿ ಮುಂದ ಭಾಳ ಅಗ್ಗ ಮಾಡತಾಳ...

೨೧. ಸೌಖ್ಯ ಕೊಡುವುದು ಶ್ರೀಪಾದ

ಶುದ್ಧಗೊಳಿಸುವುದು ಗುರುಪಾದ

ನಾನು ತೊಳೆಯುವದು ...ರ ಪಾದ್

**೭.೪. ಗಾಣಿಗರ ಶಕುನಗಳು**

ಮಾನವ ದೈನಂದಿನ ಬದುಕಿಗೆ ನಂಬಿಕೆಯೊಂದು ಸಂಜೀವಿನಿ, ನಂಬಿಕೆ ಎಂಬುದು ಒಂದರ್ಥದಲ್ಲಿ ವಿಶ್ವಾಸ ಉಳಿದ ಜನಾಂಗ, ಜನ ಸಮುದಾಯದವರಂತೆ, ಗಾಣಿಗರು ಕೂಡ ನಂಬಿಕೆಯ ಮೇಲೆ ಜೀವನ ನಡೆಸುತ್ತಾರೆ.

ಬಹುಶಃ ಮನುಷ್ಯನಷ್ಟೇ ಹಳೆಯದಾಗಿರಬಹುದಾದ ನಂಬಿಕೆಗಳು ಹೊರನೋಟಕ್ಕೆ ಅತಾರ್ಕಿಕ ಎನಿಸಬಹುದಾದರೂ ಅವುಗಳ ಹಿಂದೆ ಮಾನವನ ಸುಪ್ತ ಮನಸ್ಸು, ಕಾಣದ ಕೈಯ ಬಗೆಗೆ ಇರುವ ಭಯ ಮೂಲವಾಗಿರಬೇಕು. ನಂಬಿಕೆಗಳು ಒಂದು ಹಂತದಲ್ಲಿ ವ್ಯಕ್ತಿ ನಿಷ್ಟವಾಗಿದ್ದು, ಅನಂತರದಲ್ಲಿ ಸಾರ್ವತ್ರಿಕತೆಯನ್ನು ಪಡೆದು ನೆಲೆ ನಿಲ್ಲುತ್ತವೆ. ಜೀವನವನ್ನು ಹಗುರ ಮಾಡುತ್ತವೆ, ನೆಮ್ಮದಿ ನೀಡುತ್ತವೆ, ಸುಗಮ ಮಾಡುತ್ತವೆ, ಮಾನಸಿಕ ಹಾಗೂ ಸಾಮಾಜಿಕ ಶಾಂತಿ, ತೃಪ್ತಿಯನ್ನು ತಂದು ಕೊಡುತ್ತವೆ. ಒಂದು ಪ್ರದೇಶದ ಸಾಮಾಜಿಕ ಸ್ಥಿತಿಗತಿಗಳು, ಭೌಗೋಳಿಕ ನೆಲೆಗಟ್ಟು, ಪರಿಸರ, ಆಲೋಚನಾ ವಿಧಾನಗಳು, ನಂಬಿಕೆಗಳ ಮೇಲೆ ಮುಖ್ಯವಾಗಿ ಪ್ರಭಾವ ಬೀರುವ ಅಂಶಗಳಾಗಿವೆ.

ಗಾಣಿಗರು ಲಿಂಗಾಯತರಲ್ಲಿನ ಒಂದು ಉಪಜಾತಿಯಾಗಿದ್ದು ಅಲ್ಲದೇ ಆಶ್ರಯ ದಾತರೂ ಆಗಿರುವುದರಿಂದ ಪರಸ್ಪರ ನಂಬಿಕೆಗಳಲ್ಲಿ ಹೋಲಿಕೆಗಳಿರುವುದು ಸಹಜವಾಗಿದ್ದರೂ ಗಾಣಿಗರಲ್ಲಿಯ ನಂಬಿಕೆಗಳು ಹೆಚ್ಚು ಕಡಿಮೆ ಸಾರ್ವತ್ರಿಕವಾಗಿರುವ ನಂಬಿಕೆಗಳನ್ನು ಹೋಲುತ್ತವೆ.

ನಂಬಿಕೆಗಳು ಹಾಗೂ ಶಕುನಗಳು ಒಂದೇ ನಾಣ್ಯದ ಎರಡು ಮುಖಗಳು, ಒಂದಕ್ಕೊಂದು ಪೂರಕವಾಗಿರುತ್ತವೆ. ನಂಬಿಕೆಗೆ ಶ್ರದ್ಧೆ ಕಾರಣವಾದರೆ, ಶಕುನಗಳಿಗೆ ಭಯ ಭೀತಿ ಕಾರಣವಾಗಿರುತ್ತದೆ. ನಂಬಿಕೆಯಲ್ಲಿ ವಿಶೇಷವಾಗಿ ಶುಭದ ಹಾರೈಕೆ ಕಂಡು ಬಂದರೆ, ಶಕುನಗಳಲ್ಲಿ ಶುಭ ಅಶುಭಗಳ ಲೆಕ್ಕಾಚಾರವಿರುತ್ತವೆ. ಹೀಗಾಗಿ ಇವೆರಡೂ ಪ್ರಾಚೀನ ಹಾಗೂ ರೂಢಿಗತವಾದವುಗಳು. ಇಂಥ ನಂಬಿಕೆಗಳಲ್ಲಿ ಸ್ಥೂಲವಾಗಿ ಮೂರು ಭಾಗ ಮಾಡಿಕೊಳ್ಳಬಹುದು.

೧. ಅಂಗ ಸಂಬಂಧಿ ನಂಬಿಕೆಗಳು, ೨. ವಸ್ತು ಸಂಬಂಧಿ ನಂಬಿಕೆಗಳು, ೩. ಕಾರ್ಯಸಂಬಂಧಿ ನಂಬಿಕೆಗಳು.

## ೭.೪.೧. ಅಂಗಸಂಬಂಧಿ ನಂಬಿಕೆಗಳು

ಮಾನವನ ದೇಹಕ್ಕೆ ಸಂಬಂದಪಟ್ಟಿರುವ ನಂಬಿಕೆಗಳನ್ನು ಅಂಗಸಂಬಂಧಿ ನಂಬಿಕೆಗಳೆಂದು ಕರೆಯಬಹುದು. ಇವುಗಳನ್ನು ಮುಖ್ಯವಾಗಿ, ಈ ಕೆಳಗೆ ವಿಭಾಗೀಕರಿಸಲಾಗಿದೆ.

೧. ವಿಶೇಷಾಂಗ ಸಂಬಂಧಿ ನಂಬಿಕೆಗಳು

೨. ಅಂಗಾಂಗ ಬಳಕೆ ಸಂಬಂಧಿ ನಂಬಿಕೆಗಳು

೩. ವಿಕಲಾಂಗ ಸಂಬಂಧಿ ನಂಬಿಕೆಗಳು

೪. ಅಂಗಾಂಗ ಮಿಡಿತ ಸಂಬಂಧಿ ನಂಬಿಕೆಗಳು

ಎಂದೂ ಇವುಗಳಲ್ಲಿಯೇ ಮತ್ತೆ ಶುಭ ಹಾಗೂ ಅಶುಭ ಎಂದೂ ಗುರುತಿಸಿಕೊಳ್ಳಬಹುದು.

### ೭.೪.೧.೧. ವಿಶೇಷಾಂಗ ಸಂಬಂಧಿ ನಂಬಿಕೆಗಳು

**i. ಶುಭ ಸೂಚಕಗಳು:** ಹೆಣ್ಣು ಮಕ್ಕಳಿಗೆ ದೇಹದ ಎಡ ಭಾಗದ ಮೇಲೆ ಕಪ್ಪು ಮಚ್ಚೆಯಿದ್ದರೆ, ನಾಲಿಗೆ ತುದಿ ಮೇಲೆ, ಎಡಗಾಲಿನ ಪಾದದ ಹೊರಭಾಗದಲ್ಲಿ ಮಚ್ಚೆಯಿದ್ದರೆ, ಎಡಗೈಯೊಳಗೆ, ಕಾಲು ಬೆರಳು ಆರು, ಕೈ ಬೆರಳು ಆರು, ಇದ್ದರೆ ಶುಭ ಸೂಚಕ ಲಕ್ಷಣ.

ಅದೇ ಗಂಡು ಮಗುವಿಗೆ, ದೇಹದ ಬಲಭಾಗದ ಕಡೆ ಕಪ್ಪು ಮಚ್ಚೆಯಿದ್ದರೆ, ನಾಲಿಗೆ ತುದಿ ಮೇಲೆ ಬಲಗೈಯೊಳಗೆ ಬಲಗಾಲಿನ ಪಾದದ ಹೊರ ಮೈಯಲ್ಲಿ ಮಚ್ಚೆಯಿದ್ದರೆ, ಬಲಗಾಲ, ಬಲಗೈನಲ್ಲಿ ಬೆರಳು ಆರು ಇದ್ದರೆ, ಶುಭ ಸೂಚಕ ಲಕ್ಷಣಗಳೆಂದು ಗಾಣಿಗರ ನಂಬಿಕೆ ಇಂಥವರನ್ನು ಶುಭ ಕಾಯಗಳಲ್ಲಿ ಮುಂದಿಟ್ಟುಕೊಂಡು ಅವರ ಕೈಯಾರೆ ಎಲ್ಲಾ ಕೆಲಸ ಕಾರ್ಯಗಳನ್ನು ಮಾಡಿಸುವರು.

**ii. ಅಶುಭ ಸೂಚಕಗಳು:** ಹೆಣ್ಣುಮಕ್ಕಳಿಗೆ ಕಪ್ಪು ಮಚ್ಚೆ ದೇದಹ ಬಲಭಾಗದ ಕಡೆ ಇದ್ದರೆ, ಗಂಡು ಮಕ್ಕಳಿಗೆ ದೇಹದ ಎಡಭಾಗದ ಕಡೆ ಮಚ್ಚೆಯಿದ್ದರೆ ಅವಲಕ್ಷಣವೆಂದು ಇವರು ನಂಬುತ್ತಾರೆ. ಇಂಥವರನ್ನು ಶುಭಕಾರ್ಯಗಳಲ್ಲಿ ಮುಂದೆ ನಿಲ್ಲಿಸುಸುವುದಿಲ್ಲ.

### ೭.೪.೧.೨. ಅಂಗಾಂಗ ಬಳಕೆ ಸಂಬಂಧಿ ನಂಬಿಕೆಗಳು

**i. ಶುಭ ಸೂಚಕಗಳು:** ಗಾಣಿಗರಲ್ಲಿಯೂ ಕೂಡ ಬಲಗಾಲು ಹಾಗೂ ಬಲಗೈ ಶ್ರೇಷ್ಠವೆಂದು ನಂಬಿರುವರು. ಆದರೆ ಕೆಲವು ವಿಶೇಷ ಸಂದರ್ಭಗಳಲ್ಲಿ ಮಾತ್ರ ಎಡಗೈಯನ್ನು ಬಳಸಿದರೆ ಶುಭ ಸೂಚಕವೆಂಬ ನಂಬಿಕೆಯಿದೆ. ಕೈ ನೋಡಿ ಶಾಸ್ತ್ರ ಹೇಳುವಾಗ ಹೆಣ್ಣುಮಕ್ಕಳಿಗೆ ಎಡಗೈ, ಗಂಡಸರಿಗೆ ಬಲಗೈ ಶುಭ ಲಕ್ಷಣವೆಂದು ತಿಳಿದಿರುವರು. ಇವರು ಮದುವೆ ಹಾಗೂ ಇತರೆ ಶುಭಕಾರ್ಯಗಳಲ್ಲಿ ನಿವಾಳಿಸಿ ತೆಗೆಯುವಾಗ ಮಾತ್ರ ಎಡಗೈಯಿಂದ ಹಣೆಗೆ ಕುಂಕುಮವಿಡುವರು. ಅರಿಶಿಷಣದ ನೀರು ನಿವಾಳಿಸಿ ಚೆಲ್ಲುವಾಗ, ದೃಷ್ಟಿ ತೆಗೆದು ನಿವಾಳಿಸುವಾಗ ಗಂಡಸರು ಹೆಂಗಸರು ಎಡಗೈಯನ್ನು ಬಳಸುತ್ತಾರೆ. ಇಂಥ ಸಮಯಗಳಲ್ಲಿ ಎಡಗೈ ಶುಭ ಸೂಚಕವಾಗಿ ಬಳಕೆಯಾಗುವುದು. (ಹುಟ್ಟಿದ ಕೂಸಿನ ಹೊಕ್ಕಳ ಬಳ್ಳಿ ಕತ್ತರಿಸುವಾಗ ಬಲಗೈ ಮಾತ್ರ ಉಪಯೋಗಿಸಬೇಕು). ಕೂಸನ್ನು ಮುಟ್ಟಿ ಎತ್ತಿಕೊಳ್ಳುವಾಗ ಮತ್ತು ತೊಟ್ಟಿಲು

ತೂಗುವಾಗ ಬಲಗೈಯನ್ನು ಬಳಸಬೇಕು. ಹಾಗೆಯೇ ತುಂಬಿದ ದಬರಿ, ಗಡಿಗೆಯಲ್ಲಿ ಅನ್ನ, ಶೊಂಠಿ ಸಾರು ಹುಗ್ಗಿ ಇತ್ಯಾದಿ ನೀಡುವಾಗಲೂ ಬಲಗೈ ಬಳಸಬೇಕು.

ಗೃಹ ಪ್ರವೇಶ ಮಾಡುವಾಗ, ಹೊಸ್ತಿಲು ದಾಟುವಾಗ ಬಲಗಾಲನ್ನಿಟ್ಟು ಒಳಗೆ ಹೋಗಬೇಕು. ಮಗು ಹುಟ್ಟಿದ ಮೂರು ದಿನದೊಳಗೆ ಮಗು ನೋಡಲು ಬಂದ ಗಂಡ, ಮಾವ, ಅತ್ತೆ ಮೊದಲಾದ ಸಂಬಂಧಿಗಳು ಕಡ್ಡಾಯವಾಗಿ ಮಗುವಿನ ಕೈಗೆ ಹಣ ಕೊಡಲು, ಬಲಗೈ ಮುಟ್ಟಬೇಕೆಂಬ ಹಾಗೂ ಮಗುವನ್ನು ಹೊಸ್ತಿಲ ದಾಟಿಸುವಾಗ ಮಗು ಬಲಗಾಲು, ಬಲಗೈ ಇಟ್ಟು ದಾಟಿ ಬಂದರೆ ಶುಭ ಸೂಚಕ ಲಕ್ಷಣವೆಂದು ಪರಿಗಣಿಸುತ್ತಾರೆ. ಹಾಗೆಯೇ ಮಗುವಿಗೆ ಮೊಟ್ಟ ಮೊದಲು ಸಲ ಅನ್ನ ತಿನ್ನಿಸುವಾಗ ಸೋದರಮಾವ, ಸೋದರತ್ತೆಯರು ಮಗುವನ್ನು ಬಲ ತೊಡೆಯ ಮೇಲೆ ಕುಳ್ಳರಿಸಿಕೊಂಡು ಬಲಗೈಯಿಂದ ತಿನ್ನಿಸಿದರೆ ಮಗುವಿಗೆ ಶ್ರೇಯಸ್ಸೆಂಬ ನಂಬಿಕೆಯಿದೆ.

**ii. ಅಶುಭ ಸೂಚಕಗಳು:** ಗಾಣಿಗರಲ್ಲಿಯೂ ಕೂಡ ಎಡಗಾಲು, ಎಡಗೈ ಕನಿಷ್ಠವೆಂಬ ನಂಬಿಕೆಯಿದೆ. ಮಂಗಳ ಕಾರ್ಯಗಳಲ್ಲಿ ಊಟ ಬಡಿಸುವಾಗ ಎಡಗೈ ಬಳಕೆಗೆ ತೀವ್ರವಾದ ಆಕ್ಷೇಪಣೆಯಿದೆ. ಹಾಗೆಯೇ ಹಿರಿಯರಿಗೆ, ದೊಡ್ಡವರಿಗೆ ನೀರು ಕೊಡುವಾಗ ಎಡಗೈ ಬಳಸಿದರೆ ಆಕ್ಷೇಪಣೆ ಮಾಡುವರು. ಅಂಗೈ ನೋಡಿ ಶಾಸ್ತ್ರ ಹೇಳುವಾಗ, ಹೆಂಗಸರಿಗೆ ಬಲಗೈ ನೋಡಿದರೆ, ಗಂಡಸರ ಎಡಗೈ ನೋಡಿದರೆ, ಅಶುಭ ಸೂಚಕವೆಂಬ ನಂಬಿಕೆಯಿದೆ.

**೨.೪.೧.೩. ವಿಕಲಾಂಗ ಸಂಬಂಧಿ ನಂಬಿಕೆಗಳು**

**i. ಶುಭ ಸೂಚಕಗಳು:** ಮಗುವಿಗೆ ಮೆಳ್ಳಗಣ್ಣಿದ್ದರೆ, ವಿಶಾಲವಾದ ಹಣೆಯಿದ್ದರೆ, ತಲೆ ದೊಡ್ಡದಿದ್ದರೆ, ನಾಲಿಗೆ ಉದ್ದವಾಗಿ ತೆಳ್ಳಗಿದ್ದು, ಮೂಗಿನ ಎರಡು ಹೊಳ್ಳೆಗಳನ್ನು ತಲುಪುವಂತಿದ್ದರೆ, ಕೈ ಬೆರಳು ಸ್ವಲ್ಪ ಉದ್ದವಿದ್ದು ತೆಳ್ಳಗಾಗಿದ್ದರೆ, ಪಾದಗಳೆರಡು ನೆಲವನ್ನು ಮುಟ್ಟುವಂತಿದ್ದರೆ, ಇವೆಲ್ಲ ಶುಭ ಸೂಚಕಗಳು. ಇಂಥ ಲಕ್ಷಣಗಳುಳ್ಳ ಹೆಣ್ಣು ಹುಟ್ಟಿದ ಮನೆಗೂ ಕೊಟ್ಟ ಮನೆಗೂ ಶುಭವಾಗುವುದೆಂಬುದು ಗಾಣಿಗರ ನಂಬಿಕೆಯಿಟ್ಟಿರುವರು.

**ii. ಅಶುಭ ಸೂಚಕಗಳು:** ಮಗುವಿಗೆ ಕಣ್ಣಿನ ಗುಡ್ಡೆಗಳ ಗಾತ್ರ ಸ್ವಲ್ಪ ದೊಡ್ಡದಾಗಿದ್ದರೆ ದೆವ್ವದ ಕಣ್ಣೆಂದೂ, ಹರಿದಿದ್ದರೆ ಕಿವಿಯರಿಕೆಯೆಂದೂ, ಕಿವಿ ಮೊಟಕಿದ್ದರೆ, ಹಲ್ಲು ಅಗಲವಾಗಿ, ದೊಡ್ಡದಿದ್ದರೆ ಕೋಣ ಹಾಗೂ ಎಮ್ಮೆ ಹಲ್ಲಿನವಳೆಂದೂ ಮೂಗು ಹರಿದಿದ್ದರೆ, ಕೈ ಬೆರಳು ಸ್ವಲ್ಪ ಮೊಟಕಾಗಿದ್ದರೆ, ಪಾದಗಳು ಸ್ವಲ್ಪ ಮೊಟಕಾಗಿದ್ದರೆ ಇವೆಲ್ಲವನ್ನು ಅಶುಭ ಸೂಚಕ ಲಕ್ಷಣಗಳೆಂದು ಗಾಣಿಗರು ನಂಬಿರುತ್ತಾರೆ.

ಅಶುಭ ಲಕ್ಷಣಗಳುಳ್ಳವರನ್ನು ಗಂಡಿರಲಿ, ಹೆಣ್ಣಿರಲಿ ಮದುವೆಯಂಥ ಮಂಗಲ ಕಾರ್ಯಗಳಲ್ಲಿ ಮುಂದು ಬಿಡುವುದಿಲ್ಲ. ಇವರ ಕೈಯಾರೆ ಮಂಗಲ ಕಾರ್ಯಗಳನ್ನಂತೂ ಮಾಡಿಸುವುದಿಲ್ಲ.

### ೭.೪.೧.೪. ಅಂಗಾಂಗ ಮಿಡಿತ ಸಂಬಂಧಿ ನಂಬಿಕೆಗಳು

ಮಾನವ ದೇಹದ ಅಂಗಾಂಗಗಳ ಮಿಡಿತ ಅಥವಾ ಅದುರುವಿಕೆಯಲ್ಲಿಯೂ ಶುಭ ಅಶುಭಗಳನ್ನು ಗಾಣಿಗರು ಕಾಣುತ್ತಾರೆ.

**i. ಶುಭ ಸೂಚಕಗಳು:** ಗಾಣಿಗರಲ್ಲಿ ಹೆಣ್ಣು ಮಕ್ಕಳ ಎಡಗಣ್ಣು ಅದುರಿದರೆ ಹಾಗೂ ಎಡಗಡೆಯ ಹುಬ್ಬು ಅದುರಿದರೆ ಒಳ್ಳೆಯದಾಗುವುದೆಂಬ ನಂಬಿಕೆ. ಅದೇ ಗಂಡಸರ ಬಲಗಡೆ ಹುಬ್ಬು, ಬಲಗಡೆಯ ಕಣ್ಣು ರೆಪ್ಪೆ, ಬಲಗಡೆಯ ಭುಜ ಹಾರಿದರೆ ಶುಭ ಸೂಚಕವೆಂತಲೂ ಗಂಡಸರ ತೊಡೆ ಅದುರಿದರೆ ಕಾಮ ಸೂಚಕವೆಂದು, ತುಟಿ ಅದುರಿದರೆ ಸಿಹಿಯೂಟ ದೊರೆಯುವುದೆಂದು ನಂಬಿರುವರು.

**ii. ಅಶುಭ ಸೂಚಕಗಳು:** ಹೆಂಗಸರ ಬಲಗಣ್ಣು ಹಾರಿದರೆ, ಗಂಡಸರ ಎಡಗಡೆ ಕಣ್ಣುರೆಪ್ಪೆ ಮೇಲಿನ ಹುಬ್ಬು ಹಾರಿದರೆ, ಕೆಟ್ಟದಾಗುವುದೆಂದು, ಹೆಂಗಸರ ಬಲಗಡೆ ಅಂಗೈ ಅದುರಿದರೆ ಜಗಳ ಆಗುವುದೆಂದು ನಂಬಿರುವರು. ಗಂಡಸರ ಬಲಗಾಲು ನಡುಗಿದರೆ ಅಪಾಯ ಅಥವಾ ಅಶುಭ ಸೂಚಕವೆಂಬ ನಂಬಿಕೆಯಿದೆ.

### ೭.೪.೨. ಕಾರ್ಯಸಂಬಂಧಿ ನಂಬಿಕೆಗಳು

ಗಾಣಿಗರು ತಾವು ಕೈಕೊಂಡ ಯಾವುದೇ ಕಾರ್ಯವು ಶುಭವಾಗಬೇಕೆಂದು ಬಯಸುತ್ತಾರೆ, ಅದಕ್ಕಾಗಿ ಅಶುಭ ನಿವಾರಿಸುವ ಕಾರ್ಯಗಳನ್ನು ಮೊದಲಿಗೆ ಮಾಡಬೇಕೆಂಬ ನಂಬಿಕೆ ಇವರಲ್ಲಿದೆ. ಇಂಥವುಗಳನ್ನು ಕಾರ್ಯಸಂಬಂಧಿ ನಂಬಿಕೆಗಳೆನ್ನಬಹುದು.

ಮದುವೆಯಾಗುವ ಗಂಡಿಗೆ ದೆವ್ವದ ಕಾಟ, ಗಾಳಿ ಸೋಂಕು, ಪ್ರೇತ, ಭೂತ ಆಗಬಾರದೆಂದು ಗಂಡನ್ನು ಮದುಮಗನನ್ನಾಗಿ ಮಾಡುವ ಮೊದಲು ಅವನ ಸೋದರ ಮಾವ, ತಾಯಿ, ತಂದೆ ದೊಡ್ಡಪ್ಪ, ದೊಡ್ಡಮ್ಮ ಇವರುಗಳು ಸೇರಿ ಜಾಗೃಕತೆಯ ಮಾತುಗಳನ್ನು ಹೇಳುತ್ತಾರೆ. ಮದುಮಗನಿಗೆ ಹೊರಗಡೆ ಎಲ್ಲಿ ಅಂದರೆ ಕೆಲವು ಸ್ಥಳಗಳಿಗೆ ಹೋಗಕೂಡದು. ತಗಲುವ ಗಾಳಿ ಸೋಂಕು ನಿವಾರಣೆಯಾಗುವುದೆಂಬ ನಂಬಿಕೆ ಇವರಲ್ಲಿದೆ. ಹಾಗೆಯೇ ಮದುವೆ ಗಂಡು ತನ್ನ ಸೋದರ ಮಾವ, ಸೋದರಳಿಯನಿಂದ ಮೈ ಕೈಗೆ ಎಣ್ಣೆ ಅರಿಶಿಣ ತಿಕ್ಕಿಸಿಕೊಂಡು ಸ್ನಾನ ಮಾಡುವುದು ಶುಭವೆಂಬ ನಂಬಿಕೆಯಿದೆ.

ಯಾವುದೇ ಶುಭ (ಮಂಗಳ) ಕಾರ್ಯಕ್ಕೆ ಐದು ಜನ, ಒಂಬತ್ತು ಜನ, ಹದಿಮೂರು ಜನರೊಟ್ಟಿಗೆ ಹೋಗಬೇಕೆಂಬ ನಂಬಿಕೆಯಿದೆ. ಹೀಗೆ ಹೊರಡುವಾಗ ಇನ್ನೊಂದು ಗುಂಪಿನ ಎದುರಾಳಿಗಳು ತಮ್ಮ ಕಾರ್ಯ ಕುಂಠಿತವಾಗಬೇಕೆಂದು ಮಾಟ ಮಾಡಿಸಿರುವರೆಂದು ನಂಬುತ್ತಾರೆ. ಅದಕ್ಕೆ ಪ್ರತಿಯಾಗಿ ಇವರು ನಿಂಬಿಹಣ್ಣು, ಕೇರುಬೀಜ, ಒಣ ಮೆಣಸಿನಕಾಯಿ ಎರಡೆರಡು ಭಾಗ ಮಾಡಿ, ಕುಂಕುಮ-ಅರಿಶಿಣ ಅದಕ್ಕೆ ಸವರಿ ದಾರಿಗೆ ಎಸೆಯುತ್ತಾರೆ ಮಾಟ ಮಾಡುತ್ತಾರೆ ಹಾಗೆಯೇ ಗಿಡ ತಿರುವಿ ಹಾಕುತ್ತಾರೆ.

ಅಮವಾಸ್ಯೆ, ಸೂರ್ಯಗ್ರಹಣ, ಚಂದ್ರಗ್ರಹಣ ದಿನ ಶಕ್ತಿ, ಗಾಳಿ ಸಂಚರಿಸುತ್ತಿರುತ್ತದೆಂಬ ನಂಬಿಕೆಯಿಂದಾಗಿ ಮಂತ್ರ ತಾಯಿತ, ಯಂತ್ರ, ಕಟ್ಟು ವಿಶೇಷ ಪೂಜೆ, ಮಾಟ, ಮದ್ದು ಕೈ ಮೆಸಗು ಇತ್ಯಾದಿ ಮಾಡಿಸುತ್ತಾರೆ.

ಹೀಗೆ ಒಂದು ಕಾರ್ಯಸಾಧನೆಗಾಗಿ ಇನ್ನೊಂದು ಕಾರ್ಯವನ್ನು ಮಾಡಬೇಕಾಗುವುದೆಂಬುದು ಗಾಣಿಗರ ನಂಬಿಕೆಯಾಗಿದೆ.

**೭.೪.೩. ವಸ್ತು ಸಂಬಂಧಿ ನಂಬಿಕೆಗಳು**

ಗಾಣಿಗರಲ್ಲಿ ಮದುವೆಯಾದ ಮದುಮಗನು ಅರಿಶಿಣದ ಮೈ ಆರುವತನಕ ಬಿಸಿಲು, ಗಾಳಿ ಮೈಗೆ ಬಡಿಯಬಾರದು, ಕೈಯಲ್ಲಿ ನಿಂಬೆಹಣ್ಣು, ಕರವಸ್ತ್ರ, ಅಡಿಕೆ ಎಲೆ ಹಿಡಿದು ಪ್ರಯಾಣಿಸಿದರೆ, ಪಿಶಾಚಿ, ದೆವ್ವಗಳು ಕಣ್ಣಿಗೆ ಕಾಣಿಸುವುದಿಲ್ಲವೆಂದು ಇವರು ನಂಬುತ್ತಾರೆ.

ಹುಣಿಸೆಮರದಲ್ಲಿ ಸಾಮಾನ್ಯವಾಗಿ ದೆವ್ವಗಳು ಹೆಚ್ಚಾಗಿ ವಾಸಿಸುತ್ತವೆಂಬ ನಂಬಿಕೆ ಹಾಗೂ ಅಮವಾಸ್ಯೆ ದಿನ ದೆವ್ವಗಳು ವಿಶೇಷವಾಗಿ ಕಾಡುವುದು ಜಾಸ್ತಿ, ಮನೆಯ ಮುಂಬಾಗಿಲ ಮೇಲೆ "ನಾಳೆ ಬಾ" ಎಂದು ಬರೆದರೆ ಒಳ್ಳೆಯದು. ಕೆಟ್ಟ ಶಕ್ತಿಗಳು ಮನೆಯಲ್ಲಿ ಕಾಣಿಸಿಕೊಳ್ಳುವುದಿಲ್ಲ ಎಂಬ ನಂಬಿಕೆ ಇವರಲ್ಲಿಯೂ ಇವೆ.

ತಾವು ಅಂದುಕೊಂಡ ಕೆಲಸ ಬಹಳ ದಿನಗಳವರೆಗೆ ಕೈಗೂಡದೆ ಹೋದಾಗ, ಇವೆಲ್ಲ ಹೊಸ ಕಾರ್ಯವೊಂದನ್ನು ಆರಂಭಿಸುವಾಗ ಅದು ನೆರವೇರುವುದೋ ಇಲ್ಲವೋ ಎಂಬುದನ್ನು ಕಂಡುಕೊಳ್ಳಲು ಮನೆಯ ದೇವರಿಗೆ ಹೋಗಿ ಪೂಜೆ ಮಾಡಿಸಿದರೆ, ಹರಕೆ ಮುಟ್ಟಿಸಿದರೆ, ಅಂದುಕೊಂಡ ಕೆಲಸವಾಗುವುದೆಂಬ ನಂಬಿಕೆ ಇವರಲ್ಲಿದೆ.

ಕತ್ತಲಾದ ಮೇಲೆ ಬಟ್ಟೆಯನ್ನು ಸೂಜಿಯಿಂದ ಹೊಲಿದುಕೊಳ್ಳಬಾರದು. ತಲೆಗೂದಲು ಬಾಚಿಕೊಳ್ಳಬಾರದು, ಕನ್ನಡಿಯಲ್ಲಿ ಮುಖ ನೋಡಿಕೊಳ್ಳಬಾರದು. ಕೈಕಾಲಿನ ಉಗುರು ಕತ್ತರಿಸಿಕೊಳ್ಳಬಾರದು. ಬೇರೆಯವರಿಗೆ ಹಣ ಕೊಡಬಾರದು. ಅಡಿಗೆ ಮಾಡಿದ ಗಡಿಗೆ ಅಥವಾ ದಬರಿಯಲ್ಲಿ ತುತ್ತು ಅನ್ನವಾದರೂ ಉಳಿಸುವಂತೆ ನೋಡಿಕೊಳ್ಳಬೇಕೆಂಬ ನಂಬಿಕೆಯುಳ್ಳವರಾಗಿದ್ದಾರೆ.

ರಾತ್ರಿಯ ಹೊತ್ತಿನಲ್ಲಿ ಬೇರೆಯವರಿಗೆ ಉಪ್ಪು ಕೊಡುವುದಿಲ್ಲ. ಪಡೆಯುವುದು ಇಲ್ಲ ಮತ್ತು ಚೆಲ್ಲುವುದಿಲ್ಲ ಹಾಗೆ ಮಾಡಿದರೆ ಮಾಡಿದ ಸಾಲ ತೀರುವುದಿಲ್ಲವೆಂದೂ ನಂಬುತ್ತಾರೆ. ಅಂತೆಯೇ ರಾತ್ರಿ ಹೊತ್ತು ಆಕಾಶದಲ್ಲಿನ ಚುಕ್ಕಿ(ಉಲ್ಕೆ)ಯು ವೇಗವಾಗಿ ಓಡಿ, ಕೆಳಕ್ಕೆ ಬಿದ್ದರೆ ಮೂರು ಬಾರಿ ಉಗುಳುತ್ತಾರೆ. ಬಿದ್ದ ದಿಕ್ಕಿಗೆ ದುರಂತ ಸಂಭವಿಸುವುದೆಂಬ ನಂಬಿಕೆ ಇವರಲ್ಲಿದೆ.

**೭.೪.೪. ಶವ ಸಂಸ್ಕಾರದ ಸುತ್ತ ನಂಬಿಕೆಗಳು**

ಗಾಣಿಗರು ಸ್ಮಶಾನಕ್ಕೆ ಹೋಗಿ ಬಂದು ಸ್ನಾನ ಮಾಡಿ, ಗಂಡಸರು ಬಿಳಿ ಪಂಚೆ, ಬಿಳಿ ಬನೀನು, ಷರ್ಟು ತೊಟ್ಟರೆ, ಹೆಂಗಸರು ಹಳೆಯ ಸೀರೆ, ಕುಬಸ ತೊಡುವ ಪದ್ಧತಿ ಅಥವಾ ವಿಧಿ ಇದೆ.

ಇವರಲ್ಲಿ ಸಣ್ಣ ಪುಟ್ಟ ಮಕ್ಕಳು, ಹಾಲುಣಿಸುವ ಹೆಂಗಸರು, ಮದುಮಕ್ಕಳು, ಮದುವೆಯಾಗದ

ಹೆಣ್ಣುಮಕ್ಕಳು, ಗರ್ಭಿಣಿಯರು ಸ್ಮಶಾನಕ್ಕೆ ಹೋದವರು ಮರಳಿ ಬಂದು ಯಾರನ್ನಾದರೂ ಮುಟ್ಟಿಸಿಕೊಳ್ಳುವುದು, ಚಿಕ್ಕ ಮಕ್ಕಳನ್ನು ಎತ್ತಿಕೊಳ್ಳುವುದು, ಮನೆ ಪ್ರವೇಶಿಸುವುದು ನಿಷಿದ್ಧವಾಗಿದೆ. ಇವರು ಸ್ನಾನ ಮಾಡಿ ಊರಿನ ದೇವರ ಗುಡಿಗಳಿಗೆ ಹೋಗಿ ಕೈ ಮುಗಿದು ಬರುತ್ತಾರೆ. ಮುದುಕ ಮುದುಕಿಯರು ಸೂರ್ಯ ದೇವನಿಗೆ ನಮಸ್ಕರಿಸುತ್ತಾರೆ. ನಂತರ ತಮ್ಮ ಮನೆಯ ಹೊರಗಿನ ಕಟ್ಟೆ ಕಲ್ಲಿನ ಮೇಲೆ ಕುಳಿತು ಎಲೆ ಅಡಿಕೆ, ತಂಬಾಕು, ಕಡ್ಡಿಪುಡಿ, ವಿಮಲ್, ಸ್ಟಾರ್ ಗುಟಕ ಜಗಿದು, ಹೊರಗೆ ಉಗುಳಿ ಮನೆಯ ಒಳಗೆ ಬರುತ್ತಾರೆ.

ಇದಕ್ಕೆಲ್ಲ ಗಾಣಿಗರಲ್ಲಿ ಸಾವಿನ ಬಗೆಗೆ ಇರುವ ಭಯ ಹಾಗೂ ಸಾವು ಎಂಬ ಅಗೋಚರವಾದ ಶಕ್ತಿಯ ಕುರಿತು ಅಂಜಿಕೆ ಕಾರಣವೆಂದು ಹೇಳಬಹುದಾಗಿದೆ. ವ್ಯಕ್ತಿಯ ಸಾವಿಗೆ ಯಾವುದೋ ಅಗೋಚರ ಶಕ್ತಿಯೇ ಕಾರಣವೆಂದು ಬಲವಾಗಿ ನಂಬುವ ಗಾಣಿಗರು, ಆ ಶಕ್ತಿಯು ತಮ್ಮನ್ನು ತಕ್ಷಣವೇ ಗುರುತಿಸದಿರಲೆಂದು, ಬಟ್ಟೆಗಳನ್ನು ಬದಲಿಸುವ ಮೂಲಕ, ತಮ್ಮನ್ನು ತಾವೇ ಮರೆ ಮಾಡಿಕೊಳ್ಳಲು ಬಯಸುತ್ತಾರೆ. ಮನೆಯವರ ಮಧ್ಯದಲ್ಲಿ ಇರಲು ಹೆಚ್ಚು ಪ್ರಯತ್ನಿಸುತ್ತಾರೆ.

**೭.೫. ಶಕುನಗಳು**

ಶಕುನ ಹಾಗೂ ಶಕುನಗಳ ಸ್ವರೂಪ ಕುರಿತು ಈ ಅಧ್ಯಯನದ ಪ್ರಾರಂಭಕ್ಕೆ ವಿವರಿಸಲಾಗಿದೆ. ಇಲ್ಲಿ ಗಾಣಿಗರಲ್ಲಿ ಪ್ರಚುರವಾಗಿರುವ ಶಕುನಗಳನ್ನು ಸ್ಥೂಲವಾಗಿ ಮೂರು ಭಾಗಗಳನ್ನಾಗಿ ಮಾಡಿಕೊಳ್ಳಲಾಗಿದೆ. ಅವು ಈ ಕೆಳಕಂಡಂತಿವೆ.

೧. ವ್ಯಕ್ತಿ ಅಥವಾ ಲಿಂಗ ಸಂಬಂಧಿ ಶಕುನಗಳು,

೨. ಪ್ರಾಣಿ ಸಂಬಂಧಿ ಶಕುನಗಳು

೩. ಪಕ್ಷಿ ಸಂಬಂಧಿ ಶಕುನಗಳು

**೭.೫.೧. ವ್ಯಕ್ತಿ ಅಥವಾ ಲಿಂಗ ಸಂಬಂಧಿ ಶಕುನಗಳು**

ವ್ಯಕ್ತಿ ಇಲ್ಲವೆ ವ್ಯಕ್ತಿಗಳ ಚಲನವಲನ ಹಾಗೂ ಕ್ರಿಯೆಯಿಂದಾಗಿ ಸಂಭವಿಸುವ ಶುಭ ಹಾಗೂ ಅಶುಭ ಶಕುನಗಳನ್ನು ನಾವಿಲ್ಲಿ ವ್ಯಕ್ತಿ ಅಥವಾ ಅಂಗ ಸಂಬಂಧಿ ಶಕುನಗಳೆಂದು ಕರೆಯಬಹುದು.

ಇಂಥ ಶಕುನಗಳನ್ನು ನಾವಿಲ್ಲಿ ಶುಭ ಹಾಗೂ ಅಶುಭ ಸೂಚಕ ಶಕುನಗಳಾಗಿ ವಿಂಗಡಿಸಿಕೊಳ್ಳಬಹುದು.

**i. ಶುಭ ಸೂಚಕ ಶಕುನಗಳು:** ಗಾಣಿಗರು ಕನ್ಯಾ ನೋಡುವ ಸಲುವಾಗಿ ಇಲ್ಲವೆ ಯಾವುದೇ ಶುಭ ಕಾರ್ಯಗಳಿಗೆ ಹೊರಟಾಗ, ಮೂರು ಮಂದಿ ಮುತ್ತೈದೆಯರು ಒಟ್ಟಿಗೆ ಎದುರಾದರೆ, ತುಂಬಿದ ಗಡಿಗೆ ಹಾಗೆಯೇ ಬಳೆಗಾರ ಬಳೆ ಹೊತ್ತು ಎದುರಿಗೆ ಬಂದರೆ, ಶುಭ ಶಕುನವೆಂದು ಭಾವಿಸುತ್ತಾರೆ. ಹಾಗೆಯೇ ಗರ್ಭಿಣಿ ಸ್ತ್ರೀ, ಬುತ್ತಿಗಂಟು ಹೊತ್ತವರು ಎದುರಾದರೆ, ಶುಭ್ರಗೊಳಿಸಿದ ಬಟ್ಟೆಗಂಟು ಹೊತ್ತು ಅಗಸ ಎದುರಾದರೆ ಶುಭ ಸೂಚಕ ಶಕುನಗಳೆಂದು ಹೇಳುವರು.

ಶುಭ ಕಾರ್ಯಕ್ಕೆ ಹೊರಡುವ ಮುನ್ನ ಎರಡು ಸಾರಿ ಸೀತರೆ, ನರಿ, ಕುದುರೆ, ಹೂ ಹೊತ್ತವರು, ಹಲ್ಲಿ ಬಲ ಭಾಗಕ್ಕೆ ಬಿದ್ದರೆ ಇವೆಲ್ಲವನ್ನು ಇವರು ಶುಭ ಸೂಚಕ ಶಕುನಗಳೆಂದು ಹೇಳುವರು.

**ii. ಅಶುಭ ಸೂಚಕ ಶಕುನಗಳು:** ಗಾಣಿಗರು ಯಾವುದೇ ಕೆಲಸಕ್ಕೆ ಹೊರಡುವ ಮುನ್ನ, ಅದರಲ್ಲೂ ಬಹಳ ಮುಖ್ಯವಾಗಿ ಹೆಣ್ಣು ನೋಡಲು ಹೊರಟ ಸಮಯದಲ್ಲಿ, ಕ್ಷೌರಿಕ ಎದುರಾದರೆ, ಸಲಿಕೆ ಗುದ್ದಲಿ ಹಾರೆ ಹಿಡಿದವರು ಎದುರಾದರೆ, ಒಂಟಿ ಸೀನು ಸೀತರೆ, ಒಂಟಿ ಬ್ರಾಹ್ಮಣ, ಬೆಕ್ಕು ಎದುರಾದರೆ, ಎಲ್ಲಿಗೆ ಹೊರಟಿದ್ದೀರಿ... ಎಂದು ಯಾರಾದರೂ ಅಡ್ಡ ಬಾಯಿ ಹಾಕಿದರೆ, ಇವೆಲ್ಲವನ್ನು ಅಶುಭ ಸೂಚಕ ಶಕುನಗಳೆಂದು ಇವರು ಪರಿಗಣಿಸಿ, ಆ ದಿನ ಪ್ರಯಾಣ ಬೆಳೆಸುವುದಿಲ್ಲ ಹಾಗೂ ಇಂಥ ಸಂಬಂಧಗಳನ್ನು ಕೈ ಬಿಡುವರು.

ಇನ್ನು ಮನೆಯ ಬಾಗಿಲು ಹಾಕಿದ್ದರೆ, ಮನೆಯಲ್ಲಿ ಕಸಗುಡಿಸುತ್ತಿದ್ದರೆ, ದೇವರ ಮುಂದಿನ ದೀಪ ತಕ್ಷಣ ಆರಿ ಹೋದರೆ, ಹೆಣ್ಣಿಗೆ ಸುಳಿಯಿದ್ದರೆ, ಕನ್ಯೆಯ ಮುಟ್ಟಾಗಿ ಕುಳಿತಿದ್ದರೆ, ಹಾಗೆಯೇ ಕನ್ಯಾ ನೋಡುವ ಸಮಯದಲ್ಲಿ ಚೆಂಬು ಕೈ ಜಾರಿ ಬಿದ್ದರೆ, ಹಲ್ಲಿ ಎಡಕ್ಕೆ ಬಿದ್ದರೆ, ಊಟ ಮಾಡುವಾಗ, ಒಬ್ಬರ ಕೈ ಇನ್ನೊಬ್ಬರಿಗೆ ತಾಕಿದರೆ, ಕನ್ನಡಿ ಕೈ ಜಾರಿ ಬಿದ್ದರೆ, ಹೊಡೆದ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುವುದು, ತುಂಬಿದ ಚೆಂಬು ಉರುಳಿ ನೀರು ನೆಲದ ಪಾಲಾದರೆ, ವಿಭೂತಿ ಉಂಡೆ ಕೈ ಜಾರಿ ಒಡೆದರೆ, ದೇವರ ಎಡೆ ಕೈ ಜಾರಿ ಬಿದ್ದರೆ, ಕಳಸದ ಚೊಂಬು ಉರುಳಿದರೆ, ಮೈ ಮೇಲಿನ ಬಟ್ಟೆ ಸುಟ್ಟರೆ, ಹೊಸ್ತಿಲ ಮೇಲೆ ಕುಳಿತರೆ, ತೂಗಾಡಿಸುತ್ತಾ ಕುಳಿತಿದ್ದರೆ ಇವೆಲ್ಲವೂ ಅಶುಭ ಸೂಚಕ ಶಕುನಗಳೆಂದು ಇವರು ತಿಳಿಯುತ್ತಾರೆ.

**೭.೫.೨. ಪ್ರಾಣಿ ಸಂಬಂಧಿ ಶಕುನಗಳು**

ಪಕ್ಷಿ ಹಾಗೂ ವ್ಯಕ್ತಿ ಸಂಬಂಧಿಸಿದವುಗಳನ್ನು ಹೊರತು ಪಡಿಸಿದ ಶಕುನಗಳನ್ನು ಪ್ರಾಣಿ ಸಂಬಂಧಿ ಶಕುನಗಳೆಂದು ಸ್ಥೂಲವಾಗಿ ಕರೆಯಬಹುದು. ಇದರಲ್ಲಿ ಮತ್ತೆ i.ಶುಭ ಸೂಚಕ ಶಕುನಗಳು, ii. ಅಶುಭ ಸೂಚಕ ಶಕುನಗಳು ಎಂಬುದಾಗಿ ವಿಂಗಡಿಸಿಕೊಳ್ಳಲಾಗಿದೆ.

**i. ಶುಭ ಸೂಚಕ ಶಕುನಗಳು:** ಗಾಣಿಗರು ಹೆಜ್ಜೆ ಹೆಜ್ಜೆಗೂ ಮಾತು ಮಾತಿಗೂ ಸಮಯ ನೋಡಿ ಶುಭ ಅಶುಭಗಳ ಲೆಕ್ಕಾಚಾರ ಮಾಡುವರು. ಹಲ್ಲಿಯು ವ್ಯಕ್ತಿಯ ಬಲಗೈ, ಬಲಗಾಲು ಮೇಲಿನಿಂದ ಹತ್ತಿ ಏರಿದರೆ ಶುಭ, ಮಾತನಾಡುವಾಗ ಹಲ್ಲಿ ಲೊಚಗುಟ್ಟಿದ್ದಕ್ಕೆಲ್ಲ "ಶಿವ.... ಶಿವ..." ಎಂದು ಹೇಳುತ್ತಾರೆ. ಹಲ್ಲಿ ಎರಡಕ್ಕಿಂತ ಹೆಚ್ಚು ಸಾರಿ ಲೊಚಗುಟ್ಟಿದರೆ ಅಂದುಕೊಂಡ ಕೆಲಸವಾಗುತ್ತದೆಂದೂ ಹಲ್ಲಿ ನುಡಿಯುವ ದಿಕ್ಕು, ಸಮಯ ನೋಡಿ ಶುಭ ಸೂಚಕವೆನ್ನುವರು.

ಗರ್ಭಿಣಿ ಸ್ತ್ರೀಗೆ ಚೇಳು ಕಡಿದರೆ, ಶುಭ ಶಕುನವೆಂದೇ ತಿಳಿಯುತ್ತಾರೆ. ಅವರಿಗೆ ಚೇಳಿನ ವಿಷ ಏರಿದಂತೆ, ಹಿಡಿದ ಕೆಲಸ ಕೈಗೂಡುವುದೆಂದು, ಗಂಡು ಮಗು ಜನಿಸುವುದೆಂದು, ಹುಟ್ಟಿದ ಮಗುವಿಗೆ ಅದರ ಜೀವಿತ ಕಾಲದಲ್ಲಿ ಎಷ್ಟೇ ಚೇಳು ಕಡಿದರೂ ಏನೂ ಆಗುವುದಿಲ್ಲವೆಂದು ಭಾವಿಸುತ್ತಾರೆ.

ನರಿ, ಟಗರು, ಬಸವ, ದೇವರ ಕೋಣ, ಗೂಳಿ, ಕರಡಿ, ಆಕಳ ಮುಖ ನೋಡಿದರೆ ಹಾವು ಮರ ಏರುವುದು ನೋಡಿದರೆ, ಅದು ಶುಭ ಶಕುನವೆಂದು ನೋಡಿದವನಿಗೆ ಒಳ್ಳೆಯದಾಗುವುದೆಂದು ತಿಳಿಯುತ್ತಾರೆ.

ಬೇಸಾಯ (ವ್ಯವಸಾಯ) ಸಂದರ್ಭದಲ್ಲಿ, ಕೆಲಸ ಮಾಡುವಾಗ ಲಕ್ಷ್ಮಿ (ಹಣ), ಬುತ್ತಿ ಸಿಕ್ಕರೆ ಅದು ಶುಭ ಶಕುನವೆನ್ನುತ್ತಾರೆ.

ಮನೆಯಲ್ಲಿ ಬೆಕ್ಕು ಮುಖ ತೊಳೆದರೆ, ಆ ದಿನ ಮನೆಗೆ ಬೀಗರು ಬರುವರೆಂದೂ, ಆಕಳು, ಹಂದಿ ಮನೆಯ ತಲ ಬಾಗಿಲು ದಾಟಿ ಒಳಗೆ ಪ್ರವೇಶಿಸಿದರೆ ಲಕ್ಷ್ಮೀ ಪ್ರಾಪ್ತಿಯಾಗುವುದೆಂದು ಹೇಳುವರು. ಮಲಗಿದ್ದ ನಾಯಿ ಕಿವಿ ಕೊಡವಿಕೊಂಡು ಓಟಕಿತ್ತರೆ ಅಂದುಕೊಂಡ ಕೆಲಸ ಬಲು ಬೇಗ ಆಗುತ್ತದೆ. ಹೊಸ್ತಿಲ ಬಲ ಭಾಗಕ್ಕೆ ಹೂವು ಬಿದ್ದರೆ ಇವೆಲ್ಲವನ್ನು ಶುಭ ಸೂಚಕ ಶಕುನವೆನ್ನುತ್ತಾರೆ.

**ii. ಅಶುಭ ಸೂಚಕ ಶಕುನಗಳು:** ಗಾಣಿಗರು ಯಾವುದೇ ಶುಭ ಕಾರ್ಯಕ್ಕೆ ಹೊರಟಾಗ ಹಾವು, ಬೆಕ್ಕು ಬಲದಿಂದ ಎಡಕ್ಕೆ ಹೋಗುವುದು ಹಲ್ಲಿ ಮೈ ಮೇಲೆ ಬೀಳುವುದು ಅಪಶಕುನವಾಗಿವೆ.

ಮನೆಯಲ್ಲಿ ಎರಡು ಬೆಕ್ಕುಗಳು ಕಚ್ಚಾಡುವುದನ್ನು, ಮನೆಯಲ್ಲಿದ್ದ ಆಕಳು, ಎಮ್ಮೆ, ಎತ್ತುಗಳು ಹಾಸೊಯ್ಯದರೆ, ಊರಲ್ಲಿ ಕಾಗೆಗಳು ಕಣಕಟ್ಟಿದರೆ, ರಾತ್ರಿಯ ವೇಳೆಯಲ್ಲಿ ಮನೆಯ ಮುಂದೆ ಅವಲಕ್ಕಿ ಪಕ್ಷಿ ವದರಿದರೆ ಇವುಗಳನ್ನು ಅಪಶಕುನವೆಂದೂ ತಿಳಿಯುತ್ತಾರೆ.

ಹಾವುಗಳು ತೊಳಕೆ (ಮಿಲನವು) ಬಿದ್ದಾಗ ನೋಡಿದರೆ ದೋಷಕಾರಕ ಅಪಶಕುನ ಎಂದು ತಿಳಿದಿರುವ ಇವರು ಇಂಥ ದೃಶ್ಯ ಕಂಡರೆ, ಹಲ್ಲಿ ಮೈ ಮೇಲೆ ಬಿದ್ದರೆ ಸ್ನಾನ ಮಾಡಿ ದೇವರ ಗುಡಿಗೆ ಹೋಗಿ ಪೂಜೆ ಪುನಸ್ಕಾರಗಳನ್ನು ಕೈಗೊಳ್ಳುವರು.

**೭.೫.೩. ಪಕ್ಷಿ ಸಂಬಂಧಿ ಶಕುನಗಳು**

ಪಕ್ಷಿ ಸಂಬಂಧಿ ಶಕುನಗಳಲ್ಲಿಯೂ i.ಶುಭ ಸೂಚಕ ಶಕುನಗಳು, ii. ಅಶುಭ ಸೂಚಕ ಶಕುನಗಳು ಎಂಬುದಾಗಿ ವಿಂಗಡಿಸಿಕೊಳ್ಳಲಾಗಿದೆ.

**i. ಶುಭ ಸೂಚಕ ಶಕುನಗಳು:** ಒಳ್ಳೆಯ ಕಾರ್ಯಕ್ಕೆಂದು ಹೊರಟಾಗ ಗಿಳಿ, ಪಾರಿವಾಳ, ನವಿಲು, ಟಗರು ಹುಂಜದ ಕಾಳಗಕ್ಕೆ ಹೋದವರು ರಕ್ತ ಸಿಕ್ತ ಹುಂಜ ಸಹಿತ ಎದುರಾದರೆ, ಎಡದಿಂದ ಬಲ ಭಾಗಕ್ಕೆ ಹೋದರೆ ಶುಭ ಸೂಚಕ ಶಕುನವೆಂದು ತಿಳಿಯುವರು.

ಸತ್ತ ವ್ಯಕ್ತಿಯ ಗೋರಿ ಮೇಲೆ ಮೂರು ದಿವಸ ಕೂಳಿನ ಎಡೆ ಹಾಕಿದಾಗ ಅದನ್ನು ಕಾಗೆ, ಗುಬ್ಬಿ, ಪಾರಿವಾಳ, ಹದ್ದುಗಳು ಬಂದು ಬಲು ಬೇಗ ತಿಂದರೆ, ಅದು ಶುಭ ಶಕುನವಾಗುತ್ತದೆ. ಅಂದರೆ ಸತ್ತ ವ್ಯಕ್ತಿಯು ಸ್ವರ್ಗಕ್ಕೆ ಸೇರಿದ್ದಾನೆಂದು ಗಾಣಿಗರು ತಿಳಿಯುತ್ತಾರೆ.

**ii. ಅಶುಭ ಸೂಚಕ ಶಕುನಗಳು:** ಮನೆಯ ಮೇಲೆ ಕಾಗೆಯೊಂದು ಕುಳಿತು ಒಂದೇ ಸಮನೆ ಅರಚುತ್ತಿದ್ದರೆ, ಕೆಟ್ಟ ಸುದ್ದಿ ಬರುವುದೆಂದು ಅಶುಭ ಸೂಚಕವೆಂದು ತಿಳಿಯುವರಲ್ಲದೆ, ಶುಭ ಕಾರ್ಯಕ್ಕೆ ಹೋಗುವಾಗ ಕಾಗೆಗಳು ದಾರಿಯುದ್ದಕ್ಕೂ ಅಡ್ಡಡ್ಡ ಅರಚುತ್ತಾ ಬಂದರೆ, ಅಶುಭವೆನ್ನುವರು, ತಮ್ಮ ಪ್ರಯಾಣವನ್ನು ಮುಂದೂಡುವರು.

ಪಕ್ಷಿಗಳ ಮೆಟ್ಟಿನ ದೃಶ್ಯವು ಅಶುಭ ಸೂಚಕವೆಂದೂ ಪಕ್ಷಿಗಳ ಮಲ ಮೂತ್ರ ತಲೆ ಮೇಲೆ, ಮೈ ಮೇಲೆ, ಬಟ್ಟೆಗಳ ಮೇಲೆ ಬಿದ್ದರೆ ಕೇಡೆಂದು ತಿಳಿದಿರುವರು. ರಾತ್ರಿಯಲ್ಲಿ ಅವಲಕ್ಕಿ ಪಕ್ಷಿ ಕೂಗಿದರೆ, ಹಿರಿಯರಿಗೆ ಆಪತ್ತು ಇಲ್ಲವೆ ಮನೆಗೆ ಕೇಡು ಬಡೆಯುತ್ತದೆ ಎಂದು ತಿಳಿಯುವರು. ಕಾಗೆ, ಹದ್ದು ಗುಡಿಸಲೊಳಕ್ಕೆ, ಮನಿಯೊಳಕ್ಕೆ ಪ್ರವೇಶಿಸಿದರೆ, ಅದನ್ನು ಅಪಶಕುನವೆಂದು ಭಾವಿಸಿ, ಗಾಣಿಗರು ಅವುಗಳನ್ನು ಮನೆಯಲ್ಲಿ ಯಾವುದೋ ಒಂದು ಮೂಲೆಯಲ್ಲಿ ಒಳಗೆ ಪ್ರವೇಶಿಸಿದ ಪಕ್ಷಿಗಳನ್ನು ಹಿಡಿದು ಸಾಯಿಸಿ ಉಗಿಯುತ್ತಾರೆ. ಈ ಮೇಲೆ ಹೇಳಿದ ವಿಚಾರಗಳು ಅಶುಭ ಸೂಚಕವೆಂದು ನಂಬಿದ್ದಾರೆ.

### ೭.೫.೪. ಕೆಲವು ಸಂಕೀರ್ಣ ನಂಬಿಕೆ ಹಾಗೂ ಶಕುನಗಳು

ಈ ಹಿಂದೆ ವಿವರಿಸಲಾದ ಯಾವ ವರ್ಗೀಕರಣಕ್ಕೂ ಸೇರದ ನಂಬಿಕೆಗಳನ್ನು ಸಂಕೀರ್ಣ ನಂಬಿಕೆಗಳೆಂದು ಗುರುತಿಸಲಾಗಿದೆ. ಗಾಣಿಗರಲ್ಲಿ ಶುಕ್ರವಾರ ಹಾಗೂ ಮಂಗಳವಾರ ಹೊಸ ಬಟ್ಟೆ ತೊಡುವುದಿಲ್ಲ. ಆ ದಿನವೇ ಜಾತ್ರೆ, ಹಬ್ಬ ಹರಿದಿನ ಇದ್ದು ಹೊಸ ಬಟ್ಟೆ ಉಡಲೇಬೇಕಾಗಿ ಬಂದರೆ ಅವುಗಳನ್ನು ನೀರಿಗೆ ಹಾಕಿ ತೊಟ್ಟರೆ ಒಳ್ಳೆಯದಾಗುವುದೆಂಬ ನಂಬಿಕೆಯಿದೆ. ಹಾಗೆ ಮಾಡಲು ಸಾಧ್ಯವಾಗದಿದ್ದರೆ ಹೊಸ ಬಟ್ಟೆಗಳನ್ನು ಎತ್ತು, ಆಕಳು, ಹೋರಿ, ಗೂಳಿ ಇವುಗಳ ಮೇಲೆ ಹಾಕಿ ನಂತರ ಬಟ್ಟೆಗಳನ್ನು ತೊಟಗೊಂಡರೆ ಏನೂ ಆಗುವುದಿಲ್ಲವೆಂಬುದು ಗಾಣಿಗರ ನಂಬಿಕೆ.

ಶುಕ್ರವಾರ ಹಾಗೂ ಮಂಗಳವಾರ ದಿನ ಹೆಣ್ಣು ಮಕ್ಕಳನ್ನು, ತವರು ಮನೆಯಿಂದ ಗಂಡನ ಮನೆಗೆ ಹೋಗಬಾರದೆಂಬ ನಂಬಿಕೆಯಿದೆ. ಬುಧವಾರ ದಿನ ಮಾತ್ರ ಶುಭ ಕಾರ್ಯ. ಸೂರ್ಯ ಹುಟ್ಟುವ ದಿಕ್ಕಿಗೆ ಕಾಲು ಚಾಚಿ ಮಲಗಬಾರದು, ಕತ್ತಲಲ್ಲಿ ಊಟ ತಿಂಡಿ ತಿನ್ನಬಾರದು, ಸಣ್ಣ ಮಕ್ಕಳು ಮನೆಯಲ್ಲಿ ಹೊಸ್ತಿಲ ಮೇಲೆ ಸೀನಬಾರದು. ಅದು ಅನಿಷ್ಟ. ಆಕಸ್ಮಿಕವಾಗಿ ಸೀನಿದರೆ, ಹೊಸ್ತಿಲ ಮೇಲೆ ನೀರು ಚಿಮುಕಿಸಬೇಕು, ಊದು ಗಡ್ಡಿ ಹಚ್ಚಿ ಇಡಬೇಕು. ಅಂತೆಯೇ ಹೊಸ್ತಿಲ ಮೇಲೆ ಯಾರೂ ಕುಂದ್ರುಬಾರದು. ಹಾಗೆ ಕುಳಿತರೆ ಸಾಲ ಹೆಚ್ಚಾಗುತ್ತದೆಂದು ನಂಬುತ್ತಾರೆ.

ಗಾಣಿಗರಲ್ಲಿ ಕೆಲವು ಮರ, ವಸ್ತು, ನೀರು, ಪ್ರಾಣಿಗಳನ್ನು ಭಯ ಭಕ್ತಿಯಿಂದ ಕಾಣುತ್ತಾರೆ. ಬನ್ನಿಮರ, ಬಿಲ್ವಪತ್ರೆ ಮರ, ಬೇವಿನ ಮರ, ಅರಳಿ ಮರ, ಹಳ್ಳ ಕೆರೆ, ನದಿ, ಎತ್ತು, ಆಕಳು, ದೇವರ ಕೋಣೆ, ಬಸವಿ ಆಕಳ, ಗೂಳಿ, ಬೀಸಾಕಲ್ಲು, ಗುಂಡಕಲ್ಲು ಇತ್ಯಾದಿಗಳ ಆರಾಧನೆಯಿಂದ ಇಷ್ಟ ಸಿದ್ಧಿ ಪ್ರಾಪ್ತಿಯಾಗುವುದೆಂಬ ನಂಬಿಕೆ ಇವರಲ್ಲಿದೆ.

ಮನೆಯಲ್ಲಿ ಚಿಕ್ಕ ಮಕ್ಕಳು ಒಂದೇ ಸಮನೆ ನಿದ್ದೆ ಮಾಡುತ್ತಿದ್ದರೆ, ಒಲೆಯ ಮೇಲಿನ ಹಂಚು ನಕ್ಕರೆ (ಹಂಚಿನ ಹಿಂದಿನ ಭಾಗ ಸಣ್ಣ ಸಣ್ಣ ಬೆಂಕಿಯ ಚುಕ್ಕಿ ಮೂಡಿರುವುದನ್ನೇ ನಗುತ್ತದೆ ಎಂದು ಹೇಳಲಾಗಿದೆ). ಬಾಗಿಲ ಚಿಲಕ ಇಲ್ಲವೆ ಕಬ್ಬಿಣ ಸಾಬೂನಿನ ಶಬ್ದವನ್ನು ಒಂದೇ ಸಮನೆ ಮಕ್ಕಳು ಮಾಡುತ್ತಿದ್ದರೆ, ಬೀಗರು ಬರುವರೆಂಬ ನಂಬಿಕೆಯಿದೆ. ತಂದೆ, ತಾಯಿ, ಹಾವು, ದೇವತೆ, ಪ್ರವಾಹ ಕನಸಿನಲ್ಲಿ ಬಂದರೆ ಒಳ್ಳೆಯದಾಗುವುದೆಂದು ನಂಬುವರು.

ಮಗುವಿನ ಹುಟ್ಟು ಕೂದಲು ವರ್ಷದೊಳಗಾಗಿ ತೆಗೆಸದಿದ್ದರೆ, ಶನಿಕಾಟ ಪ್ರಾರಂಭವಾಗುವುದೆಂದು ನಂಬುವರು. ಮಕ್ಕಳಿಗೆ ಹಲ್ಲು ಉದುರಿ ಬಿದ್ದಾಗ, ಸಗಣಿಯೊಳಗೆ ಹಲ್ಲನ್ನು ಸೇರಿಸಿ ಸಣ್ಣ ಉಂಡೆ ಮಾಡಿ, ಅವುಗಳನ್ನು (ಕೈಯಲ್ಲಿ ಹಿಡಿದು ಗರ್ಭಿಣಿಯಾದ ಹೆಂಗಸಿನ ಗುಡಿಸಲು ಅಥವಾ ಮನೆಯ ಅತ್ತಿರಿ) ಬಂದು "ನೀನು ಬೇಗ ಹಡೆಯುತ್ತೀಯೋ... ನನ್ನ ಹಲ್ಲು ಬೇಗ ಬರುತ್ತೋ..." ಎಂದು ಗುಡಿಸಲು ಅಥವಾ ಮನೆಯ ಮೇಲೆ ಎಸೆದು ತಿರುಗಿ ನೋಡದಂತೆ ತಮ್ಮ ಮನೆಗೆ ಹೋಗುತ್ತಾನೆ. ಹೀಗೆ ಮಾಡುವುದರಿಂದ ಹಲ್ಲು ಬೇಗ ಬರುತ್ತದೆಂಬ ನಂಬಿಕೆ ಇದೆ. ಹೆಣ್ಣು ಮನೆವಾರಗಳಾದ ಶುಕ್ರವಾರ ಇಲ್ಲವೆ ಮಂಗಳವಾರ, ಹುಣ್ಣಿಮೆ ಹಾಗೂ ಅಮವಾಸ್ಯೆ ದಿನ ಋತುಮತಿಯಾದರೆ ಅನಿಷ್ಟವೆಂದು ನಂಬಿಕೆಯಿಟ್ಟಿರುವರು.

ಹಬ್ಬ ಹರಿದಿನ, ಶಿವರಾತ್ರಿ, ಸಂಕ್ರಾಂತಿ, ಏಕಾದಶಿ ಶುಭ ದಿನದಂದು ಸತ್ತರೆ ಸ್ವರ್ಗದ ಬಾಗಿಲು ತೆರೆದಿರುವುದೆಂದು, ಮೋಸ, ವಂಚನೆ, ಸುಳ್ಳು, ಅನ್ಯಾಯ, ಅತ್ಯಾಚಾರ ಕಳ್ಳತನ, ವ್ಯಭಿಚಾರ, ಹಾದರ ಇತ್ಯಾದಿ ಕೆಟ್ಟ ಕೆಲಸಗಳನ್ನು ಮಾಡಿದರೆ ನರಕ ಪ್ರಾಪ್ತಿಯಾಗುವುದೆಂದೂ, ಅಂಥವರನ್ನು ಯಮಲೋಕದಲ್ಲಿ ಮೈ ಮೇಲೆ ಬರೆ ಹಾಕುವ, ನಾಲಿಗೆ ಕತ್ತರಿಸುವ, ಕಣ್ಣು ಕಿತ್ತಿಸುವ, ಕೈ ಕಾಲುಗಳನ್ನು ಕತ್ತರಿಸುವುದು, ಕಾಯಿಸಿದ ಎಣ್ಣೆ ಕೊಪ್ಪರಿಗೆಯಲ್ಲಿ ಹಾಕುವುದು... ಉಗ್ರ ಶಿಕ್ಷೆಗಳನ್ನು ಯಮಧರ್ಮರಾಜ ನೀಡುವನೆಂದೂ, ಕೊನೆಗೆ ತಮ್ಮನ್ನು ನಾಯಿಯಾಗಿ, ಕತ್ತೆಯಾಗಿ, ಸೆಗಣಿಯ ಉಳವಾಗಿ, ಕುರಿ, ನರಿ, ಕೋಳಿ, ಹಾವು, ಚೇಳು, ಕಾಡು ಹಂದಿಯಾಗಿ ಹುಟ್ಟಿಸುವನೆಂದು ಇವರು ನಂಬಿಕೆಯಿಟ್ಟಿರುವರು.

ಇನ್ನು ಗರ್ಭಿಣಿ ಸ್ತ್ರೀ ಸತ್ತರೆ, ದೆವ್ವ ಪೀಡೆ ಪಿಶಾಚಿಯಾಗುವಳೆಂಬ ನಂಬಿಕೆಯಿಂದಾಗಿ ಅವಳನ್ನು ಸುಡುತ್ತಾರೆ. ಪ್ರಕೃತಿದತ್ತವಾಗಿ ಸಂಭವಿಸುವ ಬಿಸಿಲು, ಮಳೆ, ಗಾಳಿ, ಸಿಡಿಲು, ಗುಡುಗು ವಿಶೇಷಾರ್ಥಗಳನ್ನು ಕಲ್ಪಿಸಿಕೊಳ್ಳುವ ಇವರು ಗಾಳಿ ಜೋರಾಗಿ ಬೀಸಿದರೆ ವರುಣ ದೇವನು ಕೋಪಿಸಿಕೊಂಡನೆಂದೂ, ಸಿಡಿಲು, ಗುಡುಗು ಉಂಟಾದರೆ ಅರ್ಜುನ ರಥ ಹೊಡೆಯುತ್ತಿರುವನೆಂದು ಮಿಂಚು ಅವನ ಚಾಟಿಯ ಏಟು ಎಂದು ನಂಬುತ್ತಾರೆ. ಮಳೆ ಬರುವಾಗ ಬಿಸಿಲು ಬಿದ್ದರೆ ನರಿ ಮದುವೆ, ಗುಬ್ಬಿ, ತೋಳಗಳ ಮದುವೆಯೆಂದು ನಂಬುತ್ತಾರೆ.

ಗಾಣಿಗರು ಊಟ ಮಾಡುವಾಗ ನೆತ್ತಿಗೇರಿದರೆ, ಇಲ್ಲವೆ ಬಿಕ್ಕಳಿಕೆ ಬಂದರೆ, ಯಾರೋ ತಮ್ಮನ್ನು ನೆನೆಸುವರೋ ಅಥವಾ ಬೈದುಕೊಳ್ಳುತ್ತಿರುವರೆಂದು, ಆಕಳಿಕೆ ಬರುತ್ತಿದ್ದರೆ, ಯಾರೋ ಬೀಗರು ತಮ್ಮನ್ನು ನೆನಪಿಸಿಕೊಳ್ಳುವರೆಂದೂ ತಿಳಿದಿರುತ್ತಾರೆ.

ಊಟ ಮಾಡುವಾಗ ಬಾಯಿ ಇಸ-ಇಸ ಆದರೆ ಕೆಟ್ಟ ಅಥವಾ ದುಃಖ ಸುದ್ದಿ ಕೇಳುತ್ತೇವೆ ಎಂದು ನಂಬುವರು. ಹಾವು ಕಚ್ಚಿದಾಗ, ಹಾವು ಕಚ್ಚಿತೆಂದು ಬಾಯಿ ಬಿಟ್ಟು ಹೇಳಿದರೆ, ವಿಷವು ದುಪ್ಪಟ್ಟಾಗುವುದೆಂದೂ, ಹಾವು ಕಚ್ಚಿಸಿಕೊಂಡವರು ಬಲು ಬೇಗ ಸಾಯುವರೆಂದು ತಿಳಿದಿರುವ ಇವರು, ಆಗ ಹುಳ ಮುಟ್ಟಿದೆ, ಬಳ್ಳಿ ಮುಟ್ಟಿತು ಎನ್ನುವರು. ಇದರರ್ಥ ಹಾವು ಕಚ್ಚಿದೆಯೆಂದರೆ ಅಶುಭ ಸೂಚಕವೆಂದು ತಿಳಿದಿರುವರು. ನವಿಲು, ಗಿಳಿ, ಅಳಿಲು, ಪಾರಿವಾಳ, ಉರ್ರಿ ತಿಂದ ಹತ್ತಿ ಹಣ್ಣು, ಪೇರಲಿ ಹಣ್ಣು, ಮಾವಿನ ಹಣ್ಣು, ಹಲಸಿನ ಹಣ್ಣು, ನೇರಳೆ ಹಣ್ಣು ಹಾಗೂ ಬಾರಿ ಹಣ್ಣು ಇವು ಬಲು ರುಚಿ ಬರುವವೆಂದೂ, ಅವು ಅರ್ಧ ತಿಂದಾಕಿದವುಗಳನ್ನು

ತಿಂದರೆ, ಹಲ್ಲು ನೋವು, ಹೊಟ್ಟೆ ನೋವು ಮತ್ತು ಬಾಯಿ ಹುಣ್ಣು ಕೂಡಾ ಆಗುವುದಿಲ್ಲವೆಂದು ನೊಣವು ವ್ಯಕ್ತಿಯ ಬಾಯಿಗೆ ಬಂದು ಹಗಲೆಲ್ಲ ಬಡಿದುಹೋಗುತ್ತಿದ್ದರೆ, ಸಿಹಿ ಊಟದ ಯೋಗವಿದೆಯೆಂದು ನಂಬಿರುವರು.

ಮಕ್ಕಳು ಮರಿ ಕುಂಟೆ, ಬಾಯಿ, ಕೆರೆ ಹಾಗೂ ಕೊಳ್ಳದೊಳಕ್ಕೆ ಕಲ್ಲು, ಮಣ್ಣು, ಕಟ್ಟಿಗೆ ಇತ್ಯಾದಿ ವಸ್ತುಗಳನ್ನು ಎಸೆಯುತ್ತಿದ್ದರೆ, "ಅವೆಲ್ಲವುಗಳನ್ನು ಎಸೆಯುವ ಬದಲು ನೀನೇ ನೀರಿಗೆ ಬೀಳು" ಎಂದು ಗಂಗಮ್ಮ ತಾಯಿ ಶಪಿಸುವಳೆಂದು ತಿಳಿದಿರುವರು. ಇವು ಗಾಣಿಗರ ಬದುಕಿನಲ್ಲಿ ಕಂಡು ಬರುವ ನಂಬಿಕೆ ಹಾಗೂ ಶಕುನಗಳು. ಇವುಗಳಲ್ಲಿ ಕೆಲವು ಇವರವೇ ಆದ ನಂಬಿಕೆ, ಶಕುನಗಳಾಗಿವೆ. ಉಳಿದವುಗಳು ಸಾರ್ವತ್ರಿಕವಾದವೆನಿಸುತ್ತವೆ ಎಂಬುದಾಗಿ ಸಮುದಾಯದ ಹಿರಿಯರಿಂದ ತಿಳಿಯಲಾಗಿದೆ.

**ಟಿಪ್ಪಣಿಗಳು**

೧. ಹಾ.ಮಾ. ನಾಯಕ್, ಜಾನಪದ ಸ್ವರೂಪ, ೧೯೯೯, ಪು.೪೨

೨. ಡಾ. ಎಚ್.ಜೆ. ಲಕ್ಕಪ್ಪಗೌಡ, ಜಾನಪದ ಕೈಪಿಡಿ, ೧೯೯೭, ಪು.೯೫

೩. ಅದೇ, ಪು.೯೬

೪. ಡಾ. ಎಸ್.ಜಿ. ಇಮ್ರಾಪೂರ, ಜನಪದ ಒಗಟುಗಳು, ೧೯೭೭, ಪು.೧೦೩

೫. ಡಾ.ಎಂ.ಎಸ್. ಲಠ್ಠೆ, ಉತ್ತರ ಕರ್ನಾಟಕದ ಒಡಪುಗಳು, ಪು.೧೫

೬. ಕಿಟಲ್ ಕೋಶ, ಸಂಪುಟ ೧, ಪು.೩೧೧

೭. ಎಂ.ಎನ್. ವಾಲಿ, ಸಿರಿಗನ್ನಡ ಒಡಪುಗಳು, ೧೯೯೧, ಪು.೨೧

೮. ಪ್ರೊ.ಡಿ. ಲಿಂಗಯ್ಯ ಕೆ.ಆರ್. ಸಂಧ್ಯರೆಡ್ಡಿ, ಜಾನಪದ: ಸ್ವರೂಪ ಮತ್ತು ಸಾಹಿತ್ಯ, ೨೦೦೬, ಪು.೬೧

೯. ಡಾ. ಎಲ್ಲಪ್ಪ ಕೆ.ಕೆ. ಪುರ, ದೊಕ್ಕಲು ಮಕ್ಕಳು: ಒಂದು ಅಧ್ಯಯನ, ೧೯೯೩, ಪು.೧೩೫

೧೦. ಡಿ.ಕೆ. ರಾಜೇಂದ್ರ (ಸಂ), ನಮ್ಮ ಸುತ್ತಿನ ನಂಬಿಕೆಗಳು, ೧೯೭೩, ಪು.೨೮

- * ಹೆಣ್ಣಿನ ಬೆನ್ನಿಗೆ, ಅಂಗಾಲಿಗೆ, ತಲೆಯಲ್ಲಿ ಸುಳಿ ಇರಬಾರದು. ಒಂದು ವೇಳೆ ಇದ್ದರೆ ಚಾಳಿ, ಸುಳಿ ಸುಮಾರೆಂದು ಜರಿದು ವಿವಾಹ ಮಾಡಿಕೊಳ್ಳುವುದಿಲ್ಲ.
- * ಕಾಗೆಯು ಸ್ವ-ಇಚ್ಛೆಯಿಂದ ಯಾವುದೇ ಜಾತಿ, ಹೊಸ್ತಿಲು ದಾಟಿ ಒಳಗಡೆ ಪ್ರವೇಶಿಸಿದರೆ, ಅದನ್ನು ಅಲ್ಲೇ ಜೀವಂತವಾಗಿ ಮನೆಯ ಒಂದು ಮೂಲೆಯ ಹೂಳುವುದು ಇವರಲ್ಲಿ ಇಂದಿಗೂ ಇದೆ. ಹಾವುಗಳು ತೊಳಕಿ ಹಾಕಿಕೊಂಡಿದ್ದನ್ನು ಕಂಡ ವ್ಯಕ್ತಿ ತಾನು ಸತ್ತ ಸುದ್ದಿಯನ್ನು ತನ್ನ ತಂದೆ, ತಾಯಿ ಮಕ್ಕಳು ಹಾಗೂ ಸಮೀಪದ ಬಂಧುಬಳಗಕ್ಕೆ ಸುದ್ದಿಯನ್ನು ಮುಟ್ಟಿಸುವ ವ್ಯವಸ್ಥೆಯನ್ನು ಮಾಡಬೇಕು. ಸುದ್ದಿ ಕೇಳಿದವರು ಅತ್ತು ಕರೆದರೆ ಅಲ್ಲಿಗೆ ದೋಷ ಪರಿಹಾರವಾಗುತ್ತದೆ. ಹಾವುಗಳು ತೊಳಕಿ ಹಾಕಿಕೊಂಡದ್ದನ್ನು ಕಂಡ ವ್ಯಕ್ತಿಯು ಗುಡಿ, ಕೆರೆ ಹತ್ತಿರ, ರೋಡಿನ ಪಕ್ಕದಲ್ಲಿ ಕುಳಿತಿರಬೇಕು. ಸುದ್ದಿ ಮುಟ್ಟಿಸಿದ ವ್ಯಕ್ತಿಯೇ ಬಂಧು ಬಳಗದವರನ್ನೆಲ್ಲ ಅಲ್ಲಿಗೆ ಕರೆದು ತರುವನು. ನಂತರ ಅವನನ್ನು ಮನೆಗೆ ಕರೆತರಬೇಕು.

* ಕಾಗೆಯ ಮೆಟ್ಟು ನೋಡಿದ ವ್ಯಕ್ತಿಯು ಸತ್ತ ಸುದ್ದಿಯನ್ನು ಮಕ್ಕಳು, ತಂದೆ, ತಾಯಿ ಎಲ್ಲಾ ಬಳಗಕ್ಕೂ ತಲುಪಿಸುವ ವ್ಯವಸ್ಥೆ ಮಾಡಿಸುತ್ತಾನೆ. ಇವರೆಲ್ಲರೂ ಅತ್ತು ಕರೆದರೆ ಅಲ್ಲಿಗೆ ದೋಷ ನಿವಾರಣೆಯಾಗುವುದೆಂದು ಭಾವಿಸುತ್ತಾರೆ.
* ಕಾಗೆ ಮೆಟ್ಟು ಕಂಡ ವ್ಯಕ್ತಿಯು ಕೆರೆ ಮುಂತಾದ ಸ್ಥಳಗಳಲ್ಲಿ ಕುಳಿತಿರಬೇಕೆಂಬ ನಿಯಮವಿದೆ. ಇವರೆಲ್ಲರು ಅಲ್ಲಿಗೆ ಹೋಗಿ ಅವನನ್ನು ಮನೆಗೆ ಕರೆದುಕೊಂಡು ಬರುವರು.

# ಅಧ್ಯಾಯ ೮

## ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು


೮.೧. ವೃತ್ತಿಸಂಬಂಧ ಉಪಕರಣಗಳು

೮.೨. ಅವಲಂಬಿತ ವೃತ್ತಿ

೮.೩. ಹಿಂದಿನ ಕಾಲದ ಸಮಾಜದಲ್ಲಿ ಗಾಣಿಗರ ಸ್ಥಾನಮಾನ

೮.೪. ಕೈಗಾರಿಕೀಕರಣದ ಪರಿಣಾಮ ಗಾಣಿಗರ ಇಂದಿನ ಸ್ಥಾನಮಾನ ಮತ್ತು ಸಂಬಂಧಗಳು

೮.೫. ಗಾಣಿಗರು ಮತ್ತು ಆಧುನಿಕ ಜಗತ್ತು

## ೮.೧. ಗಾಣಿಗರ ಉಪಕರಣಗಳು

ಗಾಣಿಗರ ವೃತ್ತಿ ಸಂಬಂಧೀ ಎಂದಾಗ ಇಲ್ಲಿ ಅವರ ಗಾಣದ ಕೆಲಸಕ್ಕೆ ಅವಶ್ಯವಾದ ಸಾಮಗ್ರಿಗಳನ್ನಷ್ಟೇ ಪರಿಗಣಿಸಲಾಗಿದೆ. ಅವುಗಳಲ್ಲಿಯೂ ಮುಖ್ಯವಾಗಿ ರಚಿಸಿಕೊಂಡ, ಮೂಲ ವೃತ್ತಿಯ, ಅಂದರೆ ಪಾರಂಪರಿಕವಾಗಿ ಎಣ್ಣೆ ತಯಾರಿಸುವಲ್ಲಿ ಉಪಯೋಗಿಸಲ್ಪಡುವ ಉಪಕರಣ(ಸಾಮಗ್ರಿ)ಗಳ ವಿವರ ಈ ಕೆಳಗೆ ನೀಡಲಾಗಿದೆ.

೧. **ಕುಸುಬಿಕಲ್ಲು:** ಕುಸುಬು ಒಡೆಯುವ ಕಲ್ಲು

೨. **ಒಡಿಕಲ್ಲು:** ಎಣ್ಣೆಕಾಳುಗಳನ್ನು ಬೇಳೆಯಾಗುವಂತೆ ಮಾಡಲು ಬಳಕೆಯಾಗುವ ಕಲ್ಲು, ಇದು ಬೀಸುಕಲ್ಲಿನ ಆಕಾರದಂತಿದ್ದು ಗಾತ್ರದಲ್ಲಿ ಅದಕ್ಕಿಂತ ದೊಡ್ಡದಿರುತ್ತದೆ.

೩. **ಅಗಳಿ:** ಡೊಂಕಿಯನ್ನು ಕತ್ತರಿಕಟಿಗೆಗೆ ಸೇರಿಸುವ ಸಾಧನ: ಕಟ್ಟಿಗೆಯ ಚಿಲುಕ

೪. **ಒಳ್ಳ:** ಗಾಣದ ಕಲ್ಲಿನ ಮಧ್ಯಭಾಗ, ಗಾಣದ ಕಲ್ಲಿನ ಮಧ್ಯದಲ್ಲಿ ೧.೫ ಅಡಿ ಆಳದ ರಂಧ್ರ ಇರುತ್ತದೆ. ಅದರೊಳಗೆ ಕಣೆ ಇಳಿಸಿರುತ್ತಾರೆ. ಗಾಣದಕ್ರಿಯೆ ಮುಗಿದನಂತರ ಇದರೊಳಗೆ ಎಣ್ಣೆ ಶೇಖರಣವಾಗುತ್ತದೆ. ಒರಳು>ಒಳ್ಳು 'ಗತ್ತಿ'.

೫. **ಕಣೆವು:** ನೋಕಣಿ

೬. **ಕಣಿ:** ವರ್ತುಲಾಕಾರವಾಗಿರುವ ಕಟ್ಟಿಗೆಯ ತುಂಡು. ಇದು ತುಂಬ ಬಿರುಸಾಗಿರುತ್ತದೆ. ೬.೫ ಫೂಟ್ ಉದ್ದವಿರುತ್ತದೆ. ಇದರ ಹಿಂಭಾಗದಲ್ಲಿ ಕಬ್ಬಿಣದ ಗಾಲಿಯನ್ನು ಸಿಕ್ಕಿಸಿರುತ್ತಾರೆ. ಎಣ್ಣೆ ಕಾಳುಗಳನ್ನು ಕಣಿಯ ಸಹಾಯದಿಂದ ಅರೆಯುತ್ತಾರೆ.

೭. **ಕತ್ತರಿ:** ಗಾಣದ ಬಾರವನ್ನು ಹೋರುವ ಚೌಕಾಕಾರದ ಕಟ್ಟಿಗೆಯ ಕೊರಡು, ಇದು ೫ ಪೂಟು ಉದ್ದವಾಗಿದ್ದು, ೧ ಮಳಾ ಅಗಲವಾಗಿರುತ್ತದೆ. ಎತ್ತು ಮತ್ತು ಕಣಿಗೆ ಇದನ್ನು ಸೇರಿಸಿರುತ್ತಾರೆ. 'ಕತ್ತರಿಕಟಿಗೆ/ದಿಂಡು 'ಕತ್ತರಿ ಕಟಿಗೆ/ದಿಂಡು-ನೋ'ಕತ್ತರಿ'

೮. **ಕರಿ:** ನೂಲಿನಿಂದ ಮಾಡಿರುವ ಸಾಧನ, ಗಾಣದ ಕ್ರಿಯೆ ಮುಗಿದ ನಂತರ ಎಣ್ಣೆ ಒರಳಿನಲ್ಲಿ ಶೇಖರವಾಗುತ್ತದೆ. ಶೇಖರವಾದ ಎಣ್ಣೆಯನ್ನು ಕರಿಯ ಸಹಾಯದಿಂದ ತೆಗೆಯುತ್ತಾರೆ.

೯. **ಕಲ್:** ಅಂಗಡಿಕಲ್/ಗಾಣದಕಲ್ಲು ಗಾಣದ ಕೆಳಭಾಗವಾದ ತಾಳದ ಸುತ್ತಲು ಎಳೆಯುವ ಕಲ್ಲು.

೧೦. **ಜಗಲ್ಲ/ದಿಂಡಕಲ್:** ಎಣ್ಣೆಕಾಳುಗಳು ನುರಿಯುವಂತೆ ಕತ್ತರಿ ಕಟ್ಟಿಗೆಯ ಮೇಲೆ ಭಾರ ಬೀಳಲು ೧ ಅಥವಾ ೧.೫ ಕ್ವಿಂಟಲ್ ಭಾರವಾದ ಕಲ್ಲು. ಜಗುವ ಕಲ್ಲು>ಗಜಲ್ಲ.

೧೧. **ಕಾಳು:** ಧಾನ್ಯ

೧೨. **ಕಳಿಕೀಲ:** ನೊಗಕ್ಕೆ ಅಂಟಿಕೊಂಡಿರುವ ಕಟ್ಟಿಗೆಯ ತುಂಡುಗಳು (ಬೆಣೆ) ಗಾಣ ನಡೆಸಲು ಎತ್ತುಗಳ ಹೆಗಲಿಗೆ ಕೀಲನ್ನು ಹಾಕಿರುತ್ತಾರೆ.

೧೩. **ನುಚಗಾಳು:** ಎಣ್ಣೆಕಾಳುಗಳನ್ನು ಹೊಡೆಯುವಾಗ ಬೇಳೆಯನ್ನಾಗಿ ಪರಿವರ್ತಿಸುವ ಕಾಳು.

೧೪. **ಒಣಗಳ:** ಎಣ್ಣೆಕಾಳುಗಳನ್ನು ಒಡೆಯುವ ಮೊದಲು ಒಣಗಿಸಿ ಹದಮಾಡುವ ಕಾಳು.

೧೫. **ಹಿಟಗಾಳ:** ಎಣ್ಣೆ ತೆಗೆಯಲು ಸಿದ್ಧವಾಗುವ ಬೇಳೆ ಇದಕ್ಕೆ ನೀರು ಹಚ್ಚಿ ಗಾಣದ ಕಲ್ಲಿನಲ್ಲಿ ಹಾಕುತ್ತಾರೆ.

೧೬. **ಕುರ್ಪಿ:** ಕೆತ್ತುವ ಸಾಧನ. ಹಿಂಡಿಯ ಅಕ್ಕ ಪಕ್ಕದ ಭಾಗಗಳನ್ನು ಕೆತ್ತಿ ಸಮ ಮಾಡಲು ಬಳಕೆಯಾಗುವ ಕಬ್ಬಿಣದ ಸಾಧನ. ಕುರುಪಿ>ಕುರ್ಪಿ.

೧೭. **ಕೊಂಕಿ:** ನೋ 'ಡೊಂಕಿ'

೧೮. **ಕೊಂಡಿಮರ:** ನೋ 'ಡೊಂಕಿ'

೧೯. **ಗತ್ತಿ:** ನೋ 'ಒಳ್ಳ'

೨೦. **ಗಾಣಬರಿ:** ಗಾಣದಕ್ರಿಯೆ ನಡೆಯುವ ಆವರಣ/ಮೈದಾನ.

೨೧. **ಗೊಬ್ಬಿ:** ನೋ 'ಚಂಡಿಕಿ'

೨೨. **ಚಂಡಿಕಿ:** ಕಣೆಯ ಮೇಲ್ಭಾಗ, ಮಿಗುರಿಯಂತಿರುತ್ತಿರುತ್ತದೆ. ಗಾಣದ ಕಲ್ಲಿನಲ್ಲಿ ಎಣ್ಣೆಶೇಖರಣೆಯಾದಾಗ ಕಣೆಯನ್ನು ಎತ್ತಲು ಇದನ್ನು ಉಪಯೋಗಿಸುತ್ತಾರೆ (ಚಂಡಿಕೆ ಮೇಲೆ ಹಗ್ಗಹಾಕಿ ಕಣೆ ಎತ್ತುತ್ತಾರೆ). ಗೊಬ್ಬಿ.

೨೩. **ಚಟ್ಟ:** ಎಣ್ಣೆ ಕಾಳುಗಳ ಬೀಜ ತೆಗೆದು ಒಣಗಿಸಿಟ್ಟು ಹೀಚು; ಒಂದು ವಿಧದ ಸಿಪ್ಪೆ ಇದನ್ನು ಉರುವಲುವಿನಂತೆ ಬಳಸುತ್ತಾರೆ. 'ಕುಸುಬಿಚಟ್ ಚಟ್ಟು>ಚಟ್.

೨೪. **ಜಲ್ಲಿ:** ಬಿದಿರು, ಸಿಂಧಿ ಮುಂತಾದವುಗಳಿಂದ ಮಾಡಿದ ದೊಡ್ಡ ಬುಟ್ಟಿ.
ಎಣ್ಣೆಕಾಳುಗಳನ್ನು ಹಾಗೂ ಚಟ್‌ವನ್ನು ಹಾಕಿಡಲು ಇದು ಬಳಕೆಯಾಗುತ್ತದೆ ಇದಕ್ಕೆ ಎತ್ತುಗಳ ಸೆಗಣಿ ಹಚ್ಚಿ ಸಾರಿಸುತ್ತಾರೆ.

೨೫. **ಕುಸುಬಿ ಜಲ್ಲಿ:** ಕುಸುಬಿ ಹಾಕಿಡುವ ಜಲ್ಲಿ (೫೦ ಶೇರ್)

೨೬. **ಹಿಟಕಾಳು ಜಲ್ಲಿ:** ಹಿಟಕಾಳನ್ನು ಹಾಕಿಡುವ ಜಲ್ಲಿ.

೨೭. **ಡೊಂಕಿ:** ಕಣೆ ಮತ್ತು ಕತ್ತರಿ ಕಟ್ಟಿಗೆಯನ್ನು ಹಗ್ಗದ ಸಹಾಯದಿಂದ ಜೋಡಿಸುವ ವಕ್ರವಾಗಿರುವ ಮರದ ದುಂಡು (ಡೊಂಕು>ಕೊಂಕೆ)>ಡೊಂಕಾ 'ಕೊಂಕಿ' ಕೊಂಡಿಮರ.

೨೮. **ತಟ್:** ಗಾಣದ ಎತ್ತಿನ ಮುಖಕ್ಕೆ ಹಾಕುವ ಗೋಣಿಚೀಲ, ಗಾಣದ ಕ್ರಿಯೆ ನಡೆಯುವಾಗ ಎತ್ತಿನ ಕಣ್ಣುಗಳು ತಿರುಗಬಾರದೆಂದು ಇದನ್ನು ಉಪಯೋಗಿಸುವರು.

೨೯. **ದುಪಟ್ಟಿ:** ಕುಸುಬಿ ಬೇಳೆ ಹಸನ ಮಾಡಲಿಕ್ಕೆ ಬಳಸುವ ಬಟ್ಟೆಯಿಂದ ಸಿದ್ಧಪಡಿಸಿದ ಸಾಧನ. ಹಿಟಕಾಳಗೆ ನೀರು ಸಿಂಪಡಿಸಿ (ಚಿಮುಕಿಸಿ) ದುಪಟಿಯಿಂದ ತಿಕ್ಕುತ್ತಾರೆ.

೩೦. **ನಗ:** ಬೇಸಾಯ ಮಾಡುವಾಗ ಎತ್ತು ಕೋಣ ಮೊದಲಾದವುಗಳು ಹೆಗಲ ಮೇಲೆ ಹೇರುವ ಮರದ ದಿಂಡು ನೊಗ>ನಗಾ.

೩೧. **ಗಾಣದ ನಗಾ:** ಗಾಣದ ಎತ್ತಿಗೆ ಕಟ್ಟಿದ ನೊಗ.

೩೨. **ಬೆಣೆ ೧:** ಆಳದ ಉದ್ದವಾದ ಹಗ್ಗವನ್ನು ಬಿಗಿಗೊಳಿಸಲು ಬಳಕೆಯಾಗುವ ಕಟ್ಟಿಗೆಯ ಸಾಧನ. ೧.೫ ಅಡಿ ಉದ್ದ ಇರುತ್ತದೆ.

೩೩. **ಬೆಣೆ ೨:** ಗಾಣದ ಕಲ್ಲಿನ ಸುತ್ತಲು ಬಳಕೆಯಾಗುವ ಡೊಂಕಾಕಾರದ ಕಟ್ಟಿಗೆಯ ಸಾಧನ. ಕತ್ತರಿ ಕಟ್ಟಿಗೆ ಹಾಗೂ ಗಾಣದ ಕಲ್ಲನ್ನು ಸೇರಿಸಲು ಇದು ಬಳಕೆಯಾಗುತ್ತದೆ.

೩೪. **ಬೆಣೆ ೩:** ಎಣ್ಣೆ ಬರುವಾಗ ಕಣೆ ಕೀಳಲು ಬಳಕೆಯಾಗುವ ಕಟ್ಟಿಗೆಯ ಸಾಧನ. ಈ ಬೆಣೆಗೆ ಹಗ್ಗ ಹಾಕಿ ಕಣೆ ಕೀಳುತ್ತಾರೆ. ಇದು ೨ ಗೇಣು ಉದ್ದವಾಗಿದ್ದು ತುಂಬ ಬಿರುಸಾಗಿರುತ್ತದೆ.

೩೫. **ಮರಾ:** ಎಣ್ಣೆಕಾಳುಗಳನ್ನು ಕೇರಲು, ಹಸನು ಮಾಡಲು ಬಳಕೆಯಾಗುವ ಬಿದಿರಿನ ಸಾಧನ. ಗಾಣಿಗರ ಮೊರಗಳು ಸಾಮಾನ್ಯ ಮೊರಗಳಿಗಿಂತ ದೊಡ್ಡದಾಗಿರುತ್ತವೆ. ಮೊರ>ಮರಾ.

೩೬. **ಮಾಲಿಗಂಬ:** ಕತ್ತರಿಕಟ್ಟಿಗೆಯನ್ನು ಆಳದ ಹಗ್ಗಕ್ಕೆ ಸೇರಿಸುವ ಕಟ್ಟಿಗೆಯ ತುಂಡು.

೩೭. **ಮಾಲಿ:** ನೋಹಗ್ಗ, 'ಆಳದ ಹಗ್ಗ'

೩೮. **ಮಿಣೆ:** ಹೊಸೆದ ದಪ್ಪ ಹಗ್ಗ

೩೯. **ಜದಿಮಿಣೆ:** ಗಾಣದ ಕಲ್ಲಿನ ಸುತ್ತಲು ತಿರುಗುವ ದಪ್ಪಹಗ್ಗ, ಇದು ಕತ್ತರಿ ಕಟ್ಟಿಗೆಯ ಸಮತೋಲನತೆಯನ್ನು ಕಾಪಾಡುತ್ತದೆ.

೪೦. **ಸರಡಬ್ಬಿ:** ಗಾಣದ ಸುತ್ತಲೂ ಎತ್ತು ತಿರುಗುವಾಗ ಅದರ ಬಾಯಿಯ ಜೊಲ್ಲು ಗಾಣಬರಿಯಲ್ಲಿ ಬೀಳದಂತೆ ಎತ್ತುಗಳಬಾಯಿಗೆ ಹಾಕುವ ಡಬ್ಬಿ.

೪೧. **ಸರಪಳಿ:** ಕೊಂಡಿಗಳಿಂದ ಕೂಡಿದ ಲೋಹದ ಹಗ್ಗ, ನೊಗ ಹಾಗೂ ಕತ್ತರಿ ಕಟ್ಟಿಗೆಗೆ ಇದನ್ನು ಸೇರಿಸುತ್ತಾರೆ.

೪೨. **ಸಾಣ್ಗಿ ೧:** ಧಾನ್ಯಗಳನ್ನು ಹಸನು ಮಾಡುವುದಕ್ಕೆ ಬಳಸುವ ರಂಧ್ರಗಳುಳ್ಳ ಸಾಧನ. ಈ ಸಾಣೆಗೆ ಮಾಮೂಲು ಸಾಣೆಗೆಗಿಂತ ದೊಡ್ಡದಿರುತ್ತದೆ. ರಂಧ್ರಗಳು ದೊಡ್ಡದಿರುವುದರಿಂದ ದೊಡ್ಡ ಕಣ್ಣಿನ ಪಾಣೆಗೆ ಎಂದು ಕರೆಯುತ್ತಾರೆ.

೪೩. **ಸಾಣ್ಗಿ ೨:** ಎಣ್ಣೆಕಾಳುಗಳ ಬೇಳೆಗಳನ್ನು ಹಸನ ಮಾಡಲು ಬಳಕೆಯಾಗುವ ಸಾಧನ.

೪೪. **ಹಗ್ಗ:** ನೂಲನ್ನು ಹೊಸೆದು ತಯಾರಿಸಿದ ಹುರಿ.

೪೫. **ಆಳಗ್ಗ:** ಡೊಂಕಿ, ಕತ್ತರಿ ಕಟ್ಟಿಗೆ ಹಾಗೂ ಚಂಡಿಕೆಯನ್ನು ಸೇರಿಸುವ ದಪ್ಪನೆಯ ಹಗ್ಗ.

೪೬. **ಚಿಪ್ಪ:** ಆಳಗ್ಗದ ಮುಂಭಾಗ, 'ಮಾಲಿ'.

೪೭. **ಒರಸಗ್ಗ:** ಎತ್ತು ಹಾಗೂ ಕತ್ತರಿ ಕಟ್ಟಿಗೆಯನ್ನು ಸೇರಿಸುವ ಹಗ್ಗ, ಇದಕ್ಕೆ ಎಣ್ಣೆಯನ್ನು ಹಚ್ಚಿರುತ್ತಾರೆ.

೪೮. **ಹಾರಿ:** ಒಂದು ಬಗೆಯ ಕಬ್ಬಿಣದ ಉಪಕರಣ, ಐದು ಪೂಟ್ ಉದವಾಗಿದ್ದು, ತುದಿಚೂಪಾಗಿರುತ್ತದೆ. ಗಾಣದ ಕ್ರಿಯೆ ಮುಗಿದ ನಂತರ ಒರಳಿನಲ್ಲಿರುವ ಹಿಂಡಿಯನ್ನು ತೆಗೆಯಲು ಇದನ್ನು ಉಪಯೋಗಿಸುತ್ತಾರೆ. ಹಾಕಿ>ಹಾರಿ.

೪೯. **ಹಿಂಡಿ:** ಎಣ್ಣೆಕಾಳುಗಳಿಂದ ಎಣ್ಣೆಯನ್ನು ತೆಗೆದ ಮೇಲೆ ಉಳಿಯುವ ಗಂಟಾದ ವಸ್ತು.

೫೦. **ಕುಸುಬಿಹಿಂಡಿ:** ಕುಸುಬಿಗಾಣದ ಹಿಂಡಿ, ಇದು ತುಂಬಿ ಬಿರುಸಾಗಿರುತ್ತದೆ.

೫೧. **ಶೇಂಗಾ ಹಿಂಡಿ:** ಶೇಂಗಾ ಗಾಣದ ಹಿಂಡಿ, ಇದು ತುಂಬ ಮೃದುವಾಗಿರುತ್ತದೆ. ದನಗಳಿಗೆ ಕಾಯಿಲೆಯಾದಾಗ ಈ ಹಿಂಡಿಗಳನ್ನು (ಔಷಧದಂತೆ) ಉಪಯೋಗಿಸುತ್ತಾರೆ.

೫೨. **ಹಿಡಿ ಕೈ:** ಡೊಂಕಿಯನ್ನು ಹಿಡಿಯಲು ಇಳಿಸಲು ಬಳಸುವ ಕಟ್ಟಿಗೆಯ ಸಾಧನ.

೫೩. **ಹುಗಲ್:** ಕತ್ತರಿ ಕಟ್ಟಿಗೆಯ ತೂತು. ಇದರಲ್ಲಿ ಆಳಗ್ಗವನ.[೧]

## ೮.೨. ಅವಲಂಬಿತ ವೃತ್ತಿ

ಪಟ್ಟಣಗಳಲ್ಲಿ ಅಲ್ಲಲ್ಲಿ ವಿರಳವಾಗಿ ಅಂಗಡಿ ಮಳಿಗೆಗಳನ್ನು ತೆರೆಯುವರು ಕೆಲವರಿದ್ದಾರೆ. ಹಳ್ಳಿಗಳಲ್ಲಿ ಸಾಂಪ್ರದಾಯಿಕ ವೃತ್ತಿ ಮುಂದುವರಿಸಿಕೊಂಡು ಹೋಗಲಾಗದ ಕೆಲವರು ನಗರಗಳಿಗೆ ವಲಸೆ ಹೋಗಿ ಜೀವನೋಪಾಯಕ್ಕೆ ನಾನಾ ನಮೂನಿ ಕೆಲಸಗಳನ್ನು ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿರುವವರು ಸಾಂಪ್ರದಾಯಿಕ ವೃತ್ತಿಗೆ ಪೂರ್ತಿ ಶರಣು ಹೊಡೆದು ಕೃಷಿಗೆ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ.[೨] ಗಾಣಿಗರು ಹೀಗೆ ಅವಲಂಬಿಸಿರುವ ಇತರೆ ವೃತ್ತಿಗಳನ್ನು ಕುರಿತು ಚಿಂತಿಸಬಹುದಾಗಿದೆ.

ಗಾಣದಿಂದ ಎಣ್ಣೆ ತೆಗೆಯುವ ವೃತ್ತಿಯನ್ನು ಬಿಟ್ಟರೆ ಗಾಣಿಗರು ನಂತರದ ಮುಖ್ಯ ಕೆಲಸ ರೈತಾಪಿ ಬದುಕಿಗೆ ಸಂಬಂಧಿಸಿದ್ದು. ಬಯಲು ಸೀಮೆಯ ವ್ಯವಸಾಯದಲ್ಲಿ ಹೆಚ್ಚಾಗಿ ತೊಡಗಿರುವ ಗಾಣಿಗರು ಅಲ್ಲಲ್ಲಿ ನೀರಾವರಿಗೂ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಾರೆ. ಬಹುಸಂಖ್ಯಾತ ಗಾಣಿಗರಿಗೆ ಸ್ವಂತ ಜಮೀನಿಲ್ಲ. ಇಂತವರೆಲ್ಲ ಜಮೀನ್ದಾರರ ಹೊಲಗದ್ದೆಗಳಿಗೆ ಕೂಲಿ ಹೋಗುತ್ತಾರೆ. ಜೋಳ, ಶೇಂಗಾ, ಅಲಸಂದಿ ಮುಂತಾದವುಗಳನ್ನು ಬಿತ್ತುವುದು. ಸೂರ್ಯಪಾನ, ಮೆಣಸಿನ ಬೀಜ, ಹತ್ತಿ ಇತ್ಯಾದಿ ಬೀಜಗಳನ್ನು ಊರುವುದು, ಭತ್ತದ ಸಸಿ ನಾಟಿ ಮಾಡುವುದು, ಮೆಣಸಿನಗಿಡ, ಜೋಳಕೋಯ್ಯಲು, ಉಳ್ಳಾಗಡ್ಡಿ ಕೀಳಲು, ಕಳೆವು (ಹುಲ್ಲು) ಕೀಳಲು ಹೋಗುವುದು ಮುಂತಾದ ಕೆಲಸಗಳಿಗೆ ಸಾಮಾನ್ಯವಾಗಿ ಹೆಣ್ಣು ಮಕ್ಕಳು ಮೇಲೆ ಹೇಳಿದ ಕೆಲಸಗಳಿಗೆ ಹೆಚ್ಚಾಗಿ ಹೋಗುತ್ತಾರೆ.

ಕುಂಟೆ, ರಂಟೆ, ಕೂರಿಗೆ, ಎಡೆಕುಂಟೆ, ನೇಗಿಲು ಮುಂತಾದ ಬೇಸಾಯದ ಕೆಲಸಕ್ಕೆ ಗಂಡಸರಿರುತ್ತಾರೆ. ಎತ್ತು ಜೊತೆಗೆ ಬೇಸಾಯಕ್ಕೆ ಸಂಬಂಧಪಟ್ಟ ಮುಟ್ಟುಗಳನ್ನೆಲ್ಲ ಹೊಲದ ಯಜಮಾನರೇ ಒದಗಿಸಿರುತ್ತಾರೆ. ಎತ್ತುಗಳನ್ನು ಹೂಡಿಕೊಂಡು ಹೊಲ ಊಳುವುದು, ಅರಗುವುದು ಮುಂತಾದ ಕೆಲಸಕ್ಕೆ ಆಳಿನ ರೂಪದಲ್ಲಿ ಗಾಣಿಗರ ಗಂಡಸರು ಹೋಗುತ್ತಾರೆ. ಉತ್ತರ ಕರ್ನಾಟಕದ ಅದರಲ್ಲೂ ಬಳ್ಳಾರಿ ಜಿಲ್ಲೆಯ ನೂರಾರು ಹಳ್ಳಿಗಳಲ್ಲಿ ಗಾಣಿಗರ ಹುಡುಗರು, ದೊಡ್ಡಗಂಡಸರಾದಿಯಾಗಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ಒಂದು ವರ್ಷಕ್ಕೆ ಇಷ್ಟು ಹಣ ಎಂದು ಮಾತನಾಡಿ ಅದನ್ನು ಮುಂಗಡ ಪಡೆದು ತಂದೆ ತಾಯಿಗಳು ಹುಡುಗರನ್ನು ದನ ಕಾಯಲು ಜೀತಕ್ಕಿಡುತ್ತಾರೆ. ಇನ್ನೊಬ್ಬರ ಮನೆಯ ತಂಗುಳ ರೊಟ್ಟಿ ಅನ್ನ ಉಂಡೇ ಬೆಳೆಯುವ ಹುಡುಗರು ದೊಡ್ಡವರಾದಂತೆ ಬೇಸಾಯದ ಕೆಲಸಗಳಿಗೆ ಬಡ್ತಿ ಹೊಂದುತ್ತಾರೆ. ದಣಿ (ಸಾವೂಕಾರ) ಸ್ವಲ್ಪ ಧಾರಳವಂತನಾದರೆ ಈ ಸಂಬಳದಾಳಿಗೆ ಹುಡುಗಿಯನ್ನು ಹುಡುಕಿ ಮದುವೆ ಮಾಡಿ

ನೆರಕೆ ಚಪ್ಪರ ಇಲ್ಲವೆ ತಗಡು ಅಥವಾ ಹಂಚಿನ ಮನೆ ಕಟ್ಟಿಕೊಳ್ಳಲು ಸಹಾಯ ಮಾಡಿ ಖಾಯಂ ಆಗಿ ತನ್ನ ಹೊಲ ಮನೆಯ ಕೆಲಸಗಳನ್ನು ಆತನಿಗೆ ವಹಿಸಿರುತ್ತಾನೆ. ಯಜಮಾನ ಕೊಡುವ ಊಟ (ಕೂಳು) ಮತ್ತು ವರ್ಷಕ್ಕೊಂದು ಬಾರಿಕೊಡಿಸುವ ಪಂಚೆ, ಅಂಗೆ, ಶಲ್ಯ (ಟವಲ್ಲು)ಯಲ್ಲ ಈತನ ಜೀವನದ ಕನಸುಗಳೆಲ್ಲ ಕರಗಿ ಹೋಗುತ್ತವೆ. ಒಡೆತನ ಮನೆಯಲ್ಲಿ ಸಗಣಿ ಹೊಡೆಯುವುದು (ಬಳಿಯುವುದು), ನೀರು ತರುವುದರಿಂದ ಹಿಡಿದು ದನಕರು, ಹೊಲಮನೆಗಳ ಜವಾಬ್ದಾರಿಯೆಲ್ಲ ಈತನ ಮೇಲಿರುತ್ತದೆ. ಕಳೆ ತೆಗೆಯಲು, ಕಡ್ಲಿಕೀಳಲೂ, ಜೋಳಕೊಯ್ಯಲು ಆಳುಗಳನ್ನು ಹೊರಡಿಸುತ್ತಾನೆ. ಅವರೊಂದಿಗೆ ತಾನುಕೂಡ ಕಳೆ ಕೀಳುತ್ತಾನೆ, ಹೊಲದಿಂದ ಬರುತ್ತಿದ್ದ ಹಾಗೆ ಕೊಟ್ಟಿದ್ದನ್ನುಂಡು ಮಲಗುತ್ತಾನೆ. ವಿಚಿತ್ರವೆಂದರೆ ಗಾಣಿಗರ ಹುಡುಗರುಗಳಿಂದ ಎಲ್ಲ ಕೆಲಸಗಳನ್ನು ಮಾಡಿಸಿಕೊಳ್ಳುವ ಮೇಲ್ವರ್ಗದ ಜನರು ಮತ್ತು ಶ್ರೀಮಂತರು ಅವರನ್ನು ನೋಡುವ ದೃಷ್ಟಿಯೇ ಬೇರೆ ಇದು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗಬಲ್ಲದು-ಅಷ್ಟೆ.

ಕೂಲಿ ಆಳುಗಳಾಗಿ ಕೆಲಸಕ್ಕೆ ಹೋಗುವ ಗಾಣಿಗರು ಗಂಡು, ಹೆಣ್ಣು ಮಕ್ಕಳೆಲ್ಲ ಸಾಮಾನ್ಯವಾಗಿ ಬೆಳಿಗ್ಗೆ ಊಟ ಮಾಡಿಕೊಂಡು ಹೋದವರು ಮತ್ತೆ ಬರುವುದು ಸಾಯಂಕಾಲವೇ. ಕೆಲವರು ಮಧ್ಯಾಹ್ನದ ಊಟ ಕಟ್ಟಿಕೊಂಡು ಹೋಗುತ್ತಾರೆ. ಕೆಲವರು ಕಟ್ಟಿಕೊಂಡು ಹೋಗುವುದಿಲ್ಲ. ಸಾಮಾನ್ಯವಾಗಿ ಆಯಾ ದಿನದ ಕೂಲಿಯನ್ನು ಆಯಾ ದಿನವೇ ಪಡೆಯುತ್ತಾರೆ. ಮತ್ತೆ ಕೆಲವರು ನಾಲ್ಕು ದಿನ ಇಲ್ಲವೇ ಹಬ್ಬ ಹರಿದಿನಗಳಿಗೆ ಬೇಕಾಗುತ್ತದೆಂದು ಒಟ್ಟಿಗೆ ಪಡೆಯುತ್ತಾರೆ. ಅಪರೂಪಕ್ಕೆಂಬಂತೆ ಕೆಲಕಡೆ ಬೇಸಾಯ ಬೇಸಾಯ ಹೊಡೆಯುವ ಗಾಣಿಗರ ಹೆಣ್ಣುಮಕ್ಕಳಿದ್ದಾರೆ. ಎತ್ತುಗಳ ಹೆಗಲಿಗೆ ನೊಗ ಇಟ್ಟು ಚಿಲಕಣಿ ಪಟಗಣ್ಣೆ ಬಿಗಿದು ನೊಗದ ಮೇಲೆ ಕುಂಟೆ, ರಂಟೆ, ಮಿಣಿ, ನೊಗಸುತ್ತು ಇಟ್ಟುಕೊಂಡು ಹೊರಟು ಹೊಲದಲ್ಲಿ ಸೊಗಸಾಗಿ ಹೂಡಿಕೊಂಡು ಹೊಡೆಯುತ್ತಾರೆ. ಎಲ್ಲದಕ್ಕೂ ಗಂಡಸರನ್ನೇ ಕಾಯುತ್ತಾ ಕುಳಿತರೆ ಕೆಲಸ ಕೆಟ್ಟು ಹೋಗುತ್ತದೆ ಎಂದು ಹೆಣ್ಣು ಮಕ್ಕಳು ಎಲ್ಲ ಬಗೆಯ ರೈತಾಪಿ ಕೆಲಸದಲ್ಲಿ ತೊಡಗಿಸಿಕೊಂಡಿದ್ದಾರೆ. ಪಂಪ್‌ಸೆಟ್ ಮೂಲಕ ಜೋಳ, ಹತ್ತಿ, ಶೇಂಗಾ, ಭತ್ತ, ಬೆಳೆಯುವ ಈ ಜನ ನೀರಾವರಿಯಿರುವ ಕಂಪ್ಲಿ, ಹೊಸಪೇಟೆ, ಹೆಚ್.ಬಿ. ಹಳ್ಳಿ ಮುಂತಾದ ತಾಲೂಕುಗಳ ಕಡೆ ಹೋಗಿ ಗಾಣಿಗರನೇಕರು ಇಂತಹ ಕಡೆ ಬಂದು ನೆಲೆಸಿದ್ದಾರೆ. ಮೊದ ಮೊದಲು ಕೂಲಿ ಮಾಡುತ್ತಿದ್ದ ಗಾಣಿಗರು ಆಯಾ ಊರಿನ ಇತರೆ ಕೂಲಿಗಾರರ ಜೊತೆ ಸೇರಿ ಈಗ ಗುತ್ತಿಗೆ ಮಾಡುತ್ತಾರೆ. ಕಬ್ಬು ಕಡಿಯುವ, ನಾಟಿ ಹಚ್ಚುವ, ಭತ್ತ ಒಕ್ಕಲು ಮಾಡಿಕೊಡುವ ಮುಂತಾದ ಕೆಲಸಗಳಾಗಿ ಈ ಗುಂಪು ಹೊಲದ ಮಾಲೀಕನೊಂದಿಗೆ ನೇರವಾಗಿ ವ್ಯವಹರಿಸುವುದಿಲ್ಲ. ಗುಂಪಿನ ನಾಯಕಿ ಅಥವಾ ನಾಯಕ ಎಕರೆಗೆ ಇಂತಿಷ್ಟು ಎಂದು ಮಾತನಾಡುತ್ತಾರೆ. ಸಸಿಕಿತ್ತು ನಾಟಿ ಮಾಡಿದ ನಂತರ ಈ ನಾಯಕಿ ಅಥವಾ ನಾಯಕ ತಮ್ಮ ಗುಂಪಿನ ಎಲ್ಲರಿಗೂ ಸಮಾನಾಗಿ ಹಣವನ್ನು ಹಂಚುತ್ತಾರೆ. ಹೀಗೆ ಗುತ್ತಿಗೆ ಮೂಲಕ ಕೆಲಸ ಮಾಡುವುದು, ಮಾಡಿಸುವುದು ಯಜಮಾನರಿಗೂ, ಕೆಲಸಗಾರರಿಗೂ ಲಾಭದಾಯಕವಾದದ್ದು. ಭತ್ತದ ಒಕ್ಕಲು ಮಾಡುವುದಾದರೂ ಅಷ್ಟೇ. ಭತ್ತ ನೆಲ್ಲು ಕೊಯ್ದು ಕಣ ಮಾಡಿ ಅಲ್ಲಿಗೆ ಭತ್ತದ ಹುಲ್ಲನ್ನು ಮಾಡುವುದಾದರೂ ಅಷ್ಟೇ. ಭತ್ತ (ನೆಲ್ಲು) ಕೊಯ್ದು ಕಣ ಮಾಡಿ ಅಲ್ಲಿಗೆ ಭತ್ತದ ಹುಲ್ಲನ್ನು ಹಾಕಿ ಟ್ರಾಕ್ಟರ್

ಮುಖಾಂತರ ತುಳಸಿ ಕಾಳು ಬೇರೆ, ಹುಲ್ಲು ಬೇರೆ ಮಾಡಿಕೊಡುತ್ತಾರೆ. ನಂತರ ತೂರಿಕೊಂಡು ರಾಶಿಯನ್ನು ಮನೆಗೊಯ್ಯುತ್ತಾರೆ. ಹತ್ತು ಹದಿನೈದು ಎಕರೆ ಗದ್ದೆಯ ಸಾಹುಕಾರರು ಗುತ್ತಿಗೆದಾರರನ್ನು ಇಲ್ಲವೇ ಯಂತ್ರಗಳನ್ನು ಅನಿವಾರ್ಯವಾಗಿ ಅವಲಂಬಿಸಿರುತ್ತಾರೆ. ಈ ನೀರಾವರಿಯ ಪ್ರದೇಶದಲ್ಲಿ ಬಂದು ವಾಸವಾಗಿರುವ ಕೂಲಿ-ನಾಲಿ ಮಾಡುವ ಗಾಣಿಗರು ನಗರದ ವಿವಿಧ ಕೆಲಸ ಮಾಡುವ ಗಾಣಿಗರಿಗಿಂತ ಆರ್ಥಿಕ ಸ್ಥಿತಿಯಲ್ಲಿ ಉತ್ತಮವಾಗಿದ್ದಾರೆ.

ಮೂರು ನಾಲ್ಕು ಎಕರೆ ಜಮೀನು ಮಾಡಿಕೊಂಡಿರುವ ಗಾಣಿಗರು ಇದ್ದಾರೆ. ಇವರೆಲ್ಲ ಜೊತೆ ಎತ್ತು, ಅಗತ್ಯವಿರುವ ಕೂರಿಗೆ, ಕುಂಟೆ, ರೆಂಟೆ, ನೇಗಿಲು ಮುಂತಾದ ಮುಟ್ಟುಗಳನ್ನು ಸಾಮಾನ್ಯವಾಗಿ ಹೊಂದಿರುತ್ತಾರೆ. ತಮ್ಮ ಕೆಲಸ ಮುಗಿದ ನಂತರ ಕೂಲಿಬೇಸಾಯಕ್ಕೂ ಹೋಗುತ್ತಾರೆ. ಕಡಿಮೆ ಕೆಲಸವಿರುವುದರಿಂದ ಸಂಬಂಧಿಗಳನ್ನೋ, ಮುಯ್ಯಾಳುಗಳನ್ನೋ ಕರೆದುಕೊಂಡು ಒಕ್ಕಲು, ಕಳೇವು, ನಾಟಿ ಇತ್ಯಾದಿಯನ್ನು ಮುಗಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಜುಲೈ ಆಗಸ್ಟ್‌ನಲ್ಲಿ ಬಿತ್ತನೆ ಕಾರ್ಯ ನಡೆಯುತ್ತದೆ. ಮಳೆಗಾಲ ಮುಗಿಯುವುದರೊಳಗಾಗಿ ಬರುವಂತಹ ಬೆಳೆಗಳನ್ನು ಹಾಕುತ್ತಾರೆ. ಅಲ್ಲಲ್ಲಿ ತರಕಾರಿ ಬೆಳೆದು ಮಾರಾಟ ಮಾಡುವವರು ಇದ್ದಾರೆ. ನೀರಾವರಿ ಪ್ರದೇಶದವರು ವರ್ಷಕ್ಕೆ ಎರಡು ಬೆಳೆ ಪಡೆಯುತ್ತಾರೆ. ಭತ್ತ, ಶೇಂಗಾ, ಜೋಳ, ಸೂರ್ಯಕಾಂತಿ, ಮೆಣಸಿನಕಾಯಿ ಇತ್ಯಾದಿಗಳು ಬಳ್ಳಾರಿ ಜಿಲ್ಲೆಯ ಜನರ ಪ್ರಮುಖ ಬೆಳೆಗಳಾಗಿವೆ. ಬೀಜಕ್ಕಾಗಿ ತೆಗೆದಿರಿಸಿದ ಮೆಣಸಿನಕಾಯಿ ಬೀಜ, ಕಡ್ಲಿ ಬೀಜ, ಭತ್ತ ಇತ್ಯಾದಿಗಳು, ಕಷ್ಟ ಬಂದಾಗ ಬೀಜಕ್ಕಾಗಿ ತೆಗೆದಿರಿಸಿದ ಬೀಜಗಳನ್ನು ಮಾರಿಕೊಂಡು ಜೀವನ ಮಾಡುತ್ತಾರೆ. ಬಿತ್ತುವ ಕಾಲ, ಸಮಯ, ಸಂದರ್ಭಗಳನ್ನು ನೋಡಿ ವಿವಿಧ ದಲಾಳಿ ಅಂಗಡಿಗಳಿಂದ ಬೀಜವನ್ನು ತಂದು ಬಿತ್ತುತ್ತಾರೆ. ವಿಶೇಷವಾಗಿ ಭತ್ತದ ಬೀಜವನ್ನು ಚೀಲದಲ್ಲಿ ತುಂಬಿ ಬಾಯಿ ಹೊಲಿದು ಅಥವ ಬಾಯಿ ಕಟ್ಟಿ ನೀರಿನ ಬಾನಿಗೆ ಅಥವಾ ತೋಟದ ಹೌಜಿನಲ್ಲಿ ಹಾಕುತ್ತಾರೆ. ಒಂದು ರಾತ್ರಿ, ಹಗಲು ಚೆನ್ನಾಗಿ ನೆನೆದು ನಂತರ ಚೀಲಗಳನ್ನು ಹೊರ ತೆಗೆದು ಮನೆಯ ಮೂಲೆಯಲ್ಲಿ ಅಥವಾ ಗುಣೇವು ಬತ್ತದ ಹುಲ್ಲಿನಿಂದ ಮುಚ್ಚುತ್ತಾರೆ. ಆ ಕಾವಿಗೆ ಭತ್ತ ಒಂದೆರಡು ದಿನಗಳಲ್ಲಿ ಚೆನ್ನಾಗಿ ಮೊಳಕೆಯೊಡೆಯುತ್ತದೆ. ಹೊಲದ ಒಂದು ಮಡಿಯನ್ನು ಚೆನ್ನಾಗಿ ರಂಟೆ ಹೊಡೆದು. ಕಸಕಡ್ಡಿ ಇಲ್ಲದಂತೆ ಆರಿಸಿ ಮಡಿಯನ್ನು ಸಮಮಾಡಿ ಆ ಬೀಜಗಳನ್ನು ಚೆಲ್ಲುತ್ತಾರೆ. ಸಸಿ ಹಸುರಾಗಿ ಚಿಗುರುವವರೆಗೂ ಮಡಿಯಲ್ಲಿ ಹಸಿಯಿರುವಂತೆ ಚೆನ್ನಾಗಿ ನೋಡಿಕೊಳ್ಳಲಾಗುತ್ತದೆ. ಚಿಗುರಿದ ನಂತರ ಸರಕಾರಿ ಗೊಬ್ಬರ ಹಾಕುತ್ತಾರೆ. ಸಾಮಾನ್ಯವಾಗಿ ತಿಂಗಳು, ತಿಂಗಳ ಮೇಲೆ ಹತ್ತುದಿನದ ನಂತರ ಸಸಿ ನಾಟಿ ಮಾಡಲು ಬರುತ್ತವೆ. ನಾಟಿ ಹಚ್ಚಿದ ನಂತರ ಭತ್ತ ಕೊಯ್ಲಿಗೆ ಬರುವವರೆಗೂ ಎರಡರಿಂದ ಮೂರು ಸಲ ಗೊಬ್ಬರ ಎಣ್ಣೆ ಹೊಡೆಯುತ್ತಾರೆ.

ದನಕರುಗಳನ್ನು ಸಾಕಿಕೊಂಡಿರುವ ಗಾಣಿಗರು ತಮ್ಮ ತಮ್ಮ ಊರುಗಳಲ್ಲಿ ಅವರಿವರನ್ನು ಕಾಡಿ ಬೇಡಿ ಭತ್ತದ ಹುಲ್ಲು, ಶೇಂಗಾ ಹೊಟ್ಟು, ರಾಗಿ ಹುಲ್ಲು, ಸೊಪ್ಪು, ಮುಂತಾದ ಮೇವನ್ನು ಸಂಪಾದಿಸಿ ಸಣ್ಣ ಬಣವೆಯ ರೂಪದಲ್ಲಿಟ್ಟಿರುತ್ತಾರೆ. ಸ್ವಂತ ಜಮೀನಿರುವವರಿಗೆ ಈ ತೊಂದರೆಯಿರುವುದಿಲ್ಲ. ಮಳೆಗಾಲಕ್ಕೆಂದು

ಹುಲ್ಲು ಬಣವೆಗಳನ್ನು ಜೋಪಾನವಾಗಿ ಕಾಪಾಡಿಕೊಂಡಿರುತ್ತಾರೆ. ಬಣವೆಯ ಸುತ್ತಲು ಮುಳ್ಳಿನ ಬೇಲಿ ಹಾಕಿರುತ್ತಾರೆ. ಒಟ್ಟಾರೆ ಗಾಣಿಗ ಸಮುದಾಯದವರು ರೈತಾಪಿಗೆ ಸಂಬಂಧಿಸಿದ ಪ್ರತಿಯೊಂದು ಕೆಲಸದಲ್ಲೂ ತೊಡಗಿದ್ದಾರೆ ಎಂದು ಹೇಳಬಹುದು. ಈ ಜಿಲ್ಲೆಯಲ್ಲಿ ಬಹುಸಂಖ್ಯಾತ ಗಾಣಿಗರು ರೈತರೇ ಆಗಿರುವುದರಿಂದ ಇವರಿಗೆಲ್ಲ ಎತ್ತು ಎಂದರೆ 'ಬಸವಣ್ಣ' ಎಂದು ಅತ್ಯಂತ ಗೌರವ, ಆರಾಧನಾ ಭಾವನೆಯಿದೆ.

ಗಾಣಿಗರು ಜೋಳ, ರಾಗಿ, ಭತ್ತ ಒಕ್ಕಲು ಮಾಡುವಾಗ ಕಾಳು ತೆನೆ ಬೇರೆ ಮಾಡಲು ಮೆರಿಗೋಲನ್ನು ಬಳಸುತ್ತಾರೆ. ಕಾಳು ಉದುರಿದ ತೆನೆಯನ್ನು, ಕಂಕಿಯನ್ನು ಹಲುಬೆಯಿಂದ ಎಳೆದು ಒಂದು ಕಡೆ ದುಂಡಗೆ ಮಾಡುತ್ತಾರೆ. ಕಾಳನ್ನು ಗ್ವಾರೆಯಿಂದ ಎಳೆದು ದುಂಡಗೆ ರಾಶಿ ಮಾಡಿ ಮೊರಗಳಲ್ಲಿ ತುಂಬಿಕೊಂಡು ತೂರುತ್ತಾರೆ, ನಂತರ ಚೀಲಗಳಿಗೆ ತುಂಬುತ್ತಾರೆ. ಬಂಡಿಯ ಎರಡೂ ಅಡಿಗೆಗಳಲ್ಲಿ ಕಣಗೆಗಳನ್ನಿಟ್ಟು, ಈಚಲ ಕಡ್ಡಿಯಲ್ಲಿ ಹೆಣದ ತಡಕೆಯನ್ನು ಬಿಗಿದು ದನದ ಗೊಬ್ಬರವನ್ನು ಹೊಲಗಳಿಗೆ ಏರುತ್ತಾರೆ (ಹೊಡೆಯುತ್ತಾರೆ) ಸಗಣಿ ಪುಟ್ಟಿ, ಚಲ್ಕೆ ಈ ಸಂದರ್ಭದಲ್ಲಿ ಬಳಕೆಯಾಗುತ್ತದೆ. ಸಗಣಿ ಪುಟ್ಟಿ, ಆಕರಾಗಿ ಪುಟ್ಟಿಗಳನ್ನು ಈಚಲ ಕಡ್ಡಿಯಿಂದ ಹೆಣೆದಿರುತ್ತಾರೆ. ಗಾಣಿಗರು ದಂದಕ್ಕಿ ಗುಡಿಸಲು ತೊಗರಿ ಕಡ್ಡಿಯ ಬರಲನ್ನು ಉಪಯೋಗಿಸುತ್ತಾರೆ. ಹೊಲಗಳಲ್ಲಿ ಬೇಲಿಗಳಲ್ಲಿ ಬೆಳೆದ ರಗಸಪಟ್ಟೆಯನ್ನು ಕೊಯ್ದು ಕೆಸರಿನಲ್ಲಿ ತಿಂಗಳಗಟ್ಟಲೆ ಹೂತು ನಂತರ ತೆಗೆದು ಕೈಕೊಡತಿಯಿಂದ ಅದನ್ನು ಬಡಿದು ನಾರು ಮಾಡಿ ಒಣಗು ಹಾಕುತ್ತಾರೆ. ಆ ನಾರಿನಿಂದ ವ್ಯವಸಾಯಕ್ಕೆ ಬೇಕಾದ ಹಗ್ಗಗಳು, ಮಿಣಿ, ಚಿಲಕಾಣಿ, ಬಾರಕೋಲು ಮುಂತಾದವುಗಳನ್ನು ಹೊಸೆಯುತ್ತಾರೆ. ಕೆಲವರು ಈ ಕಾರಣಕ್ಕಾಗಿ ಪುಂಡಿ ಬೆಳೆಸಿ ಅದರಿಂದ ನಾರು ತೆಗೆಯುತ್ತಾರೆ.

ಅನೇಕ ಗಾಣಿಗ ಸಮುದಾಯದವರು ಬಿತ್ತುವುದರಲ್ಲಿ ವಿಶೇಷವಾಗಿ ನೈಪುಣ್ಯತೆ ಹೊಂದಿದ್ದು ಬಿತ್ತನೆ ಕಾಲದಲ್ಲಿ ಅವರಿಗೆ ಎಲ್ಲಿಲ್ಲದ ಬೇಡಿಕೆಯಿರುತ್ತದೆ. ಬಿತ್ತುವುದಕ್ಕೆ ಕಟ್ಟಿಗೆಯ ರೆಂಟೆ ಮತ್ತು ಕೂರಿಗೆಗಳನ್ನು ಬಳಸುತ್ತಾರೆ. ಕಡಿಮೆ ಭೂಮಿ ಇದ್ದವರು ಕಟ್ಟಿಗೆ ರೆಂಟೆ, ಹೆಚ್ಚು ಭೂಮಿ ಹೊಂದಿದವರು ಕೂರಿಗೆ ಉಪಯೋಗಿಸುತ್ತಾರೆ. ಕೂರಿಗೆಗೆ ಮೂರು ಉಳುವ ತಾಳುಗಳಿದ್ದು ಆ ಮೂರಕ್ಕೂ ಮೂರು ಸಡ್ಡೆಗಳನ್ನು ಕೂರಿಗೆಯ ಹಿಂದಕ್ಕೆ ಕಟ್ಟಿರುತ್ತಾರೆ. ಒಬ್ಬ ಬೇಸಾಯ ಹೊಡೆಯುವವನು ಮತ್ತು ಈ ಮೂರು ಸಡ್ಡೆಗಳಲ್ಲಿ ಬಿತ್ತಲು ಮೂರು ಜನರಿರುತ್ತಾರೆ. ಬಿತ್ತುವ ಜನ ಸೊಂಟಕ್ಕೆ ಅರಿವೆಯನ್ನು ಮಡಿಲಿನಂತೆ ಕಟ್ಟಿಕೊಂಡು ಅದರಲ್ಲಿ ಬಿತ್ತನೆ ಕಾಳುಗಳನ್ನು ಹಾಕಿಕೊಂಡಿರುತ್ತಾರೆ. ಒಂದು ಕೈಲಿ ಸಡ್ಡೆ ಹಿಡಿದು ಮತ್ತೊಂದರಲ್ಲಿ ಕಾಳು ತೆಗೆದುಕೊಂಡು ಸಡ್ಡೆಯ ಮೇಲ್ಮುಖದಲ್ಲಿರುವ ರಂಧ್ರದಲ್ಲಿ ಕಾಳಿಂದ ಕಾಳು ಬಿಡುತ್ತಾ ಹೋಗುತ್ತಾರೆ. ವಿಶೇಷವೆಂದರೆ ಕೂರಿಗೆಯಲ್ಲಿ ಬಿತ್ತುವಾಗ ಮೇಲಿನಂತೆ ನಾಲ್ಕು ಜನರ ಅಗತ್ಯವಿಲ್ಲದಂತಹ ಒಂದು ಉಪಕರಣವಿದೆ. ಅದಕ್ಕೆ ಸೆಡ್ಡಿ (ತಲವು) ಎನ್ನುತ್ತಾರೆ. ಬುಡು ಬುಡಿಕೆಯಾಕಾರದಲ್ಲಿರುವ ಅದರ ತಳಭಾಗದಲ್ಲಿ ಮೂರು ದೊಡ್ಡ ದುಂಡನೆಯ ರಂಧ್ರಗಳಿದ್ದು ಇಲ್ಲಿಂದ ಕೂರಿಗೆಯ ತಾಳುಗಳ ನಡುವಿರುವ ರಂಧ್ರಕ್ಕೂ ಸೇರುವಂತೆ ಮೂರು ಮೂರುವರಡಿ ಉದ್ದದ ಬಿದಿರುಗಳನ್ನು ಹೊಂದಿಸುತ್ತಾರೆ. ತಲವಿನ ಮೇಲ್ಮುಖದಲ್ಲಿ ಸಣ್ಣನೆಯ ಮೂರು ತೂತುಗಳಿದ್ದು ಅಲ್ಲಿ ಕಾಳುಗಳನ್ನು ಬಿಟ್ಟರೆ ಸಮನಾಗಿ ಮೂರು

ಗಳಗಳಿಂದ ಕೂರಿಗೆ ಹೊಡೆಯುತ್ತಾ ಹೋಗುವ ಸಾಲಿನಲ್ಲಿ ಕಾಳುಗಳು ಬೀಳುತ್ತವೆ. ತಲಲಿನ ಸೊಂಟದ ಭಾಗಕ್ಕೆ ಹಗ್ಗಕಟ್ಟಿ ಅದು ಅಲ್ಲಾಡದಂತೆ ಸುತ್ತಲೂ ಎಳೆದು ಕೂರಿಗೆಯ ದಿಂಡು, ಈಚುಗಳಿಗೆ ಬಿಗಿದಿರಲಾಗುತ್ತದೆ. ವಿಚಿತ್ರವೆಂದರೆ ಈ ಸೆಡ್ಡಿಯಲ್ಲಿ ಬಿತ್ತುವ ಮನುಷ್ಯನೇ ಬೇಸಾಯ ಹೊಡೆಯುವವನೂ ಆಗಿರುತ್ತಾನೆ. ಅಂದರೆ ನಾಲ್ಕು ಜನರ ಕೆಲಸವನ್ನು ಒಬ್ಬನೇ ಮಾಡಬೇಕು. ಕೂರಿಗೆಯ ಮೇಣಿ ಹಿಡಿದು ಅದುಮಬೇಕು, ಅಥವಾ ಕಾಲೊಂದನ್ನು ಕೂರಿಗೆಯ ದಿಂಡಿನ ಮೇಲೆ ಊರಿ ತುಳಿಯುತ್ತಾ ಕುಂಟುತ್ತಾ ನಡೆಯಬೇಕು. ಮತ್ತೊಂದು ಕೈಯಲ್ಲಿ ಕಾಳುಗಳನ್ನು ಸೆಡ್ಡಿಯಲ್ಲಿ ಬಿಡುತ್ತಿರಬೇಕು. ಎತ್ತುಗಳನ್ನು ನೆಟ್ಟಗೆ ಹೊಡೆಯುತ್ತಾ ಸಾಲುಗಳು ವಕ್ರವಾಗದಂತೆ, ಸಮವಾದ ಭಾರ ಬಿಟ್ಟು, ಸಮನಾಗಿ ಕಾಳುಗಳನ್ನು ಉದುರಿಸಬೇಕು. ಈ ಕೆಲಸದಲ್ಲಿ ಅತ್ಯಂತ ನಿಪುಣರಾಗಿರುವ ಗಾಣಿಗರು, ಕೆಲವರು, ಬಿತ್ತನೆಯ ಕಾಲದಲ್ಲಿ ಬ್ಯುಜಿಯಾಗಿರುತ್ತಾರೆ. ಗಾಣಿಗರು ರೈತಾಪಿ ಕೆಲಸಗಳಲ್ಲಿ ಕಲಾವಂತಿಕೆ ಜಾಣ್ಮೆಯಿಂದ ಕೂಡಿದ ಈ ಕೆಲಸ ಅತ್ಯಂತ ಕುತೂಹಲಕಾರಿಯಾದುದು. ನಗರದಲ್ಲಿರುವ ಗಾಣಿಗರು ತಮ್ಮ ಮೂಲ ಕಸುಬಿನೊಂದಿಗೆ ಇನ್ನು ಅನೇಕ ಉಪಕಸುಬುಗಳನ್ನು ಜೀವನೋಪಾಯಕ್ಕಾಗಿ ಅವಲಂಬಿಸಿದ್ದಾರೆ.

ತೀರ ವಿರಳವಾಗಿ ಅಲ್ಲೊಬ್ಬರು, ಇಲ್ಲೊಬ್ಬರಂತೆ, ಸರ್ಕಾರಿ ನೌಕರಿಯಲ್ಲಿದ್ದಾರೆ. ಶಿಕ್ಷಕರಾಗಿ, ಲಕ್ಚರರಾಗಿ, ಉಪಾಧ್ಯಾಯರೋ, ಜವಾನರೋ, ಗುಮಾಸ್ತರೋ ಆಗಿರುವ ಗಾಣಿಗರ ನೌಕರರು ಕೂಡ ವಿಶೇಷವಾದ ಸಾಮಾಜಿಕ ಗೌರವವನ್ನೇನೂ ಪಡೆದಂತಿಲ್ಲ. ಗಾಣಿಗ ಸಮುದಾಯದವರ ಒಟ್ಟಾರೆ ಅಭಿವೃದ್ಧಿಗಾಗಿ ಪ್ರಾಮಾಣಿಕವಾಗಿ ಶ್ರಮಿಸಿರುವ ಕೆಲವರ ಪ್ರಯತ್ನವನ್ನು ಲಿಂಗಾಯಿತರು ಹತ್ತಿಕ್ಕಿರುವ ವಿಷಯ ಸಂಶೋಧನೆಯ ಸಂದರ್ಭದಲ್ಲಿ ತಿಳಿದುಬಂತು. ಗಾಣಿಗರನ್ನು ಪ್ರತಿನಿಧಿಸುವಂತಹ ಕೆಲವೇ ಜನರಿದ್ದರೂ ಅವರು ಪ್ರವಾಹದೆದುರು ಈಜಲಾಗದೇ ಸುಮ್ಮನಾದಂತಿದೆ. ಗಾಣಿಗರ ಜಾತ್ಯತೀತ, ಅಂದರೆ ಇಂಡಿಯಾ ಸ್ವತಂತ್ರವಾಗಿ ಜಾತ್ಯತೀತ ರಾಷ್ಟ್ರ ಎಂದು ಘೋಷಿಸಿಕೊಳ್ಳುವುದಕ್ಕಿಂತ ನೂರಾರು ವರ್ಷಗಳ ಮೊದಲಿನಿಂದಲೇ ಜಾತಿಗಳನ್ನು ಮೀರಿದ ಸಂಸ್ಕೃತಿಯನ್ನು ಆಚರಣೆಯಲ್ಲಿಟ್ಟುಕೊಂಡಿರುವ ಗಾಣಿಗರ ಸಂಸ್ಕೃತಿಯ ಪರಿಚಯ ಮಾಡಿಕೊಡುವ ಸಣ್ಣ ಪ್ರಯತ್ನವೂ ನಡೆದಿಲ್ಲ ಎಂದರೆ ಒಟ್ಟಾರೆ ಜಾತ್ಯತೀತ ಆದರ್ಶಕ್ಕೆ ಇರುವ ವ್ಯಂಗ್ಯ ಎಂಥದ್ದೆಂದು ಅರ್ಥವಾಗುತ್ತದೆ. ಬಹುಶಃ ಉಪಸಂಸ್ಕೃತಿ ಎಂದು ಕರೆಯಲಾಗುವ ಎಲ್ಲ ಜನಾಂಗಗಳಲ್ಲಿ ಕೂಡ ಆ ಬಗೆಯ ಜಾತ್ಯತೀತ ಆಚರಣೆ ಇರುತ್ತದೆನಿಸುತ್ತದೆ. ಪ್ರಧಾನ ಸಂಸ್ಕೃತಿಗಳ ಗೋಜಲಿನಲ್ಲಿ ಉಪಸಂಸ್ಕೃತಿಗಳು ಡಾಳಾಗಿ ಕಾಣದಿರುವುದು ಸಾಧ್ಯವಿದೆ. ಅವುಗಳನ್ನು ಗುರುತಿಸುವುದರ ಜೊತೆ ಈ ಎಲ್ಲ ಜನಾಂಗಗಳಿಗೆ ಸಾಮಾಜಿಕ ನ್ಯಾಯ ಮತ್ತು ಭದ್ರತೆಯನ್ನು ಒದಗಿಸುವುದರ ಮೂಲಕ ಅವುಗಳನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಸರ್ಕಾರವೂ ಒಳಗೊಂಡಂತೆ ಪ್ರಗತಿಪರರೆಲ್ಲರೂ ತೊಡಗುವ ಅಗತ್ಯವಿದೆ. ಗಾಣಿಗರು ರೈತಾಪಿ ಕೆಲಸಗಳಲ್ಲಿ ತೊಡಗಿಕೊಂಡು ಎಲ್ಲಾ ಬಡ, ಭೂರಹಿತ ರೈತರ ಬವಣೆಗಳನ್ನೇ ಅನುಭವಿಸುತ್ತಿದ್ದಾರೆ. ಮುಂಗಾರು ಮಳೆ ಬರುವುದನ್ನೇ ಕಾತರದಿಂದ ನಿರೀಕ್ಷಿಸುತ್ತ ಕೆಲಸಗಳಿಗಾಗಿ ಹುಡುಕುತ್ತಾರೆ. ಪ್ರತಿ ಯುಗಾದಿಯಂದು ಹೊಸ ವರ್ಷದ ಆರಂಭವನ್ನು ಹೊಲಗಳಿಗೆ ಬೇಸಾಯ ಹೂಡುವ ಮೂಲಕ ಆಚರಿಸುತ್ತಾರೆ. ಬೆಳೆ, ಮಳೆ,

ಸಮೃದ್ಧಿಯಾಗಿ ಆಗಲೆಂದು ಊರಿನ ಬಸವಣ್ಣ ದೇವರಿಗೋ, ಹುಲಿಗೆಮ್ಮನಿಗೋ, ರುದ್ರೇಶ್ವರನಿಗೋ ಹರಕೆ ಹೊತ್ತುಕೊಳ್ಳುತ್ತಾರೆ. ಜೋಳದ ಒಕ್ಕಲನ್ನು ಬೆಳದಿಂಗಳಲ್ಲಿ ಕೂಡಿಕೊಂಡು ಮಾಡುತ್ತಾರೆ. ಆಕಾಶದ ನಕ್ಷತ್ರಗಳಲ್ಲಿ ಬೇಸಾಯದ ಒಂದು ರೀತಿಯನ್ನೇ ಕಂಡು ಭಾವಿಸುತ್ತಾ ಪಶ್ಚಿಮದಲ್ಲಿ ಮರೆಯಾಗುತ್ತಿರುವ ಮೂರು ಮೂರರಂತೆ ಸಾಲಾಗಿರುವ ಆರು ನಕ್ಷತ್ರಗಳನ್ನು ತೋರಿಸಿ ಆರೆತ್ತಿನ ಕೂರಿಗೆದಳ ಮುಳುಗೋಕೆ ಬಂದಿದೆ ಎಂದು ಬೇಸಾಯದ ಕೆಲಸಗಳಿಗೆ ಮಬ್ಬಿಗೇ ಜನರನ್ನು ಎಚ್ಚರಿಸುತ್ತಾರೆ. ಕಾಗೆಗಳು, ಗುಬ್ಬಿಗಳು, ಕೋಳಿಗಳು ಕೂಗುವುದು ಅವರ ಎಚ್ಚರದ ಕರೆಗಂಟೆಯಾಗುತ್ತದೆ. ಹೊಸದಾಗಿ ಎತ್ತುಗಳನ್ನು ಖರೀದಿಸಿಕೊಂಡು ಬಂದರೆ ಅವುಗಳಿಗೆ ಪೂಜೆ ಮಾಡಿ ತೆಂಗಿನ ಕಾಯಿ ಒಡೆದು ಮನೆಯ ಒಳಗಡೆ (ದಂದಕ್ಕಿಗೆ) ಬಿಡುತ್ತಾರೆ. ಮನೆಯನ್ನು ಪ್ರವೇಶಿಸುವ ಎತ್ತು ಎಡಗಾಲನ್ನು ಮುಂದಿಟ್ಟರೆ ಅದು ಆ ಮನೆಯಲ್ಲಿ ಬಹುದಿನಗಳ ಕಾಲ ಇರುವುದಿಲ್ಲವೆಂದೂ, ಬಲಗಾಲನ್ನಿಟ್ಟು ಬಂದರೆ ಅದು ದೀರ್ಘಕಾಲ ಆ ಮನೆಯಲ್ಲಿರುತ್ತದೆಂದೂ ನಂಬುತ್ತಾರೆ. ಪ್ರತಿ ಸೋಮವಾರ ಎತ್ತುಗಳಿಗೆ ವಿಶ್ರಾಂತಿ ಕೊಡುವುದಲ್ಲದೆ, ಮೈ ತೊಳೆದು ಜೋಳ, ಹಕ್ಕಿಯನ್ನು ಶುದ್ಧಮಾಡಿ ವಿಶೇಷ ಪ್ರೀತಿಯಿಂದ ತುರಿಸುತ್ತಾರೆ. ಎತ್ತುಗಳಿಗೆ ಬಸವ, ಬಸವಣ್ಣ, ರುದ್ರ, ಶಿವ ಇತ್ಯಾದಿಯಾಗಿ ಹೆಸರಿಟ್ಟು ಕರೆಯುತ್ತಾರೆ. ಗೊಡ್ಡಾದ ಆಕಳುಗಳನ್ನು ಬೇಸಾಯಕ್ಕೆ ಬಳಸುವುದುಂಟು. ಪ್ರತೀ ಸಲ ಬಿತ್ತುವಾಗ, ಒಕ್ಕಲು ಮಾಡುವಾಗ, ನಾಟಿ ಹಚ್ಚುವಾಗ ಊದಿನಕಡ್ಡಿ ಬೆಳಗಿ ತೆಂಗಿನಕಾಯಿ ಒಡೆದು ಬೆಳೆ, ಇಳುವರಿ ಚೆನ್ನಾಗಾಗಲಿ ಎಂದು ದೇವರಲ್ಲಿ ಬೇಡುತ್ತಾರೆ. ಭೂಮಿತಾಯಿ, ನಮ್ಮವ್ವ ಎಂದೇ ಪ್ರೀತಿಯಿಂದ ಕರೆಯುವ ಗಾಣಿಗರು ಆಕೆಯನ್ನು ನಂಬಿದವರಿಗೆ ಅವಳೆಂದೂ ಮೋಸ ಮಾಡುವುದಿಲ್ಲವೆಂದೂ ಭಾವಿಸುತ್ತಾರೆ. ಕೆಲವರು ಪ್ರತಿ ಶಿವರಾತ್ರಿಯ ದಿನ ಹೊಲದಲ್ಲಿ ಸಿಹಿ ಅಡಿಗೆ ಮಾಡಿಸಿ ಜನತೆಗೆ ಊಟ ಹಾಕುತ್ತಾರೆ. ಆಯಾಸವಾದಾಗ, ಎಡವಿದಾಗ ತಟಕ್ಕನೆ ಗಾಣಿಗರ ಬಾಯಿಂದ 'ಬಸವ ಬಸವ' ಎನ್ನುವ ಉದ್ಗಾರ ಹೊರಡುತ್ತದೆ. ಕೆಲವು ಸಲ ಹೆಣ್ಣು ಮಕ್ಕಳಾದಿಯಾಗಿ ಆಗಬಾರದ್ದು ನಡೆದು ಹೋದರೆ 'ಶಿವ ಶಿವ' ಅನ್ನುವುದುಂಟು. ಪರಮಾತ್ಮ, ಭಗವಂತ, ಶಂಬೋಶಂಕರ, ಶಿವನೇ ಇತ್ಯಾದಿ ಉದ್ಗಾರಗಳು ಗಾಣಿಗ ಸಮುದಾಯದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ.

### ೮.೩. ಹಿಂದಿನ ಕಾಲದ ಸಮಾಜದಲ್ಲಿ ಗಾಣಿಗರ ಸ್ಥಾನಮಾನ

ಗಾಣಿಗ ಸಮುದಾಯದ ಈವರೆಗಿನ ಅಧ್ಯಯನದಲ್ಲಿ ಅವರ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಸ್ಥೂಲವಾದ ಚಿತ್ರವೊಂದು ಸಿಗುವಂತಿದೆ. ಗಾಣಿಗರು ತಮ್ಮ ಸಾಂಸ್ಕೃತಿಕ ಆಚರಣೆ ಮತ್ತು ಸಾಮಾಜಿಕ ನಡವಳಿಕೆಗಳ ಹಿನ್ನೆಲೆಯಲ್ಲಿ ಭಾರತ ಆರಂಭದಿಂದಲೂ ಅನ್ಯ ದೇಶೀಯರ ಆಕ್ರಮಣಗಳಿಗೆ ತುತ್ತಾಗುತ್ತಾ ರಾಜಕೀಯ ಗುಲಾಮಗಿರಿಯನ್ನು ಅನುಭವಿಸಿದರೂ ತನ್ನ ಸಾಮಾಜಿಕ ರಚನೆಯ ಒಳವಿವರಗಳನ್ನು ಬಿಟ್ಟುಕೊಟ್ಟಿಲ್ಲ. ಇಲ್ಲಿ ಧಾರ್ಮಿಕ ಬದ್ಧತೆಯೊಂದಿಗೆ ಬೆಸೆದುಹೋದ ಸಮಾಜ ಅದರ ಕಟ್ಟು-ಪಾಡುಗಳನ್ನು ರೂಪಿಸಿಕೊಳ್ಳುವಾಗ ಮನುಷ್ಯ ಮತ್ತು ದೇವರ ನಡುವಿನ ಸಂಬಂಧವನ್ನು ಕಟ್ಟಿಕೊಂಡಿದೆ. ದೇವರು, ಜಾತಿ, ಧರ್ಮ, ನರಕ, ಪಾಪ, ಪುಣ್ಯ, ಸ್ವರ್ಗ ಮೊದಲಾದವುಗಳೆಲ್ಲಾ ಒಂದರೊಳಗೊಂದರಂತೆ ಹೆಣೆದುಕೊಂಡು

ಇಲ್ಲಿನ ಸಮಾಜದ ತಾರತಮ್ಯ ದಾರಿಯನ್ನು ರೂಪಿಸಿವೆ. ಗಾಣಿಗ ಸಮುದಾಯದವರು ಕೂಡ ಇಂತಹ ರಚನೆಯ ಒಳಗಡೆಯೇ ಆಕಾರ ಪಡೆದುಕೊಂಡವರಾಗಿದ್ದಾರೆ. ಅವರ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಯೋಚಿಸುವಾಗ ಸಹಜವಾಗಿಯೇ ಅವರ ಮೂಲಸಂಸ್ಕೃತಿಯ ರೂಪಗಳು ಕಣ್ಣೆದುರಿಗೆ ಬರುತ್ತವೆ. ಗಾಣಿಗರು ಮತ್ತು ಇತರ ಸಮುದಾಯಗಳ ನಡುವಿನ ಸಂಬಂಧ ಅದಕ್ಕೂ ಮೊದಲಿನಿಂದಲೇ ಭಾವನಾತ್ಮಕವಾಗಿದ್ದುದು ತಿಳಿದು ಬರುತ್ತದೆ. ಹಿಂದಿನ ಕಾಲದ ಗಾಣಿಗರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ನಿರ್ವಹಿಸುತ್ತಲೇ ಇಲ್ಲಿನ ಕೃಷಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಈ ನೆಲದ ಸಾಂಸ್ಕೃತಿಕ ಆಚರಣೆಗಳಾದ ಹಬ್ಬ ಹರಿದಿನಗಳಲ್ಲಿ ಅವರ ಪಾಲುಗಾರಿಕೆ ಸಹಜವಾಗಿರುತ್ತಿತ್ತು. ಅವರ ಕೌಟುಂಬಿಕ ಜೀವನದ ಮದುವೆ ಮುಂತಾದ ಸಂಪ್ರದಾಯಗಳು ಕೂಡ ಈ ನೆಲದ ಸಂಸ್ಕೃತಿಯ ಒಳರೂಪಗಳನ್ನು ಬಿಟ್ಟುಕೊಡುತ್ತಿದ್ದವು. ವಾಸ್ತವವಾಗಿ ಪರಿವರ್ತನೆಯ ನಂತರ ಅವರಿಗೆ ವೀರಶೈವ ಧಾರ್ಮಿಕ ಆಚರಣೆಗಳ ಪ್ರಭಾವಕ್ಕೆ ಒಳಗಾಗುವುದು ಅನಿವಾರ್ಯವಾಯಿತು. ರಾಜಪ್ರಭುತ್ವವನ್ನು ಎದುರು ಹಾಕಿಕೊಳ್ಳಲಾಗದ ಅಸಂಘಟಿತವಾದ ಸಾಮಾನ್ಯ ಜನಸಮುದಾಯ ಎಲ್ಲವನ್ನೂ ಭೀತಿಯ ಆವರಣದಲ್ಲಿ ಅನುಭವಿಸಬೇಕಾಗಿದ್ದಿತು. ಗಾಣಿಗರು ಕೂಡ ಇದರಿಂದ ಪಾರಾಗುವಂತಿರಲಿಲ್ಲ. ಆದರೆ ಗಾಣಿಗರು ತಮ್ಮ ಯಾವ ಮೂಲ ನೆಲೆಯಿಂದ ಬಂದವರೆಂಬುದು ಸ್ಪಷ್ಟವಾಗಿ ಅಂದಿನ ಸಾಮಾಜಿಕ ಸ್ಥಾನಮಾನಗಳಿಂದ ತಿಳಿಯಲಾಗಿದೆ. ಹಿಂದೂ ಶೂದ್ರ ಜನಸಮುದಾಯದ ಜೊತೆಗಿನ ಗಾಣಿಗರ ಒಡನಾಟ ಮತ್ತು ಪಾಲ್ಗೊಳ್ಳುವಿಕೆಯನ್ನು ಗಮನಿಸಿದರೆ ಅವರ ಸಾಮಾಜಿಕ ಸ್ಥಾನಮಾನಗಳ ಚಿತ್ರಣ ದೊರೆಯುತ್ತದೆ. ಊರಿನ ಯಾವುದೇ ಮುಖ್ಯ ಆಚರಣೆ ಮತ್ತು ಘಟನೆಗಳಲ್ಲಿ ಗಾಣಿಗರ ಉಪಸ್ಥಿತಿ ಇದ್ದೇ ಇರುತ್ತದೆ.

ಉತ್ತರ ಕರ್ನಾಟಕದ ಅದರಲ್ಲೂ ಬಳ್ಳಾರಿ ಜಿಲ್ಲೆಯ ಬಹುಪಾಲು ಹಳ್ಳಿಗಳಲ್ಲಿ ಜಾತ್ರೆ ನಡೆಸುವುದು, ನ್ಯಾಯ ಪಂಚಾಯ್ತಿ ಮಾಡುವುದು, ಸುಗ್ಗಿಯ ಆಚರಣೆ, ದೇವರನ್ನು ಹೊರಡಿಸುವುದು-ಹೀಗೆ ಯಾವುದೇ ಸಂದರ್ಭದಲ್ಲಿ ಅವರ ಹಾಜರಾತಿಯಿರುತ್ತದೆ. ಕೆಲವು ಹಳ್ಳಿಗಳಲ್ಲಿ ಒಬ್ಬಿಬ್ಬರು ಸ್ಥಿತಿವಂತ ಗಾಣಿಗರು ಇದ್ದ ಕಾಲಕ್ಕೆ ಅವರ ಊರಿನ ಒಟ್ಟಾರೆ ಸಾಮಾಜಿಕ-ಸಾಂಸ್ಕೃತಿಕ ನಿರ್ಣಯಗಳಲ್ಲಿ ಉಳಿದ ಮೇಲ್ಜಾತಿಯ ಸದಸ್ಯರ ಸ್ಥಾನ-ಮಾನದಲ್ಲಿಯೇ ಕಾಣಿಸಿಕೊಳ್ಳುತ್ತಿದ್ದರು. ಆದ್ದರಿಂದ ಹಿಂದೆ ಗಾಣಿಗರು ಸಾಮಾಜಿಕವಾಗಿ ಅಪಮಾನವನ್ನು ಅನುಭವಿಸುವ ಸ್ತರದಲ್ಲೇನೂ ಇರಲಿಲ್ಲ. ಅವರು ಈಗ ಅನುಭವಿಸುತ್ತಿರುವ ಅಪಮಾನ ತೀರಾ ಇತ್ತೀಚೆಗೆ ಆರಂಭವಾದುದು ಎನಿಸುತ್ತದೆ. ಅಲ್ಲದೆ ಕೊಟ್ಟೂರು ಪ್ರಾಂತ್ಯದಲ್ಲಿರುವ..... ಅವರ ಮನೆತನದವರ ರಾಜಕೀಯ ಪ್ರಭಾವವನ್ನು ಗಮನಿಸಿದರೆ ಬಹುಶಃ ಎಲ್ಲಾ ಜಾತಿಯ ಬಡವರೂ ತಮ್ಮ ಜಾತಿಯ ಶ್ರೀಮಂತರ ಬಗ್ಗೆ ಅನೇಕ ಭ್ರಮೆಗಳನ್ನಿಟ್ಟುಕೊಂಡಂತೆ ಕಾಣುತ್ತದೆ. ಹಿಂದಿನಿಂದಲೂ ಗಾಣಿಗರು ಯಾವುದೇ ಬಗೆಯ ಉನ್ನತಸ್ಥಾನಮಾನಗಳನ್ನು ಅನುಭವಿಸದಿದ್ದರೂ ಈ ನೆಲದ ಅಸ್ಪೃಶ್ಯರು ಮತ್ತು ಗಾಣಿಗರ ನಡುವಿನ ಸಂಬಂಧಗಳು ಕುತೂಹಲಕರವಾಗಿದೆ. (ಇತರೆ ವೀರಶೈವ ಪಂಗಡದವರನ್ನು ಸದಾ ದೂರವಿಡುವ ಅಥವಾ ಅವರಿಂದ ದೂರವನ್ನು ಕಾಪಾಡಿಕೊಳ್ಳುವ ಗಾಣಿಗರು ಅವರಿಂದ ಸಾಮಾಜಿಕ ಧಾರ್ಮಿಕಾಚರಣೆಯನ್ನು

ಬಯಸುತ್ತಲೇ) ದಲಿತರು ಮತ್ತು ಗಾಣಿಗರ ನಡುವಿನ ಸಮಾನ ಆರ್ಥಿಕ ಅಂಶವೆಂದರೆ ಈ ಎರಡೂ ಸಮುದಯದವರು ಹಿಂದೂ ಮೇಲ್ಜಾತಿಯವರ, ಅದರಲ್ಲೂ ಶ್ರೀಮಂತರ ಮನೆಗಳಲ್ಲಿ ಜೀತಕ್ಕಿರುವುದು. ಗಾಣಿಗರ ವಿಚಾರದಲ್ಲಿ ಉದಾರವಾಗಿರುವ ಮೇಲ್ಜಾತಿಗಳು ಅಸ್ಪೃಶ್ಯರ ವಿಚಾರದಲ್ಲಿ ಹಾಗಿಲ್ಲ. ಗಾಣಿಗರು ಜೀತದಾಳುಗಳಾಗಿರುವುದಕ್ಕೆ ಬಡತನ ಕಾರಣವಾದರೆ ಅಸ್ಪೃಶ್ಯರಿಗೆ ಸಾಮಾಜಿಕ-ಆರ್ಥಿಕ ಕಾರಣಗಳಿರುತ್ತವೆ. ಶ್ರೀಮಂತರ ವಿಚಾರ ಬಿಡಿ, ಮೇಲ್ಜಾತಿಗಳ ಮನೆಗಳಲ್ಲಿ ಉಂಡ ತಟ್ಟೆಯನ್ನು ತೊಳೆದು ಇಟ್ಟು ಹೋಗುವ ಗಾಣಿಗನ ರೀತಿಗೂ ತನ್ನದೇ ತಟ್ಟೆಯಲ್ಲಿ ಕಟಂಬಳಿ ಹಾಕಿಸಿಕೊಂಡು ಉಂಡು ತೊಳೆದಿಟ್ಟುಕೊಳ್ಳುವ ದಲಿತನ ರೀತಿಗೂ ಇರುವ ವ್ಯತ್ಯಾಸವೇ ಗಾಣಿಗರ ಹಾಗೂ ದಲಿತರಿಗೂ ಇರುವ ಸಾಮಾಜಿಕ ಸಂಬಂಧಗಳನ್ನು ತೋರಿಸುತ್ತದೆ. ಹಿಂದಿನಿಂದ ಗಾಣಿಗರು ಕೂಡ ದಲಿತರನ್ನು ಹೀಗೆ ನೋಡಿಕೊಳ್ಳುತ್ತಿದ್ದುದಾಗಿ ತಿಳಿದುಬರುತ್ತದೆ. ಅಂದರೆ ಗಾಣಿಗರು ಕೂಡ ಮೂಲಭೂತವಾಗಿ ಹಿಂದೂ ಶೂದ್ರ ಸಮುದಾಯದ ಮೇಲುಸ್ತರದ ಭಾವನೆಗಳ್ನು ದಲಿತರ ವಿಚಾರದಲ್ಲಿ ಹೊಂದಿದ್ದರು ಎಂದಾಗುತ್ತದೆ.

ಮುಖ್ಯವಾಗಿ ಇಲ್ಲಿ ದಲಿತರು ಮತ್ತು ಗಾಣಿಗರ ನಡುವಿನ ಸಂಬಂಧದ ಮಾತು ಯಾಕೆ ಪ್ರಸ್ತಾಪವಾಯಿತೆಂದರೆ ಗಾಣಿಗರು ದಲಿತಮೂಲ ನೆಲೆಯಿಂದ ಬಂದವರಾಗಿದ್ದರೆ ಈ ಬಗೆಯ ಭಾವನೆಗಳು ಬರುತ್ತಿದ್ದವೇ? ಅಥವಾ ದಲಿತ ನೆಲೆಯಿಂದ ಬಂದೂ ಕೂಡ ಮತಾಂತರದಿಂದ ಪ್ರಾಪ್ತವಾದ ಸಾಮಾಜಿಕ ಹುಸಿ ಪ್ರತಿಷ್ಠೆಯ ಭಾವನೆಗಳು ಅವರಿಗೆ ಕಾಡುತ್ತಿರಬಹುದೇ? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಇದರಿಂದ ಸಾಧ್ಯವಾಗುತ್ತದೆ. ಅಲ್ಲದೆ ಮತಾಂತರಕ್ಕೆ ಒಳಗಾಗಿರುವುದನ್ನು ನಿರ್ಭೀತಿಯಿಂದ ಒಪ್ಪಿಕೊಳ್ಳುವ ಗಾಣಿಗರು ಮೂಲದಲ್ಲಿ ದಲಿತರೇ ಆಗಿದ್ದಿರಬಹುದೇ? ಎನ್ನುವ ಪ್ರಶ್ನೆಗೆ ಸಿಡಿಮಿಡಿಗೊಳ್ಳುತ್ತಾರೆ.

ಈ ಎಲ್ಲ ಕಾರಣಗಳಿಂದ ಗಾಣಿಗ ಸಮುದಾಯದವರು ಸಮಾಜದಲ್ಲಿ ಸಾಮಾಜಿಕ ಅಪಮಾನದ ಶಾಪವನ್ನೆದುರಿಸುವ ದಲಿತರ ನೆಲೆಯೂ ಅಲ್ಲದ ಶ್ರೀಮಂತ ಶೂದ್ರ ವರ್ಗದ ಪಾಳೇಗಾರಿಕೆಯ ನೆಲೆಯೂ ಅಲ್ಲದ ಶ್ರೀಮಂತ ಶೂದ್ರ ವರ್ಗದ ಪಾಳೇಗಾರಿಕೆಯ ನೆಲೆಯೂ ಅಲ್ಲದ ಬಡತನ, ಅಂಧಶ್ರದ್ಧೆ, ಕಠಿಣ ಪರಿಶ್ರಮದ ಸಾಮಾನ್ಯ ಬಡತನ, ಅಂಧಶ್ರದ್ಧೆ, ಕಠಿಣ ಪರಿಶ್ರಮದ ಸಾಮಾನ್ಯ ಹಿಂದುಳಿದ ಜನಸಮುದಾಯಗಳ ವರ್ಗಕ್ಕೆ ಸೇರಿದವರಾಗಿದ್ದಾರೆ. ಅಪರೂಪಕ್ಕೆಂಬಂತೆ ಪಾರಂಪರಿಕವಾದ ಶ್ರೀಮಂತಿಕೆ, ರಾಜಕೀಯ ನಂಟು ಬೆಳೆಸಿಕೊಂಡು ಬಂದವರನ್ನು ಬಿಟ್ಟರೆ ಗಾಣಿಗರು ಇವತ್ತಿಗೂ ಅಂದಿಗೂ ಅವರ ಸಾಮಾಜಿಕ ಸ್ಥಾನಮಾನಗಳಲ್ಲಿ ಮಹತ್ತರವಾದ ಸ್ಥಿತ್ಯಂತರಗಳನ್ನು ಅನುಭವಿಸಿಲ್ಲ. ಆದರೆ ಸಾಂಸ್ಕೃತಿಕವಾಗಿ ಕೂಡ ಅವರು ಅದೇ ರೀತಿಯ ಗತಿಶೀಲತೆಯನ್ನು ಹೊಂದಿದ್ದಾರೆ ಎಂದು ಹೇಳಲು ಬರುವುದಿಲ್ಲ. ಆಧುನಿಕ ಪ್ರಸ್ತುತದ ಧರ್ಮ ರಾಜಕಾರಣ, ವಿಜ್ಞಾನ ಹಾಗೂ ತಂತ್ರಜ್ಞಾನದ ಶಿಕ್ಷಣ ಸ್ಪರ್ಧಾತ್ಮಕವಾದ ವ್ಯಾವಹಾರಿಕ ಜಗತ್ತಿನಲ್ಲಿ ಸಾಮಾನ್ಯರೂ ಹೇಗಬೇಕಾದ ಅನಿವಾರ್ಯತೆಯಿಂದಾಗಿ ಇಲ್ಲಿನ ಸಮುದಾಯಗಳು ಕಟ್ಟಳೆಗಳಲ್ಲಿ ತಕ್ಕ ಮಾರ್ಪಾಡುಗಳನ್ನು ಮಾಡಿಕೊಂಡಿವೆ. ಇಲ್ಲಿಗೆ ಒಂದು ಶತಮಾನದ ಹಿಂದೆ ಇದ್ದ ಜಾತಿಧರ್ಮಗಳನ್ನು ಕುರಿತಾದ ಬದ್ಧತೆ ಈಗ ಶಿಥಿಲಗೊಂಡಿದೆ. ಇವತ್ತು ತನ್ನ ಸಮುದಾಯವನ್ನು ಧಾರ್ಮಿಕ ನೀತಿ ನಿಯಮಗಳಿಗೆ ಕಟ್ಟಿಹಾಕುವುದು

ಸಾಧ್ಯವಿಲ್ಲದಷ್ಟರ ಮಟ್ಟಿಗೆ ಧರ್ಮಗಳು ಜಡಗೊಂಡಿವೆ. ಬೇಕಿರಲಿ, ಬೇಡವಾಗಲಿ ಜಾಗತೀಕರಣ ನಮ್ಮ ಮನೆಗಳ ಅಡಿಗೆಯ ಮನೆಯನ್ನು ಪ್ರವೇಶ ಮಾಡಿಯಾಗಿದೆ. ಧಾರ್ಮಿಕ ಆಚರಣೆ, ಮಡಿ ಮೈಲಿಗೆಗಳೆಂದು ಹೆಜ್ಜೆ ಹೆಜ್ಜೆಗೆ ಭಜನೆ ಮಾಡುತ್ತಿದ್ದ ಪುರೋಹಿತಶಾಹಿಯೇ ತನ್ನ ಗರ್ಭಗುಡಿಯ ಬಾಗಿಲನ್ನು ತೆರೆದುಕೊಂಡು ಜಾಗತೀಕರಣದ ಲಾಭಗಳನ್ನು ಪಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ಗಾಣಿಗ ಸಮುದಾಯದ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತು ಯೋಚಿಸುವ ಮೂಲಕ ಉಪಸಂಸ್ಕೃತಿಗಳು ಅದನ್ನು ಎದುರಿಸುವ ಸ್ವರೂಪವನ್ನು ತಿಳಿದುಕೊಳ್ಳಬೇಕಾಗಿದೆ ಎಂದು ಹೇಳಿದರು ಅತಿಶಯೋಕ್ತಿಯಾಗಲಾರದು.

### ೮.೪. ಕೈಗಾರಿಕೀಕರಣದ ಪರಿಣಾಮ ಗಾಣಿಗರ ಇಂದಿನ ಸ್ಥಾನಮಾನ ಮತ್ತು ಸಂಬಂಧಗಳು

ಆಧುನಿಕ ಕೈಗಾರಿಕೆಗಳು ಮುಖ್ಯವಾಗಿ ಭಾರತದ ರೈತಾಪಿ ಜನಸಮುದಾಯದಿಂದ ಹಿಡಿದು ಕಮ್ಮಾರ, ಅಕ್ಕಸಾಲಿಗ, ಬಡಿಗ, ಕುಂಬಾರ, ನೇಕಾರ ಮತ್ತು ಗಾಣಿಗರಂತಹ ಸಮುದಾಯಗಳು ಮೂಲಕ ಕಸುಬಿನ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಬೀರಿವೆ. ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರುವಂತೆ ಇಂಥ ಸಮುದಾಯಗಳ ಆರ್ಥಿಕ ಹಿಂದುಳಿಯುವಿಕೆಗೂ ಕಾರಣವಾಗಿದೆ. ಮುಖ್ಯವಾಗಿ ಕೈಗಾರಿಕೆಗಳು ಪ್ರಕೃತಿ ಸಂಪತ್ತಿನ ಸಾರ್ಥಕ ಬಳಕೆಯಿಂದ ಜನರ ಅವಶ್ಯಕತೆಗಳನ್ನು ವೇಗವಾಗಿ ಪೂರೈಸುವ ಕೆಲಸ ಮಾಡಿದವು, ನಿಜ. ಆದರೆ ಈ ತ್ವರಿತ ಅಭಿವೃದ್ಧಿಯ ಜೊತೆಗೆ ತಂತಮ್ಮ ಮೂಲ ಕಸುಬುಗಳನ್ನೇ ನಂಬಿಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಈ ಜನಸಮುದಾಯಗಳು ದಾರಿಕಾಣದ ಪರಿತಪಿಸುವಂತಾಯಿತು. ಇದು ಆ ಸಮುದಾಯಗಳ ಆರ್ಥಿಕ ಹಿಂದುಳಿಯುವಿಕೆಗೆ ಕಾರಣವಾಯಿತು ಎಂದು ಮೇಲ್ನೋಟಕ್ಕೆ ಅನಿಸಿದರೂ ಅದರಿಂದ ಸಾಂಸ್ಕೃತಿಕವಾಗಿ ಕೂಡ ಒಂದು ಬಗೆಯ ಹಿಂಜರಿಕೆ ಉಂಟಾಯಿತು. ಆಧುನಿಕ ಕೈಗಾರಿಕೆಗಳ ಉತ್ಪಾದನೆ, ವಿನಿಮಯ, ವಿತರಣೆಯಂತಹ ವ್ಯವಹಾರಿಕ ಪರಿಭಾಷೆ ಹಾಗೂ ಆ ಮೂಲಕ ಲಾಭ-ನಷ್ಟಗಳೇ ಪ್ರಮುಖವಾಗುತ್ತವೆ. ಆದರೆ ಸಾಂಪ್ರದಾಯಿಕ ವೃತ್ತಿಗಳನ್ನು ಅವಲಂಬಿಸಿ ಬದುಕುವ ಸಮುದಾಯಗಳಿಗೆ ವ್ಯವಹಾರದ ಹೊರತಾಗಿಯೂ ಸಾಂಸ್ಕೃತಿಕ ಅನನ್ಯತೆ ಮುಖ್ಯವಾಗುತ್ತದೆ. ಆದ್ದರಿಂದ ಕೈಗಾರಿಕೀಕರಣ ಆಧುನಿಕ ಬದುಕಿಗೆ ವೇಗವನ್ನು, ಆಕರ್ಷಣೆಯನ್ನು ತಂದದ್ದು ನಿಜವಾದರೂ ಗಾಣಿಗರಂಥ ಸಮುದಾಯಗಳು ಆರ್ಥಿಕ ಜೀವನವನ್ನು ಅಸಹನೀಯವಾಗಿಸಿತು. ಗಾಣಿಗರು ಕಂಡ ಧಾರ್ಮಿಕ ಸ್ಥಿತ್ಯಂತರಕ್ಕಿಂತ ಈ ಬಗೆಯ ಆರ್ಥಿಕ ಹಿಂಜರಿತ ಅವರ ಬದುಕನ್ನು ಅತಂತ್ರವಾಗಿಸಿದೆ.

ಕೈಗಾರಿಕೀಕರಣದಿಂದ ಮೊಟ್ಟಮೊದಲಿಗೆ ಗಾಣಿಗರ ಸಾಂಪ್ರದಾಯಿಕ ವೃತ್ತಿಯ ಸಲಕರಣೆಗಳು ಮೂಲೆ ಸೇರಿದವು. ದೊಡ್ಡ ಹಾಗೂ ಚಿಕ್ಕಪುಟ್ಟ ನಗರಗಳಲ್ಲಿ ಆಧುನಿಕ ಮಾರುಕಟ್ಟೆಗಳು ಜಾರಿಗೆ ಬಂದು ವ್ಯವಹಾರವನ್ನು ಕೇಂದ್ರೀಕರಿಸಿದವು. ಗಾಣದಿಂದ ಎಣ್ಣೆ ತೆಗೆದು ಊರು ಊರಿಗೆ ಹೋಗಿ ಮಾರುತ್ತಿದ್ದ ಗಾಣಿಗರು ಆಧುನಿಕ ಮಾರುಕಟ್ಟೆಯಲ್ಲಿ ದೊರಕುವ ದಿನ್ಸಾಗರಿ ಎಣ್ಣೆಯು ಉತ್ಪನ್ನಗಳ ಎದುರು ಪೈಪೋಟಿ ನಡೆಸುವುದು ಅಸಾಧ್ಯವಾಯಿತು. ಬಂಡವಾಳಶಾಹಿಗಳು ಕಾರ್ಖಾನೆಯ ಉತ್ಪನ್ನಗಳನ್ನು ನೇರವಾಗಿ ಖರೀದಿಸಿ ಮಾರುಕಟ್ಟೆಯನ್ನು ನಿರ್ವಹಿಸುತ್ತಿದ್ದರು. ಜನರು ತಮ್ಮ ಅಗತ್ಯಗಳನ್ನು ಹುಡುಕಿಕೊಂಡು ಅನೇಕ ಬಗೆಯ

ಮಾದರಿಗಳಲ್ಲಿ ಇಷ್ಟವಾದುದನ್ನು ಆಯ್ಕೆ ಮಾಡಲಾರಂಭಿಸಿದರು. ಮಾರುಕಟ್ಟೆಯ ಜಾಲ ಅಪಾರ ವೆಚ್ಚದ ಜಾಹೀರಾತುಗಳ ಮೂಲಕ ಗ್ರಹಕರನ್ನು ಸೆಳೆಯಿತು.

ಗಾಣಿಗರು ಕುಸುಬಿ, ಶೇಂಗಾ, ಎಳ್ಳು ಮುಂತಾದ ಬೀಜಗಳನ್ನು ಹಾಕಿ ತಯಾರು ಮಾಡುತ್ತಿದ್ದ ಕೆಲಸ, ಅಲ್ಲಿ ಉಂಟಾಗುವ ಧೂಳು, ಶ್ರಮ ಇವೆಲ್ಲವುಗಳ ಬದಲಾಗಿ ರೆಡಿಮೇಡ್ ಸಿಗುವ ಎಣ್ಣೆ. ಪ್ಯಾಕೇಟುಗಳು ಇಲ್ಲವೆ ಐದು ಕೆ.ಜಿ. ಕ್ಯಾನ್‌ಗಳಿಗೆ ಹಾತೊರೆಯುವಂತಾಯಿತು. ಪರಿಣಾಮವಾಗಿ ಗಾಣಿಗರ ದಿನನಿತ್ಯದ ಆದಾಯದಲ್ಲಿ ಗಣನೀಯ ಇಳಿಮುಖವಾಗುತ್ತ ಬಂದಿತು. ಅನಿವಾರ್ಯವಾಗಿ ತಮ್ಮ ಆರ್ಥಿಕ ಹಿಂದುಳಿಯುವಿಕೆಯಿಂದ ಮಾರುಕಟ್ಟೆಯಲ್ಲಿ ಪೈಪೋಟಿ ಮಾಡಲಾಗದೆ ಗಾಣಿಗರು ಜೀವನೋಪಾಯಕ್ಕಾಗಿ ಇತರೆ ಮಾರ್ಗಗಳನ್ನು ಹುಡುಕಿಕೊಳ್ಳಬೇಕಾಯಿತು.

ಬಡವ-ಶ್ರೀಮಂತರೆನ್ನದೆ ನಗರಳತ್ತ ವಲಸೆ ಹೊರಟಿರುವ ಗ್ರಾಮೀಣ ಜನಸಮುದಾಯ ಕೇವಲ ಕೆಲಸ ಹುಡುಕಿಕೊಂಡು ಹೋಗುತ್ತಿಲ್ಲ. ಆಳುವ ವ್ಯವಸ್ಥೆ ಯಾವಾಗಲೂ ಆರೋಗ್ಯ, ಶಿಕ್ಷಣ, ನೀರು ಸರಬರಾಜು, ವಿದ್ಯುತ್, ರಸ್ತೆ ಮೊದಲಾದ ವಿಚಾರಗಳಲ್ಲಿ ನಗರಗಳ ಪರವಾಗಿರುತ್ತವೆ. ಆದುದರಿಂದ ಆಧುನಿಕತೆಗೆ ಸಾಧ್ಯವಾದಷ್ಟು ಒಡ್ಡಿಕೊಳ್ಳುವ ಮೂಲಕ ನಾಗರೀಕರಾಗಬೇಕೆಂದು ಬಯಸುತ್ತಾರೆ. ನಗರಗಳಲ್ಲಿರುವವರೆಲ್ಲಾ ನಾಗರೀಕರೇ? ಎನ್ನುವ ಪ್ರಶ್ನೆ ಬೇರೆ. ಯಾಕೆಂದರೆ ನಗರಗಳಲ್ಲಿನ ವ್ಯವಹಾರಿಕ ಸ್ಪರ್ಧೆ ಮತ್ತು ಕೇಂದ್ರಿಕೃತವಾಗಿರುವ ಬಂಡವಾಳದಿಂದಾಗಿ ಕೊಲೆ, ಮೋಸ, ವ್ಯಾಪಕವಾದ ಅನೈತಿಕತೆ, ಧಾರ್ಮಿಕ ಭಂಡತನ ನಗರಗಳನ್ನು ತಲ್ಲಣಗೊಳಿಸುತ್ತವೆ. ಆದರೆ ಗಾಣಿಗರು ನಗರಗಳಿಗೆ ಹೋಗುವುದು ತಮ್ಮ ಸಾಮಾಜಿಕ ಶೈಕ್ಷಣಿಕ ಸುಧಾರಣೆಗಲ್ಲ. ಬಸ್‌ಸ್ಟ್ಯಾಂಡಿನಲ್ಲಿ ಹಣ್ಣು, ತರಕಾರಿ ಮಾರಾಟ, ಬಟ್ಟೆ ಅಂಗಡಿ, ವೈನ್‌ಶಾಪ್‌ಗಳಲ್ಲಿ ಕೆಲಸ. ರಸ್ತೆಬದಿಯಲ್ಲಿ ಬೀಡಿ ಸಿಗರೇಟು ಅಂಗಡಿ ಇಡುವುದು. ಹೋಲ್‌ಸೇಲ್ ಮಾರಾಟ ಹೀಗೆ ಜೀವನ ನಿರ್ವಹಣೆಗೆ ಸಾಧ್ಯವಾದುದೆಲ್ಲವನ್ನು ಅವರು ಮಾಡುತ್ತಾರೆ. ಅನ್ಯಜಾತಿಯ ಶ್ರೀಮಂತರು ಇಟ್ಟುಕೊಂಡ ದೊಡ್ಡ ಅಂಗಡಿಗಳಲ್ಲಿ ದಿನಗೂಲಿಯಂತೆ ಕೆಲಸ ಮಾಡುತ್ತಾರೆ. ಹಳ್ಳಿಗಳಲ್ಲಿ ಉಳಿದವರು ಕೃಷಿ ಕೆಲಸ ಮೊದಲಾದ ಕಸುಬುಗಳನ್ನು ಅವಲಂಬಿಸಿದ್ದಾರೆ.

ಮುಖ್ಯವಾಗಿ ಈ ಸಮುದಾಯದಲ್ಲಿ ಜಾಗೃತಿ ಉಂಟಾಗಬೇಕು ಉನ್ನತ ವಿದ್ಯಾಭ್ಯಾಸ ಪಡೆಯುವವರ ಸಂಖ್ಯೆ ಹೆಚ್ಚಾಗಬೇಕು. ವಿಶೇಷವಾಗಿ ಹಳ್ಳಿಗಾಡಿನಲ್ಲಿ ವಾಸವಾಗಿರುವ ಈ ಸಮುದಾಯದವರು ತಮ್ಮ ಮೂಲವೃತ್ತಿಯಾದ ಗಾಣದ ಮೂಲಕ ಎಣ್ಣೆ ತೆಗೆಯುವ ಕೆಲಸದಲ್ಲಾಗಲಿ, ರೈತಾಪಿ ಕೆಲಸದಲ್ಲಾಗಲಿ ಇಂಥ ಕೆಲಸಗಳಲ್ಲಿಯೇ ಮಕ್ಕಳನ್ನು ತೊಡಗಿಸಿದ್ದರೆ. ಈ ಕೆಲಸ ಮಾಡಿಸದೆ ಶಾಲೆ-ಕಾಲೇಜುಗಳಿಗೆ ಕಳಿಸುವತ್ತ ಮನಸ್ಸು ಮಾಡಬೇಕಾಗಿದೆ. ಆಧುನಿಕತೆ ಹಾಗೂ ಜಾಗತೀಕರಣದ ಪ್ರಭಾವ ಪರಿಣಾಮದಿಂದಾಗಿ ಇಂದು ಸಮುದಾಯದಲ್ಲಿ ಅನೇಕ ಬದಲಾವಣೆಗಳು ಆಗುತ್ತಲಿವೆ. ಇಂಥದರಲ್ಲಿ ನಾವು ನಮ್ಮ ಮೂಲವೃತ್ತಿಗೇ ಅಂಟಿಕೊಂಡು ಕೂಡುವುದು, ಸರಿಯಲ್ಲ. ಬೇರೆ ಬೇರೆ ವೃತ್ತಿಗಳನ್ನು ಮಾಡುವ ಸಾಹಸಕ್ಕೆ ನಮ್ಮ ಸಮುದಾಯ ಇಂದು ಕೈ ಹಾಕಬೇಕಾಗಿದೆ. ಅಂದಾಗ ಈ ಸಮುದಾಯವು ಮುಂದುವರಿಯಲಿಕ್ಕೆ ಸಾಧ್ಯವಾಗುವುದು.

ಸಮುದಾಯದ ಮುಖ್ಯ ವಾಹಿನಿಯಲ್ಲಿ ಸೇರಿಕೊಂಡು ಮುನ್ನಡೆಯಲು ಸಮರ್ಥವಾಗುವುದು. ಈ ದಿಸೆಯಲ್ಲಿ ಈ ಸಮುದಾಯ ಬಾಂಧವರಿಗೆ ಸೂಕ್ತ ಮಾರ್ಗದರ್ಶನ ನೀಡಲು ಉತ್ತರ ಕರ್ನಾಟಕದ ಅದರಲ್ಲೂ ಬಳ್ಳಾರಿ ಜಿಲ್ಲಾ ಗಾಣಿಗರ ಸಂಘಗಳು ಹುಟ್ಟಿಕೊಂಡಿವೆ. ಈ ಸಂಘಗಳು ಈ ಸಮುದಾಯ ಬಾಂಧವರ ಹಿತವನ್ನು ಕಾಪಾಡುವಲ್ಲಿ ಮಹತ್ವದ ಪಾತ್ರ ವಹಿಸುತ್ತಲಿರುವುದು ಶುಭ ಚಿಹ್ನೆಯಾಗಿದೆ.

ಶಿಕ್ಷಣವು ಜನತೆಗೆ ಅಂಟಿದ ಅಜ್ಞಾನದ ಪರದೆಯನ್ನು ಹರಿಯುವ ಸಾಧನವಾಗಿದೆ. ಶಿಕ್ಷಿತರಾದರೆ ಅವರಲ್ಲಿ ವೈಜ್ಞಾನಿಕ ಮನೋಭಾವ, ವೈಚಾರಿಕತೆ ಧೈರ್ಯ ಹಾಗೂ ಬದುಕಿನ ಬಗ್ಗೆ ಭರವಸೆ ಉಂಟಾಗುವುದು. ಆದ್ದರಿಂದ ಈ ಸಮುದಾಯದವರ ಎಲ್ಲ ಸಮಸ್ಯೆಗಳಿಗೆ ಶಿಕ್ಷಣವೇ ಪರಿಹಾರವನ್ನು ಸೂಚಿಸುವ ದಿವ್ಯ ಔಷಧಿಯಾಗಿದೆ. ಈಗ ಕಾಲ ಬದಲಾಗಿದೆ. ಕಾಲಕ್ಕೆ ತಕ್ಕಂತೆ ನಾವು ಬದಲಾಗಬೇಕಲ್ಲವೇ?

ಆಧುನಿಕತೆಯ ಈ ಯುಗದಲ್ಲಿ ನಾವು ನಮ್ಮ ಮಕ್ಕಳಿಗೆ ಒಳ್ಳೆಯ ಶಿಕ್ಷಣ ಕೊಡಿಸಿ ಅವರನ್ನು ಒಳ್ಳೆಯ ನಾಗರೀಕರನ್ನಾಗಿ ಮಾಡುವ ಅಗತ್ಯವಿದೆ. ಅಷ್ಟೇ ಅಲ್ಲ ಅವರು ಪರಾವಲಂಬಿಗಳಾಗದೆ ಸ್ವಾವಲಂಬಿಗಳಾಗಿ ಬದುಕುವಂತೆ ಅವರಿಗೆ ಸ್ವಾವಲಂಬನದ ಪಾಠವನ್ನು ಕಲಿಸುವ ಅಗತ್ಯವಿದೆ. ಈ ದಿಸೆಯಲ್ಲಿ ಈ ಸಮುದಾಯ ಬಾಂಧವರು ಮುನ್ನಡೆದರೆ ಖಂಡಿತವಾಗಿಯು ಈ ಸಮುದಾಯದಲ್ಲೂ ಒಳ್ಳೆಯ ಮುಖಂಡರು, ರಾಜಕೀಯ ಮುತ್ಸದ್ಧಿಗಳು ಗಣ್ಯರು ರೂಪುಗೊಳ್ಳುವಲ್ಲಿ ಯಾವುದೇ ಸಂಶಯವಿಲ್ಲ.

### ೮.೫. ಗಾಣಿಗರು ಮತ್ತು ಆಧುನಿಕ ಜಗತ್ತು

ಸಮಾಜ ಸೇವಕರು ಮತ್ತು ಜಾನಪದ ವಿದ್ವಾಂಸರಾದ 'ವೆರಿಯರ್ ಎಲ್ವಿನ್' ಒಮ್ಮೆ ಮಧ್ಯ ಪ್ರದೇಶದ ಗೊಂಡ ಕಲಾವಿದರೊಂದಿಗೆ ಮಾತನಾಡುವಾಗ ತನ್ನ ಹಾಡಿಯ ಸಮೀಪದ ಹೊಸ ರೈಲು ಮಾರ್ಗಗಳನ್ನು ಕುರಿತು ಕಲಾವಿದ ಈ ರೀತಿ ಹೇಳುತ್ತಾನೆ. ನಾವೆಲ್ಲಾ ಮೊದಲಿಗೆ ನಮ್ಮ ದೇವರ ಕೃಪೆಯಿಂದ ತುಂಬಾ ಸಿರಿವಂತರಾಗಿದ್ದೆವು. ಆರೋಗ್ಯವಾಗಿದ್ದೆವು. ಅಷ್ಟರಲ್ಲಿ ರೈಲು ಬಂತು ಆ ರೈಲಿನ ಚಂದ ನೋಡಿ ನಮ್ಮ ದೇವರು ಕೂಡ ಅದನ್ನು ಹತ್ತಿ ಪಟ್ಟಣಕ್ಕೆ ಹೋದರೂ ಈಗ ನಾವೆಲ್ಲ ಬಡವರಾಗಿದ್ದೇವೆ. ಪಟ್ಟಣದವರು ಸಿರಿವಂತರಾಗಿದ್ದಾರೆ.[೩]

ವೆರಿಯರ್ ಎಲ್ವಿನ್‌ರವರಿಗೆ ಗೊಂಡ ಕಲಾವಿದ ತಿಳಿಸಿದ ಮಾತು ಅತೀ ಮುಗ್ದತೆಯಿಂದ ಕೂಡಿದ್ದರೂ ಅವನ ಬೆನ್ನ ಹಿಂದೆ ಸತ್ಯದ ಒಂದು ಬೆಳಕಿದೆ. ಆಧುನಿಕ ಪ್ರವೇಶದಿಂದಾಗಿ ಭಾರತದ ಇಂತಹ ಬಹುಪಾಲು ಬುಡಕಟ್ಟು ಪಂಗಡಗಳು ಬುಡಮೇಲಾದುದು ಹೇಗೆ. ಇದಕ್ಕೆ ಗಾಣಿಗ ಸಮುದಾಯ ಹೊರತಾಗಿಲ್ಲ.

ಆಧುನಿಕತೆ ಬಾರತೀಯನಿಗೆ ಅಧ್ಯಯನದ ಹೊಸ ಹೊಸ ಅವಕಾಶಗಳನ್ನು ಸೃಷ್ಟಿಸಿದರೂ ಅಧ್ಯಯನಕ್ಕೆ ವಸ್ತುಗಳಾಗಿರುವ ಬುಡಕಟ್ಟು ಸಮುದಾಯಗಳ ಪರಿಸ್ಥಿತಿ ಹೆಚ್ಚು ಹೆಚ್ಚು ಶೋಚನೀಯ ಸ್ಥಿತಿಯನ್ನೇ ಕಾಣುವಂತಾಗಿದೆ. ಬಹುಶಃ ೨೦ನೇ ಶತಮಾನದ ಆರಂಭದಲ್ಲಿ ತಮ್ಮ ಪಾರಂಪರಿಕ ವೃತ್ತಿಯಿಂದಾಗಿ ತುಂಬಾ ಸ್ವಾವಲಂಬಿಗಳಾಗಿದ್ದ ಗಾಣಿಗ ಸಮುದಾಯದವರು ಆರ್ಥಿಕವಾಗಿ ಶೋಚನೀಯ ಸ್ಥಿತಿಯನ್ನು ಬಹುಶಃ

ತಲುಪಿರಲಿಲ್ಲ ಎನಿಸುತ್ತದೆ. ಸಾಮಾಜಿಕವಾದ ನಿಷೇಧಗಳು ಇವರ ಮೇಲಿದ್ದರೂ ಕೂಡಾ ಒಪ್ಪಿತ ವ್ಯವಸ್ಥೆಯಲ್ಲಿ ಜೀವನ ನಿರ್ವಹಣೆ ಮಾಡುತ್ತಿದ್ದ ಇವರಿಗೆ ಸಾಮಾಜಿಕ ಭಾದೆ ತಾಗುವಷ್ಟು ಸೂಕ್ಷ್ಮತೆಯನ್ನು ಬೆಳೆಸಿಕೊಂಡಿದ್ದುದು ಕೂಡಾ ದುರ್ಬಲ ಎನಿಸುತ್ತದೆ.

ಆದರೆ ೨೦ನೇ ಶತಮಾನದ ಪೂರ್ಣಗೊಂಡ ಈ ದಿನಗಳಲ್ಲೂ ಭಾರತೀಯ ಪರಿಸ್ಥಿತಿ ಈ ಸಮುದಾಯದ ಕುರಿತು ಯಾವುದೇ ಆಶಾದಾಯಕ ಭಾವನೆಯನ್ನು ಮೂಡಿಸದೇ ಇರುವುದನ್ನು ಕಾಣಬಹುದು. ಭಾರತ ಮತ್ತು ಪಾಕಿಸ್ತಾನಗಳಲ್ಲಿ ಆರೋಗ್ಯ, ಶಿಕ್ಷಣ, ಭೂ ಸುಧಾರಣೆಗಳನ್ನು ಸಂಪೂರ್ಣ ನಿರ್ಲಕ್ಷಿಸಲಾಯಿತು. ನಂತರದ ದಿನಗಳಲ್ಲಿ ತಮ್ಮ ಆರ್ಥಿಕತೆಯನ್ನು ಜಾಗತೀಕರಣದ ಪೈಪೋಟಿಗಳಿಗೆ ಒಳಪಡಿಸಿದಾಗ ಜಾಗತಿಕ ಪೈಪೋಟಿಯನ್ನು ಎದುರಿಸಲು ಈ ರಾಷ್ಟ್ರಗಳು ಸಾಮರ್ಥ್ಯ ಹೊಂದಲಾರದೆ ಹೋದವು.[೪] ಅಮಾರ್ತ್ಯಸೇನ್‌ರು ತಿಳಿಸುವುದು ಇದನ್ನೇ ಸಾಮರ್ಥ್ಯ ಹೊಂದಿದ ಸಮುದಾಯಗಳು ಜಾಗತೀಕರಣ ಪ್ರಕ್ರಿಯೆಗೆ ತಮ್ಮನ್ನು ತೆರೆದುಕೊಂಡರೆ ಸಾಮರ್ಥ್ಯ ಪಡೆಯದ ಸಮುದಾಯಗಳು ಜಾಗತೀಕರಣ ಪ್ರಕ್ರಿಯೆಯಿಂದ ಇನ್ನು ಮುದುಡುವ ಸ್ಥಿತಿಗೆ ಇಳಿಯುತ್ತದೆ.[೫]

ಆಧುನಿಕತೆ ಹೆಚ್ಚಿದಂತೆಲ್ಲಾ ಈ ವೃತ್ತಿ ಮೂಲ ಸಮುದಾಯಗಳೂ ಹೆಚ್ಚಿನ ಆತಂಕಗಳಿಗೆ ಒಳಗಾಗುತ್ತಲೇ ಇವೆ. ಆಧುನಿಕತೆ ಪರಿಣಾಮವಾಗಿ ವೃತ್ತಿ ಮೂಲ ಸಮುದಾಯಗಳು ಜನತೆಯ ಕಣ್ಣಿನಿಂದ ದೂರಾಗುತ್ತಿವೆ. ಸಾಮಾಜಿಕವಾಗಿ ಇಂದು ಲಿಂಗಾಯಿತ ಗಾಣಿಗ ಸಮುದಾಯದವರು ತಯಾರಿಸಿದ ಗಾಣದಿಂದ ಎಣ್ಣೆ ತೆಗೆಯುವ ಉಪಕರಣಗಳ ಬಳಕೆಯೇ ಇಲ್ಲದಿರುವ ಸಂದರ್ಭದಲ್ಲಿ ಜನತೆ ಇವರನ್ನು ಗುರುತಿಸುವುದು ಹೇಗೆ ಸಾಧ್ಯ.

ಸಾಮಾಜಿಕ ನಿರ್ಲಕ್ಷ್ಯದಿಂದಾಗಿ ಕಳೆದು ಹೋಗುತ್ತಿರುವ ಇಂತಹ ಸಮುದಾಯಗಳು ಇಂದು ಸವಕಲು ನಾಣ್ಯವಾಗುತ್ತಿವೆ. ಆಧುನಿಕತೆಯಿಂದಾಗಿ ಅಲಕ್ಷ್ಯಗೊಳಗಾಗಿರುವ ಗಾಣಿಗ ಸಮುದಾಯವು ಆರ್ಥಿಕವಾಗಿ ಹಿಂದುಳಿದಂತೆ ರಾಜಕೀಯವಾಗಿಯೂ ಹಿಂದುಳಿದಿದೆ. ಇಂದು ಪರಿಶಿಷ್ಟ ಪಂಗಡಗಳಲ್ಲಿ ಸೇರಬೇಕಾದ ರಾಜಕೀಯವಾಗಿಯೂ ಹಿಂದುಳಿದಿದೆ. ಇಂದು ಪರಿಶಿಷ್ಟ ಪಂಗಡಗಳಲ್ಲಿ ಸೇರಬೇಕಾದ ಈ ಸಮುದಾಯಕ್ಕಿಂತ ರಾಜಕೀಯವಾಗಿ ಪ್ರಬಲವಾಗಿರುವ ಎಷ್ಟೋ ಸಮುದಾಯಗಳು ಸೇರ್ಪಡೆಗೊಳ್ಳುತ್ತಿರುವುದನ್ನು ಮತ್ತು ಒತ್ತಡಗಳನ್ನು ಹೇರುತ್ತಿರುವುದನ್ನು ದಿನಪತ್ರಿಕೆಗಳಲ್ಲಿ ದಿನವು ಓದುತ್ತೇವೆ. ಆದರೆ ಗಾಣಿಗ ಸಮುದಾಯದವರು ಇದಾವುದರ ಗೊಡವೆಗೂ ಹೋಗದಂತೆ ತನ್ನ ಪಾಡಿಗೆ ತಾನು ಹೊಟ್ಟೆ ಹೊರೆಯುವ ಕಾಯಕಕ್ಕೆ ಮಾತ್ರ ಸೀಮಿತಗೊಂಡು ಬಿಟ್ಟಿವೆ.

ಆಧುನಿಕ ಪ್ರವೇಶದಿಂದಾಗಿಯೇ ಅನಾನುಕೂಲಕರ ಸ್ಥಿತಿಗೆ ನೂಕಲ್ಪಟ್ಟ ಈ ಸಮುದಾಯಕ್ಕೆ ಅಕ್ಷರ ಜ್ಞಾನದ ಕೊರತೆ, ಆರ್ಥಿಕ ಸ್ವಾವಲಂಬನೆ ಇಲ್ಲದೇ ಇರುವುದು. ಸಾಮಾಜಿಕವಾಗಿ ತುಂಬಾ ಕೀಳಾಗಿ ಕಾಣುವುದು ಮುಂತಾದ ಅನಿಷ್ಟಗಳೆಲ್ಲಾ ಇವರ ಕಾಲ್ತೊಡಕಾಗಿವೆ.[೬] (ಬಹುಪಾಲು ಭಾರತದ ಬುಡಕಟ್ಟುಗಳ ಸ್ಥಿತಿ ಹೀಗೆಯೇ ಆಗಿದೆ).

ಇಂದು ಗಾಣಿಗ ಸಮುದಾಯ ಒಂದಿದೆ ಎಂದು ಗುರುತಿಸಲಾರದಷ್ಟು ಕ್ಷೀಣಗೊಂಡಿರುವ ಈ ಸಮುದಾಯ ಭವಿಷ್ಯತ್ತಿನಲ್ಲಿ ಕಾಣೆಯಾಗುವ ಸಂಭವವೇ ಹೆಚ್ಚು. ಪೂರ್ಣ ಕಾಣೆಯಾದಲ್ಲಿ ಚಿಂತೆ ಇಲ್ಲ. ಆದರೆ ಅದು ತನ್ನ ಮೂಲ ಅನಿಷ್ಟಗಳನ್ನೆಲ್ಲಾ ಮೈಗಂಟಿಸಿಕೊಂಡು ರೂಪಾಂತರಗೊಳ್ಳುವ ಭಯ ಕಾಡುವುದುಂಟು ಎಂದು ನಿರ್ಲಕ್ಷಿತ ಸಮುದಾಯಗಳ ಕುರಿತು ಅಧ್ಯಯನ ಮಾಡುವ ಸಮಾಜ ಶಾಸ್ತ್ರಜ್ಞರೂ, ಮಾನವಶಾಸ್ತ್ರರೂ, ಆತಂಕಗಳನ್ನು ತೋರ್ಪಡಿಸಿದ್ದಾರೆ. ಒಟ್ಟಿನಲ್ಲಿ ಆಧುನಿಕ ಜಗತ್ತಿನಲ್ಲಿ ಕಳೆದು ಹೋಗುತ್ತಿರುವ ಒಂದು ನಾಣ್ಯ ಗಾಣಿಗ ಸಮುದಾಯ.

ಬದುಕು ಜಡಾತ್ಮಕವಲ್ಲ, ಪರಿವರ್ತನಶೀಲವಾದುದು, ಈ ಪರಿವರ್ತನೆ ಕೆಲವೆಡೆ ತೀವ್ರ, ಮತ್ತೆ ಕೆಲವೆಡೆ ಮಂದ. ಒಟ್ಟಿನಲ್ಲಿ ಪರಿವರ್ತನೆ ಸಹಜ, ಅದು ಜೀವಂತಿಕೆಯ ಲಕ್ಷಣವೂ ಹೌದು. ಪರಿವರ್ತನೆ ಘಟಿಸಲು ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ, ವೈಜ್ಞಾನಿಕವಾದ ಹಲವಾರು ಕಾರಣಗಳಿರುತ್ತವೆ. ಭಾರತ ದೇಶದ ಸ್ವಾತಂತ್ರ್ಯೋತ್ತರದ ತಾಂತ್ರಿಕ ನಗರ ನಾಗರೀಕತೆಯಿಂದ ಅವತರಿಸಿದ ಆಧುನಿಕತೆಯಲ್ಲಿ ಲಿಂಗಾಯಿತ ಸಮುದಾಯಗಳ ಬದುಕು ಅತಂತ್ರವಾಗಿ, ತೀರ ಶೋಚನೀಯ ಸ್ಥಿತಿಗೊಳಗಾದರೆ ಮತ್ತೆ ಕೆಲವರ ಬದುಕು ಆಧುನಿಕತೆಯಿಂದ ಚೇತರಿಸಿಕೊಂಡು ಕಣ್ಣು ಬಿಡುತ್ತಲಿದೆ. ಹಾಗೆ ಕೊಂಚಮಟ್ಟಿಗೆ ಕಣ್ಣು ಬಿಡುತ್ತಲಿರುವ ಲಿಂಗಾಯಿತರಗಳಲ್ಲಿ ಗಾಣಿಗ ಸಮುದಾಯವು ಒಂದಾಗಿದೆ. ಆಧುನಿಕತೆಯ ಪರಿಣಾಮವಾಗಿ ಗಾಣಿಗರಲ್ಲಿ ಆದ ಬದಲಾವಣೆ ಬಹುಮುಖಿಯಾದುದು.

**ಟಿಪ್ಪಣಿಗಳು**

೧. ಡಾ.ಎಸ್.ಎಸ್. ಅಂಗಡಿ, ಸಂಕೀರ್ಣ ವೃತ್ತಿ ಪದಕೋಶ, ೨೦೦೦, ಪು.೭೧

೨. ಕರ್ನಾಟಕದ ಪಿಂಜಾರರು ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ, ೨೦೦೪, ಪು.೨೪೦

೩. ಉದೃತಃ ಡಾ. ಹಿ.ಚಿ. ಬೋರಲಿಂಗಯ್ಯ, ಹಾಡುವ ಹಾಲಕ್ಕಿ ಸುಕ್ರಿ ಬೊಮ್ಮಗೌಡ, ಪ್ರಜಾವಾಣಿ, ಸ.ಪ್ರ ದಿನಾಂಕ, ೧೪.೧೧.೧೯೯

೪. ಸ್ವಾಮಿನಾಥ ಅಯ್ಯಾರ್: ಎಕನಾಮಿಕ್ ಟೈಮ್ಸ್, ೧೬.೧೦.೧೯೯೮

೫. ಟಿ.ಆರ್. ಚಂದ್ರಶೇಖರ್, ೧೯೯೮, ಪು.೧೯

೬. ಡಾ. ಆರ್.ಬಿ. ಕುಮಾರ್, ಮುದ್ದೆಕಂಬಾರರು, ೨೦೦೪, ಪು.೧೩೨

# ಸಮಾರೋಪ

ಮಾನವ ಕುಲ ತಾನೊಂದೆ ವಲಂ, ಮನುಜಮತ - ವಿಶ್ವಪಥ, ಏನಾದರೂ ಆಗು ಮೊದಲು ಮಾನವನಾಗು ಎಂಬ ಕವಿವಾಣಿ ಮೊಳಗುತ್ತಿದ್ದರೂ ವಿಶ್ವಮಾನವ, ಅನಿಕೇತನ ಪರಿಕಲ್ಪನೆಗಳು ಮಾರ್ಧನಿಗೊಳ್ಳುತ್ತಿದ್ದರೂ ಈ ಎಲ್ಲಾ ಆಶಯಗಳಿಗೆ ವಿರುದ್ಧವಾಗಿ ಪ್ರಪಂಚದಲ್ಲಿ ಸಾವಿರಾರು ಜಾತಿಗಳು ಸಮುದಾಯಗಳು ಮತ್ತು ಬುಡಕಟ್ಟುಗಳು ಹುಟ್ಟಿಕೊಂಡಿದ್ದು ಮನುಷ್ಯ ಮನುಷ್ಯರ ನಡುವೆ ಕಂದರಗಳನ್ನು ನಿರ್ಮಿಸಿವೆ, ತಾರತಮ್ಯಕ್ಕೆ ಕಾರಣವಾಗಿವೆ. ಆದರೂ ಪ್ರತಿಯೊಂದು ಜನಾಂಗಗಳೂ ವಿಶಿಷ್ಟವಾದ ಪ್ರತ್ಯೇಕ ಸಾಂಸ್ಕೃತಿಕತೆಯನ್ನು, ಬದುಕಿನ ವೈಶಿಷ್ಟ್ಯವನ್ನು ಹೊಂದಿವೆ. ಅನನ್ಯತೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ.

ಈಗಾಗಲೇ ಓದುಗರಿಗೆ ಮನವರಿಕೆಯಾಗಿರುವಂತೆ ಉಪಖಂಡ, ಜನಾಂಗಗಳ ಮ್ಯೂಸಿಯಂ, ಬಹುಸಂಸ್ಕೃತಿಯ ನಾಡು ಎಂಬ ಖ್ಯಾತಿಗೆ, ಹೆಗ್ಗಳಿಕೆಗೆ ಪಾತ್ರವಾಗಿರುವ ಭಾರತ ದೇಶದಲ್ಲಿಯೂ ಸಹ ಸಾವಿರಾರು ಜಾತಿಗಳು, ಉಪಜಾತಿಗಳು ನೆಲೆಗೊಂಡಿವೆ. ಜಾತಿಗಳು ಮತ್ತು ಧರ್ಮಗಳು ಭಾರತವನ್ನು ಬಹುಜನಾಂಗೀಯ, ಬಹುಸಂಸ್ಕೃತಿಯ ದೇಶವನ್ನಾಗಿ ಮಾರ್ಪಡಿಸಿವೆ. ದೇಶದ ಭವ್ಯ ಚರಿತ್ರೆಗೆ ಸಾಂಸ್ಕೃತಿಕ ಶ್ರೀಮಂತಿಕೆಗೆ ವೈವಿಧ್ಯತೆ ಅನನ್ಯತೆಗಳಿಗೆ ಇಲ್ಲಿ ನೆಲೆಸಿರುವ ಸಮಸ್ತ ಜನಾಂಗಗಳ ದೇಣಿಗೆ ಇದೆ. ಈ ಸಮಸ್ತ ಜನರ ಶ್ರಮದ ದುಡಿಮೆ ಮತ್ತು ಬೆವರಿನಿಂದ ದೇಶ ನಿರ್ಮಾಣವಾಗಿವೆ. ಸಂಸ್ಕೃತಿ ರೂಪುಗೊಂಡಿದೆ. ಆದಿಯಿಂದ ಸಮಕಾಲೀನ ಸಂದರ್ಭದವರೆಗೆ ಭಾರತದ ಭೂಮಿಯಲ್ಲಿ ಬಾಳಿ ಬದುಕಿ ಹೆಜ್ಜೆ ಮೂಡಿಸಿದ ಜನರೆಲ್ಲರೂ ಈ ಸಂಸ್ಕೃತಿಯ ವಾರಸುದಾರರಾಗಿದ್ದಾರೆ. ಚರಿತ್ರೆಯಲ್ಲಿ ದಾಖಲಾಗಿರುವ ಮಹಾನ್ ನಾಯಕರ, ಶ್ರೇಷ್ಠರ, ಸಾಧಕರ ಸಾಧನೆಗೆ ಬೆನ್ನೆಲುಬಾದ ಜನಸಾಮಾನ್ಯರ ಬದುಕಿನ ಕಥೆಗಳು, ಬೆವರಿನ ಹನಿಗಳು ಇತಿಹಾಸದ ಪುಟಗಳ ಅಕ್ಷರಗಳಾಗುವುದು ಅನಿವಾರ್ಯವಾಗಿದೆ. ಈ ಅನಿವಾರ್ಯತೆ ಮತ್ತು ತುರ್ತಿನಿಂದಾಗಿ ಭಾರತದ ಹಲವು ನೂರು ಜನಾಂಗಗಳಲ್ಲಿ ಒಂದಾದ ಗಾಣಿಗ ಸಮುದಾಯದ ಅಧ್ಯಯನ ಒಂದಷ್ಟು ಪುಟಗಳಲ್ಲಿ ಅನಾವರಣಗೊಂಡಿದೆ.

ಭಾರತದ ಪ್ರತಿಯೊಂದು ಜಾತಿಯು ತಮ್ಮ ಉತ್ಪಾದನಾ ಸಾಮರ್ಥ್ಯದಿಂದಾಗಿ ಸ್ವಯಂಪೂರ್ಣ ಘಟಕಗಳಂತೆ ಇವೆ. ಹೀಗಿರುವ ಪ್ರತಿ ಸಮುದಾಯವು ದೇಶದಲ್ಲಿ ನಿಶ್ಚಿತವಾದ ಚಟುವಟಿಕೆಗಳನ್ನು ಮಾಡುತ್ತಲೇ ಬಂದಿವೆ. ಇಂತಹ ಜಾತಿಗಳಲ್ಲಿ ಅವುಗಳು ನಿರ್ವಹಿಸುವ ಕಾರ್ಯಗಳಿಂದಾಗಿ ಶ್ರೇಷ್ಠ ಮಾಧ್ಯಮ ಹಾಗೂ ಕನಿಷ್ಠ ತಮದವು ಎಂದು ಗುರುತಿಸಲ್ಪಟ್ಟಿವೆ. ಹೀಗೆ ಗುರುತಿಸುವ ಸಮುದಾಯಗಳು ಕಾಲಾನಂತರದಲ್ಲಿ ಆರ್ಥಿಕ ಒಡೆತನದ ನಿರಾಕರಣೆ ಹಾಗೂ ಮೇಲ್ಜಾತಿಗಳ ನೀಚತನದಿಂದಾಗಿ ಒಂದು ರೀತಿಯ ಬಿಕ್ಕಟ್ಟಿಗೆ

ಒಳಗಾಗಿವೆ. ಈ ತರಹದ ಬಿಕ್ಕಟ್ಟು ಕೇವಲ ಆರ್ಥಿಕವಾಗಿರದೆ, ಸಾಂಸ್ಕೃತಿಕವಾಗಿಯೂ ಪರಂಪರೆಯಲ್ಲಿ ಮುಂದುವರೆಯುತ್ತಲೇ ಬಂದಿದೆ. ಇತ್ತೀಚೆಗಂತೂ ಈ ಸಾಂಸ್ಕೃತಿಕ ವಾತಾವರಣ ತೀವ್ರವಾದ ಬಿಕ್ಕಟ್ಟಿನಲ್ಲಿ ಸಿಲುಕಿದೆ. ಸಂಸ್ಕೃತಿ ಪದದ ಅರ್ಥ ವಿಚಿತ್ರವಾಗಿ ವ್ಯಾಖ್ಯಾನಕ್ಕೆ ಒಳಗಾಗುತ್ತಿದೆ. ಜೊತೆಗೆ ಆ ಪದದ ಅರ್ಥ ಗೊತ್ತಿಲ್ಲದವರು ಅದರ ಬಗ್ಗೆ ಮಾತನಾಡುತ್ತಾ ಒಂದು ರೀತಿಯಲ್ಲಿ ಅದನ್ನು ಕುಲಗೆಡಿಸುತ್ತಿದ್ದಾರೆ. ವ್ಯಕ್ತಿ ವಿಶಿಷ್ಟವಾದ ನೀತಿ ನಡವಳಿಕೆಗಳು ಮತ್ತು ಸಾಮುದಾಯಿಕ ನಂಬಿಕೆ, ಆಚರಣೆಗಳ ನಡುವಿನ ಸಂಬಂಧ ಶಿಥಿಲಗೊಳ್ಳುತ್ತಿದೆ. ಒಂದು ಕಾಲದಲ್ಲಿ ಸಾಂಪ್ರದಾಯಿಕ ಸಮಾಜವನ್ನು ಹಾಗೂ ಅದರ ಜಾತೀಯತೆಯನ್ನು ಸಡಿಲಿಸಿ ಶತಶತಮಾನಗಳಿಂದ ತುಳಿತಕ್ಕೊಳಗಾಗಿದ್ದ ಸಮುದಾಯಗಳಿಗೆ ಆಧುನಿಕತೆ ಎನ್ನುವುದು ಒಂದು ರೀತಿಯ ಮುಕ್ತತೆಯನ್ನು ತಂದುಕೊಟ್ಟಿತು ಹಾಗೂ ಆ ಸಮುದಾಯಗಳ ಮೂಲ ಕಸುಬುಗಳು ವೇಗದ ಆಧುನಿಕತೆಯನ್ನು ಪಡೆಯುತ್ತ ಆಕರ್ಷಣೆಯ ಮಾರುಕಟ್ಟೆಯನ್ನು ಸೃಷ್ಟಿಸಿಕೊಂಡವು. ಸಮುದಾಯಗಳ ವಿಶಿಷ್ಟ ವೃತ್ತಿ ಮತ್ತು ಉತ್ಪಾದನೆಗಳು ಮಾರುಕಟ್ಟೆಯ ಸರಕಾರದಂತೆ ಸಂಸ್ಕೃತಿ ಎನ್ನುವುದು ಹಿನ್ನೆಲೆಗೆ ಸರಿದು ಕೇವಲ ಅಧ್ಯಯನದ ವಸ್ತುವಾಯಿತು.

ಆಧುನಿಕತೆಯ ಮುಂದುವರೆದ ರೂಪವಾದ ಜಾಗತೀಕರಣದಿಂದಾಗಿ ದೇಶಿ ಮಾರುಕಟ್ಟೆಯು ಲಾಭಕಾರಿಯಲ್ಲದ ಅಸ್ತಿತ್ವವಿಲ್ಲದ ಅರ್ಥವಿಲ್ಲದಂತೆ ಕಾಣುತ್ತಿದೆ. ಈ ದೇಶೀಯ ಕರಕುಶಲ ಕೈಗಾರಿಕೆಗಳ ಉತ್ಪನ್ನಗಳಿಗೆ ಸರಿಯಾದ ಬೆಲೆಯಿಲ್ಲದ ರೈತ, ಕಲಾವಿದ, ಕಾರ್ಮಿಕ ಶಿಕ್ಷಣ ಹೀಗೆ ಪ್ರತಿಯೊಬ್ಬ ವೃತ್ತಿನಿರತರು ಬಿಕ್ಕಟ್ಟಿನಲ್ಲಿದ್ದಾನೆ. ಜಾಗತೀಕರಣ ತಂದಿಟ್ಟಿರುವ ಈ ಬಿಕ್ಕಟ್ಟಿನಿಂದ ಪಾರಾಗುವುದು ಇಂದಿನ ಪ್ರಶ್ನೆಯಾಗಿ ಉಳಿದಿಲ್ಲ. ಬದಲಾಗಿ ನಮ್ಮ ಎಲ್ಲ ಬಗೆಯ ಮೂಲ ಕಸುಬು ಮತ್ತು ಕಲಾವಂತಿಕೆಯನ್ನು ಜೀವಂತವಾಗಿ ಉಳಿಸಿಕೊಳ್ಳುತ್ತಾ ಸಾಮಾಜಿಕ ಚಲನೆಗೆ ಸಂವೇದನೆಗಳನ್ನು ತೊಡಿಸುವ ಬಗ್ಗೆ ಯೋಚಿಸಬೇಕಾಗಿದೆ. ಸಂಸ್ಕೃತಿಯನ್ನು ಇಂದು ಜಾಗತೀಕರಣದ ಮಾಯೆಯಿಂದಾಗಿ ಹರಾಜಿಗಿಡುವ ಪ್ರಯತ್ನಗಳು ನಡೆಯುತ್ತಿವೆ. ಭಾರತದ ಈ ಪರಂಪರೆಯಲ್ಲಿ ಗರಿಷ್ಠ ಕನಿಷ್ಟ ಎಂದು ಒಂದೊಮ್ಮೆ ವಿಶ್ಲೇಷಣೆಗೊಳ್ಳುತ್ತಿದ್ದ ಸಂಸ್ಕೃತಿ ಇದೀಗ ಮಾರುಕಟ್ಟೆಯ ಪೈಪೋಟಿಗಿಳಿದು ಬಿಟ್ಟಿದೆ. ಈ ಮಾರುಕಟ್ಟೆ ರಾಜಕೀಯ ಅಧಿಕಾರವನ್ನು ಸಾಧಿಸಿಕೊಡುವ ಸಾಧನವಾಗಿರುವುದು ಪೈಪೋಟಿಯ ತೀವ್ರತೆಗೆ ಕಾರಣವಾಗಿದೆ.

ಸಂಸ್ಕೃತಿ ಎನ್ನುವುದು ಮಾರುಕಟ್ಟೆಯಲ್ಲಿ ರಾಜಕೀಯ ಅಧಿಕಾರವನ್ನು ಸಾಧಿಸಿಕೊಡುವ ಸಾಧನವಾಗಿರುವ ಇಂತಹ ಸಂದರ್ಭದಲ್ಲಿ ಸಂಸ್ಕೃತಿ ಅಧ್ಯಯನಕ್ಕೆ ಮುಂದಾಗುವುದು ಸಮುದಾಯವೊಂದರ ಸಾಂಸ್ಕೃತಿಕ ರೂಪಗಳ ಶೋಧನೆ ಆ ವಿಶ್ಲೇಷಣೆಯ ದೃಷ್ಟಿಯಿಂದ ಮಾತ್ರವಲ್ಲದೆ ಆಯಾ ಸಮುದಾಯಗಳ ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಅಭ್ಯಾಸಿಸುವ ದೃಷ್ಟಿಯಿಂದ ಕೂಡಾ ಅಗತ್ಯವಾದುದು. ಹಾಗಾಗಿ ಅನಿವಾರ್ಯವಾಗಿ ಸಂಸ್ಕೃತಿ ಅಧ್ಯಯನ ಈ ತೆರನಾದ ಜವಾಬ್ದಾರಿಯನ್ನು ನಿರ್ವಹಿಸಬೇಕಾಗಿದೆ. ಹಾಗಾಗಿ ಜನಪರವು, ಧರ್ಮ ನಿರಪೇಕ್ಷವು ಆದ ದೃಷ್ಟಿಕೋನಗಳಿಂದ ಸಮುದಾಯ ಅಧ್ಯಯನಗಳು ನಡೆಯುವುದು ಅತ್ಯಗತ್ಯವಾಗಿದೆ. ಪ್ರಸ್ತುತ ಅಧ್ಯಯನದಲ್ಲಿ ನಮ್ಮ ಸಮುದಾಯಗಳು

ತಮ್ಮ ಸಾಂಸ್ಕೃತಿಕ ಚಹರೆಯನ್ನು ಇತರ ಸಮುದಾಯಗಳ ಜೊತೆಗೆ ಸೇರಿದಾಗಲೂ ಬಿಟ್ಟುಕೊಡದೆ ಅವರುಗಳ ತೋರುವ ಸಹನೆ ಮತ್ತು ಪ್ರೇಮದ ಉತ್ಕಟತೆಯನ್ನು ಅಧ್ಯಯನಕ್ಕೊಳಪಡಿಸಲಾಗಿದೆ. ಈ ರೀತಿಯ ಅಧ್ಯಯನವನ್ನು ಮಾಡಲು ಜಾನಪದಕ್ಕಿರುವಷ್ಟು ಸಾಧ್ಯತೆ ಬೇರೆ ಜ್ಞಾನಶಿಸ್ತುಗಳಿಲ್ಲ. ಏಕೆಂದರೆ ಜಾನಪದ ಎನ್ನುವುದು ಜನಪದರ ಜೀವನ ವಿಧಾನದ ಅಧ್ಯಯನವಾಗಿರುವಂತೆಯೇ ಆ ಜೀವನ ವಿಧಾನವನ್ನು ಚರಿತ್ರೆ ಮತ್ತು ಸಮಕಾಲೀನ ಸವಾಲುಗಳೊಂದಿಗೆ ವಿಶ್ಲೇಷಣೆಯನ್ನು ಮಾಡುವುದಾಗಿರುತ್ತದೆ.

ದೇಶೀಯ ಸಾಂಸ್ಕೃತಿಕ ನೆಲೆಗಳನ್ನು ಶೋಧಿಸುವ ಹಾಗೂ ಈ ಹೊತ್ತಿನ ಸವಾಲುಗಳೊಂದಿಗೆ ಅವುಗಳನ್ನು ಚರ್ಚಿಸುವ ದೃಷ್ಟಿಯಿಂದ ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ ಮಹತ್ವವಾದುದು. ನಮ್ಮ ದೇಶದ ಜಾತಿ ವ್ಯವಸ್ಥೆಯಲ್ಲಿನ ಪ್ರತಿಯೊಂದು ಸಮುದಾಯವು ತನ್ನದೇ ಆದ ಪೌರಾಣಿಕ ಹಾಗೂ ಚಾರಿತ್ರಿಕ ನೆನಪುಗಳನ್ನು ಹೊಂದಿರುತ್ತದೆ ಮತ್ತು ಈ ಜಾತಿ ಪದ್ಧತಿ ಕಾರಣಕ್ಕೆ ಪ್ರತಿಯೊಂದು ಅನ್ಯ ಸಮುದಾಯದ ನಡುವೆ ಶ್ರೇಷ್ಠವೋ ಕನಿಷ್ಠವೋ ಆದಂತಹ ಸಾಮಾಜಿಕ ನಡವಳಿಕೆಯನ್ನು ರೂಪಿಸಿಕೊಂಡಿರುತ್ತವೆ.

ಪ್ರಸ್ತುತ ಅಧ್ಯಯನಕ್ಕೊಳಪಟ್ಟಿರುವ ಗಾಣಿಗ ಸಮುದಾಯವು ಚಾರಿತ್ರಿಕವಾಗಿ ನೋಡಿದಾಗ ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ವಲಸೆ ಬಂದಿರುವ ಸಮುದಾಯವಾಗಿದೆ.

ವಸಾಹತು ಕಾಲಘಟ್ಟದಲ್ಲಿ ರಾಜ ಮಹಾರಾಜರುಗಳ ಆಳ್ವಿಕೆಯು ಮುಗಿದ ನಂತರ ಸೈನಿಕರಾಗಿದ್ದವರು ಸಹ ತಮ್ಮ ಸಮುದಾಯದ ಮೂಲ ಉದ್ಯೋಗವಾದ ಎಣ್ಣೆಯನ್ನು ಗಾಣದಿಂದ ತೆಗೆದು ಮಾರುವ ಕಾಯಕಕ್ಕೆ ನಿಂತುಕೊಂಡರು. ವಸಾಹತು ಕಾಲಘಟ್ಟದ ಆಧುನಿಕತೆಯು ಇವರಿಗೆ ಒಂದು ರೀತಿಯಲ್ಲಿ ಬೇರೆ ಉದ್ಯೋಗಗಳಿಗೆ ಹೋಗಲು ಸ್ವಾತಂತ್ರ್ಯ ನೀಡಿತಾದರೂ ಇವರುಗಳಲ್ಲಿ ಬಹುಪಾಲು ಜನರು ಹೊಸ ಉದ್ಯೋಗಗಳಿಗೆ ಹೋಗಲು ಮಾನಸಿಕವಾಗಿ ಸಿದ್ಧರಾಗಲಿಲ್ಲ. ಹೊಸ ಉದ್ಯೋಗಗಳಿಗೆ ಹೋದ ಬೆರಳೆಣಿಕೆಯ ಜನರು ಅಲ್ಲಿಯೂ ತಮ್ಮನ್ನು ಮುನ್ನೆಲೆಗೆ ತಂದುಕೊಳ್ಳಲು ಸಾಧ್ಯವಾಗಲಿಲ್ಲ. ಪ್ರಸ್ತುತದ ಜಾಗತೀಕರಣದ ಸಂದರ್ಭದಲ್ಲಿ ಇವರ ಆರ್ಥಿಕ ಪರಿಸ್ಥಿತಿ ತೀವ್ರವಾದ ಬಿಕ್ಕಟ್ಟಿಗೊಳಗಾಗಿ, ಮೂಲಭೂತ ಅವಶ್ಯಕತೆಗಳಿಗೂ ಸಹ ಪರದಾಡುವ ಸ್ಥಿತಿಯಲ್ಲಿದ್ದಾರೆ. ಜೊತೆಗೆ ಸರ್ಕಾರ ನೀಡುತ್ತಲಿರುವ ಮೀಸಲಾತಿ ಹಾಗೂ ಇನ್ನಿತರ ಸೌಲಭ್ಯಗಳು ಇವರಿಗೆ ಕನ್ನಡಿಯ ಗಂಟಾಗಿವೆ. ಮೀಸಲಾತಿಯಂತು ಇನ್ನು ಎಟುಕಲಾರದ ತುತ್ತಾಗಿದೆ. ಮೀಸಲಾತಿ ಪಟ್ಟಿಯಲ್ಲಿ ಇವರಿರುವ ಗುಂಪಿನಲ್ಲಿ ಈ ಸಮುದಾಯಕ್ಕಿಂತ ಪ್ರಬಲ ಸಮುದಾಯಗಳು ಇದ್ದು ಆ ಮೀಸಲಾತಿಯ ಸವಲತ್ತುಗಳನ್ನು ಅವರೇ ಬಾಚಿಕೊಳ್ಳುತ್ತಿದ್ದಾರೆ. ಎಷ್ಟೋ ಸಂದರ್ಭದಲ್ಲಿ ಇವರುಗಳಿಗೆ ತಾವು ಯಾವ ಮೀಸಲಾತಿ ಗುಂಪಿನಲ್ಲಿದ್ದೇವೆ ಎಂಬುದು ಸಹ ಗೊತ್ತಿರುವುದಿಲ್ಲ. ಹಾಗೆಯೆ ಸರ್ಕಾರದ ವಿಶೇಷ ಪ್ಯಾಕೇಜ್‌ಗಳಾಗಲಿ, ವಿಶೇಷ ಸವಲತ್ತುಗಳಾಗಲಿ ಈ ಸಮುದಾಯಗಳಿಗೆ ಇದುವರೆಗೆ ದಕ್ಕುತ್ತಿಲ್ಲ. ಕೆಲವು ವಿಶಿಷ್ಟ ಯೋಜನೆಗಳಿಗೆ ಅಂದರೆ ವಯಸ್ಕರ ಶಿಕ್ಷಣ ಮರಳಿ ಶಾಲೆಗೆ, ಸರ್ವಶಿಕ್ಷಣ ಅಭಿಯಾನ ಯೋಜನೆಗಳಿಗೆ ಗಾಣಿಗ ಸಮುದಾಯವೊಂದು ಇದೆ ಎಂಬುದು ಸಹ ತಿಳಿದಿಲ್ಲ.

ಕೆಲವು ಸಲಹೆಗಳು

೧. ಸರ್ಕಾರದ ವತಿಯಿಂದ ಜನತಾ ಮನೆಗಳನ್ನು ಕೊಡಬೇಕು. ಈ ಸಮುದಾಯದವರಿಗೆ ಶಿಕ್ಷಣದಲ್ಲಿ, ಉದ್ಯೋಗದಲ್ಲಿ ಮೀಸಲಾತಿಯನ್ನು ನೀಡಬೇಕು.

೨. ಸರ್ಕಾರ ಮುಖ್ಯವಾಗಿ ಇವರಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು.

೩. ಗಾಣಿಗ ಸಮುದಾಯದವರ ಮಕ್ಕಳನ್ನು ಬಾಲಕಾರ್ಮಿಕರಾಗಿ ಬಳಸದಿರುವಂತೆ ಎಚ್ಚರಿಕೆ ವಹಿಸಬೇಕು. ಹಾಗೆ ಬಳಸಿದರೆ ಅವರ ಮೇಲೆ ಕ್ರಮ ತೆಗೆದುಕೊಳ್ಳಬೇಕು.

೪. ಅಲ್ಪಸ್ವಲ್ಪ ಭೂಮಿ ಹೊಂದಿರುವ ಗಾಣಿಗರಿಗೆ ಉಚಿತ ಬೋರ್‌ವೆಲ್ ಸೌಲಭ್ಯ ದೊರಕಿಸಿಕೊಟ್ಟರೆ ಇವರ ಆರ್ಥಿಕ ಜೀವನ ಸುಧಾರಿಸಲು ಅನುಕೂಲವಾಗುತ್ತದೆ.

೫. ಬಹುಸಂಖ್ಯಾತ ಗಾಣಿಗರು ಇನ್ನೂ ಬಡತನದ ರೇಖೆಯ ಕೆಳಗೆ ಜೀವನ ಸಾಗಿಸುತ್ತಿದ್ದಾರೆ. ಇಂಥವರನ್ನು ಗುರುತಿಸಿ ಅವರಿಗೆ ಒಪ್ಪುವ ಆರ್ಥಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೆಕು. ಇದರಿಂದ ಅವರ ಆರ್ಥಿಕ ಸ್ಥಿತಿಗತಿ ಸುಧಾರಿಸಿ ವಲಸೆ ಹೋಗುವುದನ್ನು ಕಡಿಮೆ ಮಾಡಬಹುದು.

೬. ಶೈಕ್ಷಣಿಕ ಸೌಲಭ್ಯಗಳನ್ನು ಪಡೆಯಲು ಗಾಣಿಗರಿಗೆ ಆರ್ಥಿಕ ಸಹಾಯ ಮಾಡಿ ಪ್ರೋತ್ಸಾಹಿಸಬೇಕು. ಇದರಿಂದ ಶಿಕ್ಷಣ ಪಡೆಯಲು ಸಾಧ್ಯವಾಗಿ ಮೂಢನಂಬಿಕೆಗಳನ್ನು ಕೈಬಿಟ್ಟು ವೈಜ್ಞಾನಿಕತೆ ಬೆಳೆಸಿಕೊಳ್ಳಲು ಅನುಕೂಲವಾಗುತ್ತದೆ.

೭. ಗಾಣಿಗರಿಗೆ ಕೃಷಿಯಲ್ಲಿ ಆಧುನಿಕ ಉಪಕರಣ, ಬೀಜ, ಗೊಬ್ಬರ ಮುಂತಾದವುಗಳನ್ನು ಬಳಸಲು ಪ್ರೋತ್ಸಾಹಿಸಬೇಕು.

೮. ಗಾಣಿಗರಿಗೆ ಮೂಲಭೂತ ಸೌಕರ್ಯಗಳನ್ನು ಕಲ್ಪಿಸಿಕೊಡಬೇಕು. ಇದರಿಂದ ಗಾಣಿಗರ ಸರ್ವತೋಮುಖ ಅಭಿವೃದ್ಧಿಪಡಿಸಲು ಸಾಧ್ಯವಿದೆ.

೯. ಸಮಾಜ ಕಾರ್ಯಕರ್ತರು, ಸಹೃದಯಿಗಳು ಈ ಸಮುದಾಯವನ್ನು ಮುಂದೆ ತರಲು ಸಹಕರಿಸಿದರೆ ಗಾಣಿಗ ಸಮುದಾಯದವರು ಆರ್ಥಿಕವಾಗಿ, ಸಾಮಾಜಿಕವಾಗಿ ಮುಂದೆ ಬರಲು ಸಾಧ್ಯವಿದೆ.

೧೦. ಹಿಂದುಳಿದ ಸಮುದಾಯಗಳ ಅಭಿವೃದ್ಧಿಗೆ ಶಿಕ್ಷಣವೇ ತಾರಕ ಮಂತ್ರವಾದುದರಿಂದ ಸಮುದಾಯದ ಪ್ರತಿಯೊಬ್ಬರೂ ಸುಶಿಕ್ಷಿತರಾಗಬೇಕು. ಶಿಕ್ಷಣದ ಅಭಿವೃದ್ಧಿಗಾಗಿ ಸರ್ಕಾರ ನೀಡುವ ಸಹಾಯ ಸೌಲಭ್ಯಗಳನ್ನು ಸದುಪಯೋಗಪಡಿಸಿಕೊಂಡು ಸಮುದಾಯದ ಆ ಮೂಲಕ ರಾಷ್ಟ್ರದ ಮುನ್ನಡೆಗೆ ಕಾರಣವಾಗಬೇಕು.

೧೧. ಜಾಗತೀಕರಣದ ಈ ಸಂದರ್ಭಗಳಲ್ಲಿ ಸರ್ಕಾರಿ ಮತ್ತು ಅರೆ ಸರ್ಕಾರಿ ಹುದ್ದೆಗಳು ಕಡಿಮೆಯಾಗುತ್ತಿರುವುದರಿಂದ ಗುಣಾತ್ಮಕ ಶಿಕ್ಷಣ ಪಡೆದು ವಿಶೇಷ ಕೌಶಲ್ಯ ಸಂಪಾದಿಸಿಕೊಂಡು ರಾಷ್ಟ್ರ ಮತ್ತು ಅಂತರ್‌ರಾಷ್ಟ್ರೀಯ ಮಟ್ಟದಲ್ಲಿ ಯಾವುದೆ ತೆರನಾದ ಕೌಶಲ್ಯಾಧಾರಿತ ಕಸುಬನ್ನು ಮಾಡುವಂತೆ ಯುವಕರು ತಯಾರಾಗಬೇಕು.

೧೨. ಉನ್ನತ ಶಿಕ್ಷಣವು ಬೌದ್ಧಿಕ ಪ್ರಗತಿಗೆ ಸಹಾಯಕವಾಗುವುದರಿಂದ ಗಾಣಿಗ ಸಮುದಾಯದ ಮಹಿಳೆಯನ್ನು ಒಳಗೊಂಡಂತೆ ಉನ್ನತ ಶಿಕ್ಷಣಕ್ಕೆ ಪ್ರೇರೇಪಿಸುವುದು.

೧೩. ಸರ್ಕಾರದ ವತಿಯಿಂದ ಜನತಾ ಮನೆಗಳನ್ನು ಕೊಡಬೇಕು. ಈ ಸಮುದಾಯದವರಿಗೆ ಶಿಕ್ಷಣದಲ್ಲಿ, ಉದ್ಯೋಗದಲ್ಲಿ ಮೀಸಲಾತಿಯನ್ನು ನೀಡಬೇಕು.

೧೪. ಈ ಸಮುದಾಯದ ಓಣಿಗಳಿಗೆ ಹತ್ತಿರವಾಗಿ ಸರ್ಕಾರ ಇವರ ಮಕ್ಕಳಿಗೆ ವಸತಿ ಶಾಲೆಗಳನ್ನು ಸ್ಥಾಪಿಸಬೇಕು. ಜೊತೆಗೆ ಕಡ್ಡಾಯವಾಗಿ ಮಕ್ಕಳು ವಿದ್ಯೆ ಕಲೆಯಲು ಬೇಕಾದ ಕ್ರಮ ತೆಗೆದುಕೊಳ್ಳಬೇಕು.

೧೫. ಈ ಸಮುದಾಯದ ಬಗೆಗೆ ಇತರ ಸಮುದಾಯದವರಲ್ಲಿ ಇರುವ ಗಾಣಿಗರ ಮುಖ ನೋಡಿದರೆ ಕೆಲಸ ಯಶಸ್ವಿಯಾಗುವುದಿಲ್ಲ, ಬುದ್ಧಿ ಇಲ್ಲದವರು ಎಂಬ ಮನೋಭಾವವನ್ನು ತೊರೆದು ಇವರು ಸಹ ನಮ್ಮಂತೆ ಮನುಷ್ಯರು ಎಂಬ ಭಾವನೆಯನ್ನು ರೂಢಿಸಿಕೊಳ್ಳಬೇಕಾಗಿದೆ.

೧೬. ಗಾಣಿಗರು ಜಾಸ್ತಿ ಇರುವ ಪ್ರದೇಶಗಳನ್ನು ಗುರುತಿಸಿ ಅಂತಹ ಪ್ರದೇಶಗಳಿಗೆ ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಕಲ್ಪಿಸಿಕೊಡಬೇಕು.

೧೭. ಹಳ್ಳಿಗಳಲ್ಲಿರುವಂತ ಸಮುದಾಯದವರಿಗೆ ಪರ್ಯಾಯ ಉದ್ಯೋಗ ಕಲ್ಪಿಸುವುದು ಮತ್ತು ಅಂತವರ ಶಿಕ್ಷಣ ಪದ್ಧತಿಯು ಉದ್ಯೋಗ ಸಂಬಂಧ (Job Orient Course) ಶಿಕ್ಷಣ ಮಾದರಿಯನ್ನು, ಕಂಪ್ಯೂಟರ್ ಶಿಕ್ಷಣವನ್ನು ನೀಡಬೇಕು.

೧೮. ಈಗಾಗಲೇ ಈ ಸಮುದಾಯದಲ್ಲಿ ಅಲ್ಪಸ್ವಲ್ಪ ಓದಿದ ಯುವತಿಯರು ಮತ್ತು ಯುವಕರಿಗೆ ಉದ್ಯೋಗ ಕಲ್ಪಿಸಿಕೊಡುವತ್ತ ಸರ್ಕಾರ ತೀವ್ರವಾಗಿ ಗಮನಿಸಬೇಕಾಗಿದೆ. ಜೊತೆಗೆ ಸರ್ಕಾರಿ ಉದ್ಯೋಗಗಳನ್ನು ಎಲ್ಲರಿಗೂ ಕೊಡಲು ಸಾಧ್ಯವಿಲ್ಲದ ಕಾರಣ ಅವರು ಸ್ವ ಉದ್ಯೋಗ ಮಾಡಿಕೊಳ್ಳಲು ನೆರವು ನೀಡಬೇಕು.

೧೯. ಈ ಸಮುದಾಯದ ಜನರಿಗೆ ಜನ ಜಾಗೃತಿ ಕಾರ್ಯಕ್ರಮಗಳನ್ನು ತಕ್ಷಣದಲ್ಲಿ ನೆರವೇರಿಸುವುದರ ಜೊತೆಗೆ ಅವರಲ್ಲಿ ಜಾಗೃತಿಯನ್ನು ಮೂಡಿಸುವುದು, ನೈರ್ಮಲ್ಯ, ಕುಟುಂಬ ಯೋಜನೆ, ಇಂಥ ವಿಷಯಗಳ ಕುರಿತು ಜಾಗೃತಿ ಶಿಬಿರಗಳನ್ನು ಏರ್ಪಡಿಸಬೇಕು.

೨೦. ತಾವು ಮಾಡುತ್ತಿರುವ ಉದ್ಯೋಗದಿಂದಾಗಿ ಬೇಗನೆ ಕಾಯಿಲೆಗಳಿಗೆ ಈಡಾಗುವ ಸಂದರ್ಭಗಳುಂಟು. ಹಾಗಾಗಿ ಅಂತಹವರನ್ನು ಗುರುತಿಸಿ ಅವರ ಆರೋಗ್ಯ ಸುಧಾರಣೆಗೆ ಕ್ರಮ ಕೈಗೊಳ್ಳಬೇಕು.. ಇದರ ಜೊತೆಗೆ ಮಾಶಾಸನ ನೀಡುವುದರ ಮುಖಾಂತರ ಅವರ ಜೀವನಕ್ಕೆ ಭದ್ರತೆಯನ್ನು ಒದಗಿಸಬೇಕು.

೨೧. ಈ ಸಮುದಾಯದವರು ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ, ರಾಜಕೀಯವಾಗಿ ಹಿಂದುಳಿದಿರುವುದರಿಂದ ಇವರಿಗೆ ಪರಿಶಿಷ್ಟ ಜಾತಿಯಲ್ಲಿ ಸೇರಿಸಬೇಕು.

೨೨. ಈ ಸಮುದಾಯದವರು ತಮ್ಮ ಮೂಲವೃತ್ತಿಯನ್ನು ಮುಂದುವರಿಸಿಕೊಂಡು ಬಂದವರಿಗೆ ಇನ್ನು ಹೆಚ್ಚಾಗಿ ಸರ್ಕಾರದವರು ಸಹಾಯಮಾಡಿ ಅವರ ಮೂಲ ಉದ್ಯೋಗವನ್ನು ಪುನಶ್ಚೇತನಗೊಳಿಸುವುದರ ಮೂಲಕ ಅವರನ್ನು ಗೌರವಿಸಿ ಪ್ರೋತ್ಸಾಹಿಸಬೇಕು.

## ಪ್ರಬಂಧದ ಅಧ್ಯಾಯಗಳು

ಪ್ರಸ್ತುತ ಪ್ರಬಂಧವನ್ನು ಒಂಬತ್ತು ಅಧ್ಯಾಯಗಳಲ್ಲಿ ವಿಸ್ತರಿಸಿಕೊಳ್ಳಲಾಗಿದೆ. ಮೊದಲನೆಯ ಅಧ್ಯಾಯವು ಅಧ್ಯಯನದ ಉದ್ದೇಶ, ಸ್ವರೂಪ ಮತ್ತು ವ್ಯಾಪ್ತಿ ಕುರಿತದ್ದಾಗಿದೆ. ಇದರಲ್ಲಿ ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಮತ್ತು ಈ ವಿಷಯಕ್ಕೆ ಪೂರಕವಾಗಿ ನಡೆದ ಇದುವರೆಗಿನ ಅಧ್ಯಯನಗಳ ಸಮೀಕ್ಷೆಯನ್ನು ಮಾಡಲಾಗಿದೆ. ಅಧ್ಯಯನಕ್ಕಾಗಿ ಕೈಗೊಂಡ ವಿಧಾನವನ್ನು ತಿಳಿಸುತ್ತಾ ಅಧ್ಯಯನದ ರೂಪುರೇಷೆಗಳನ್ನು ತಿಳಿಸಲಾಗಿದೆ.

ಎರಡನೆಯ ಅಧ್ಯಾಯವು ಅಧ್ಯಯನದ ಅನುಕೂಲಕ್ಕಾಗಿ ಗುರುತಿಸಿಕೊಂಡ ಅಧ್ಯಯನ ಕ್ಷೇತ್ರವಾದ ಬಳ್ಳಾರಿ ಜಿಲ್ಲೆಯ ಚಾರಿತ್ರಿಕ ನೋಟವನ್ನು ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಜಿಲ್ಲೆಯ ಚಾರಿತ್ರಿಕ ನೋಟ, ಬಳ್ಳಾರಿ ನಾಮವಿವೇಚನೆ, ಶಾಸನಗಳು, ಐತಿಹ್ಯ ಮತ್ತು ದಂತಕಥೆ, ಪೌರಾಣಿಕ, ಭೌಗೋಳಿಕ ಲಕ್ಷಣಗಳು ಮತ್ತು ಇತರೆ ವಿವರಗಳನ್ನು ಕುರಿತಂತೆ ಸಂಕ್ಷಿಪ್ತವಾಗಿ ಹೇಳಲಾಗಿದೆ.

ಮೂರನೆಯ ಅಧ್ಯಾಯವು ಗಾಣಿಗರ ಮೂಲ ಇತಿಹಾಸವನ್ನು ಕುರಿತದ್ದಾಗಿದೆ. ಈ ಅಧ್ಯಾಯದಲ್ಲಿ ಪದನಿಷ್ಪತ್ತಿ ಮತ್ತು ಸರ್ವಜ್ಞನ ದೃಷ್ಟಿಯಲ್ಲಿ ಗಾಣಿಗರು, ಪೌರಾಣಿಕ ಹಿನ್ನೆಲೆ ಮತ್ತು ಶಾಸನಗಳ ಉಲ್ಲೇಖಗಳನ್ನು ಅಡಕಗೊಳಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಸಾಮಾಜಿಕ ವ್ಯವಸ್ಥೆ ಒಳಗೆ ಅವರ ಕೌಟುಂಬಿಕ ಪದ್ಧತಿ, ಗಾಣಿಗ ಸಮುದಾಯದ ಒಳಪಂಗಡಗಳು, ಬೆಡಗುಗಳು, ರಕ್ತಸಂಬಂಧ, ನ್ಯಾಯಪದ್ಧತಿ, ಜಾತಿ ಬಹಿಷ್ಕಾರ, ವೈದ್ಯ ಪದ್ಧತಿ, ಆಹಾರ ಪದ್ಧತಿ, ಉಡುಗೆತೊಡುಗೆ, ವಸತಿ ವ್ಯವಸ್ಥೆ, ರಾಜಕೀಯ, ಆರ್ಥಿಕ ಸ್ಥಿತಿಗತಿ ನಿಷೇಧಗಳು ಮತ್ತು ಸಂಘಸಂಸ್ಥೆಗಳ ಬಗ್ಗೆ ಗಮನ ಹರಿಸಲಾಗಿದೆ.

ಐದನೆಯ ಅಧ್ಯಾಯವು ಆಚರಣೆಗಳು ಇದರಲ್ಲಿ ಗಾಣಿಗರ ಜನನ ಮತ್ತು ಬಾಣಂತನ, ಋತುಮತಿ, ಜವಳ, ಜಾತಿ ಸಂಸ್ಕಾರ, ಮದುವೆ, ಸೀಮಂತ, ಸಾವು ಸಂಸ್ಕಾರ ಮತ್ತು ಕುಟುಂಬದ ಮೇಲೆ ಸಾವಿನ ಪರಿಣಾಮಗಳನ್ನು ಕುರಿತು ಸೂಕ್ಷ್ಮ ಅವಲೋಕನ ಮಾಡಲಾಗಿದೆ.

ಅಧ್ಯಾಯ ಆರು ಹಬ್ಬಗಳು ಮತ್ತು ಧಾರ್ಮಿಕ ಕೇಂದ್ರಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲ್ಪಟ್ಟಿವೆ.

ಅಧ್ಯಾಯ ಏಳು 'ಜಾನಪದ ಸಾಹಿತ್ಯ' ಎಂದಿದೆ. ನೂರಾರು ವರ್ಷಗಳಿಂದ ಬಾಯಿಂದ ಬಾಯಿಗೆ ಯುಗದಿಂದ ಯುಗಕ್ಕೆ ಉಳಿದುಕೊಂಡು ಬಂದ ಸಾಹಿತ್ಯ ಸಂಪತ್ತು ಹೇರಳವಾಗಿದೆ. ಇದನ್ನು ಸಾಧ್ಯವಾದಷ್ಟು ಸಮಗ್ರವಾಗಿ ಸಂಗ್ರಹಿಸಿ ಗಾಣಿಗರ ನಂಬಿಕೆ ಶಕುನಗಳು, ಗಾದೆಗಳು, ಒಗಟುಗಳು ಮತ್ತು ಒಡಪುಗಳು ಇತ್ಯಾದಿಯಾಗಿ ವಿಂಗಡಿಸಿ ದಾಖಲಿಸಲಾಗಿದೆ.

ಅಧ್ಯಾಯ ಎಂಟರಲ್ಲಿ 'ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು' ಕುರಿತು ಇದರಲ್ಲಿ ವೃತ್ತಿ ಸಂಬಂಧ ಉಪಕರಣಗಳು, ಅವಲಂಬಿತ ವೃತ್ತಿ ಹಿಂದಿನ ಕಾಲದ ಸಮಾಜದಲ್ಲಿ ಗಾಣಿಗರ ಸ್ಥಾನಮಾನ,

ಕೈಗಾರಿಕೀಕರಣದ ಪರಿಣಾಮ ಗಾಣಿಗರ ಇಂದಿನ ಸ್ಥಾನಮಾನ ಮತ್ತು ಸಂಬಂಧಗಳು, ಗಾಣಿಗರು ಮತ್ತು ಆಧುನಿಕ ಜಗತ್ತು.

ಕೊನೆಯದಾಗಿ 'ಸಮಾರೋಪ' ಮತ್ತು ಅನುಬಂಧಗಳಿದ್ದು, ಅನುಬಂಧ ಒಂದರಲ್ಲಿ ವಕ್ತೃ ವಿವರವಿದ್ದು, ಅನುಬಂಧ ಎರಡರಲ್ಲಿ ಚಿತ್ರಗಳು. ಅನುಬಂಧ ಮೂರರಲ್ಲಿ ಪರಾಮರ್ಶಿತ ಗ್ರಂಥಗಳ ಸೂಚಿ ಅಡಕಗೊಳಿಸಲಾಗಿದೆ.

ಒಟ್ಟಿನಲ್ಲಿ ಬಳ್ಳಾರಿ ಜಿಲ್ಲಾ ಗಾಣಿಗರು: ಒಂದು ಅಧ್ಯಯನ ಕುರಿತು ಜಾನಪದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಲಾಗಿದ್ದು, ಅವರ ಸಂಸ್ಕೃತಿ, ಸಮಾಜಗಳು ಇಂದಿನ ಜನಸಮುದಾಯಗಳಲ್ಲಿ ಯಾವ ಸ್ಥಾನದಲ್ಲಿ ನಿಲ್ಲುತ್ತದೆ ಎಂದು ಗುರುತಿಸುವ ಒಂದು ಸಣ್ಣ ಪ್ರಯತ್ನವಾಗಿ ಈ ಮಹಾಪ್ರಬಂಧ ರಚಿಸಲಾಗಿದೆ.

# ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಊರು | ಉದ್ಯೋಗ |
|---|---|---|---|---|
| ೧. | ಎಚ್. ಜಗದೀಶ | ೪೮ | ಬೂದನೂರು | ಶಿಕ್ಷಕ |
| ೨. | ಪರ್ವತಪ್ಪ | ೪೪ | ಮುತ್ಕೂರು | ವ್ಯವಸಾಯ |
| ೩. | ಜ್ಯೋತಿ ಶರಣಪ್ಪ | ೪೦ | ದಸ್ಮಾಪುರ | ವ್ಯವಸಾಯ |
| ೪. | ಬಿ.ಎಸ್. ಸೌಜಿ | ೬೨ | ಹೆಚ್.ಬಿ. ಹಳ್ಳಿ | ಗ್ರಾಮಸೌಕ್ರು |
| ೫. | ಉಮಪತಿ | ೫೨ | ಉತ್ತಂಗಿ | ವ್ಯವಸಾಯ |
| ೬. | ಮುದ್ದಪ್ಪ | ೫೧ | ಹೆಚ್.ಬಿ. ಹಳ್ಳಿ | ಆರ್ಟಿಕಲ್ಚರ್ |
| ೭. | ಜ್ಯೋತಿ ವೀರಭದ್ರಪ್ಪ | ೪೪ | ಮೋರಿಗೇರಿ | ವ್ಯವಸಾಯ |
| ೮. | ವೀರುಪಾಕ್ಷಗೌಡ | ೪೬ | ಶಲೂಡಿ | ವ್ಯವಸಾಯ |
| ೯. | ನಾಗರಾಜ ಜ್ಯೋತಿ | ೩೬ | ಮಾಲವಿ | ವ್ಯವಸಾಯ |
| ೧೦. | ಕೆ. ಸಂಗಪ್ಪ | ೫೨ | ಮುತ್ಕೂರು | ಶಿಕ್ಷಕ |
| ೧೧. | ಜ್ಯೋತಿ ಪಂಪಣ್ಣ | ೪೬ | ಹೆಚ್.ಬಿ. ಹಳ್ಳಿ | ವ್ಯಾಪಾರ |
| ೧೨. | ಮಹಾದೇವಪ್ಪ | ೫೩ | ಹೆಚ್.ಬಿ. ಹಳ್ಳಿ | ವ್ಯಾಪಾರ |
| ೧೩. | ವಿ. ಹನುಮನಗೌಡ | ೫೫ | ವರದಾಪುರ | ವ್ಯವಸಾಯ |
| ೧೪. | ಎಂ.ಟಿ. ತಿಪ್ಪೇಶ | ೩೩ | ಚಿಕ್ಕಜೋಗಿಹಳ್ಳಿ | ಕೈಗಾರಿಕೆ |
| ೧೫. | ಯು.ಎಂ. ಪ್ರಕಾಶ | ೩೧ | ಚಿಕ್ಕಜೋಗಿಹಳ್ಳಿ | ಕೈಗಾರಿಕೆ |
| ೧೬. | ಎಸ್.ದುರುಗಪ್ಪ | ೫೭ | ಕೂಡ್ಲಿಗಿ | ಮೇನೇಜರ್ ಬ್ಲಾಕ್ ಶಿಕ್ಷಣಾಧಿಕಾರಿಗಳು |
| ೧೭. | ಕೆ. ತಿಪ್ಪೇಸ್ವಾಮಿ | ೬೫ | ಹೊಸಹಳ್ಳಿ | ನಿವೃತ್ತಿ ಶಿಕ್ಷಕ |
| ೧೮. | ಸೌಕಾರ ತಾತಣ್ಣ | ೭೦ | ಆಲೂರು | ವ್ಯವಸಾಯ |
| ೧೯. | ಶರಣಪ್ಪ ಬಿ. | ೫೩ | ಕಾನಾಮಡಗು | ಎಂಜಿನಿಯರ್ |
| ೨೦. | ಶುಭಾಷ ಕೆ. | ೩೫ | ಕೋಗಳಿ | ವ್ಯವಸಾಯ |
| ೨೧. | ಗುರುಬಸವರಾಜ ಎಂ. | ೫೩ | ಕೋಗಳಿ | ವ್ಯವಸಾಯ |
| ೨೨. | ಟಿ. ಶಿವರುದ್ರಪ್ಪ | ೪೩ | ಕೋಗಳಿ | ವ್ಯವಸಾಯ |

| | | | | |
|---|---|---|---|---|
| ೨೩. | ಕೊಟ್ರಬಸಪ್ಪ | ೬೨ | ಕೋಗಳಿ | ವ್ಯವಸಾಯ |
| ೨೪. | ಬಸಣ್ಣ | ೭೫ | ಕೋಗಳಿ | ವ್ಯವಸಾಯ |
| ೨೫. | ಟಿ. ಬಸವರಾಜ | ೫೦ | ಹೊಸಪೇಟೆ | ಕ್ಯಾಮಿಸ್ಟ್ರಿಕಲ್ಚರರ್ |
| ೨೬. | ಟಿ. ಜಯಮ್ಮ | ೪೬ | ಹೊಸಪೇಟೆ | ಕಾಲೇಜ್ ಪ್ರಿನ್ಸಿಪಾಲ್ |
| ೨೭. | ಗಾಣಿಗರ ನಾಗರಾಜ | ೨೯ | ಕಂಪ್ಲಿ | ವ್ಯಾಪಾರ |
| ೨೮. | ವೀರಭದ್ರಪ್ಪ | ೬೪ | ಕಂಪ್ಲಿ | ವ್ಯಾಪಾರ |
| ೨೯. | ಅಣ್ಣ ವಿರೂಪಾಕ್ಷಪ್ಪ | ೪೩ | ಮೋಕ | ವ್ಯವಸಾಯ |
| ೩೦. | ಗೌರಿಶೆಟ್ಟಿ ಚನ್ನಮಲ್ಲಪ್ಪ | ೪೮ | ಮೋಕ | ವ್ಯವಸಾಯ |
| ೩೧. | ಸಜ್ಜನ ಬಸವರಾಜ | ೬೫ | ಬಳ್ಳಾರಿ | ನಿವೃತ್ತಿ ಪ್ರಾಚಾರ್ಯರು |
| ೩೨. | ಎಮ್. ಮಲ್ಲಿಕಾರ್ಜುನ | ೬೩ | ಬಳ್ಳಾರಿ | ಫಾರ್ಮಸಿ ಕಾಲೇಜ್ ಸೂಪರಿಡೆಂಟ್ |
| ೩೩. | ಕುಪ್ಪಗಲ್ ಐಯ್ಯಪ್ಪ | ೫೪ | ಬಳ್ಳಾರಿ | ವ್ಯಾಪಾರ |
| ೩೪. | ಅಣ್ಣ ಮಲ್ಲಿಕಾರ್ಜುನ | ೬೩ | ಬಳ್ಳಾರಿ | ನಿವೃತ್ತಿ ಪ್ರಾಚಾರ್ಯರು |
| ೩೫. | ಎಸ್. ಬಸವರಾಜ | ೪೪ | ಕಂಪ್ಲಿ | ಗಾಣದ ವೃತ್ತಿ |
| ೩೬. | ಸುಜಾತ | ೬೬ | ಸಿದ್ದಾಪುರ | ಮನೆ ಕೆಲಸ |
| ೩೭. | ಜೆ. ಜಗದೀಶಪ್ಪ | ೪೯ | ಕಂಪ್ಲಿ | ವ್ಯಾಪಾರ |
| ೩೮. | ಚಿದಾನಂದಗೌಡ | ೪೯ | ಗೋನಾಳ | ತೋಟಗಾರಿಕೆ |
| ೩೯. | ಮಹೇಶ ದೊಡ್ಡಮನಿ | ೪೫ | ಹಡಗಲಿ | ಶಿಕ್ಷಕ |
| ೪೦. | ಎಂ. ಚಿದಾನಂದಪ್ಪ | ೫೦ | ಹಡಗಲಿ | ವಕೀಲರು |
| ೪೧. | ಹಂದ್ರಾಳ ಪಿತಾಂಬ್ರಪ್ಪ | ೫೫ | ಏಣಿಗಿ | ವ್ಯವಸಾಯ |
| ೪೨. | ಹೆಚ್. ನೀಲಮ್ಮ | ೫೩ | ಹಂಪಸಾಗರ ೨ | ವ್ಯವಸಾಯ |
| ೪೩. | ಗುಡದಯ್ಯ | ೬೦ | ರಾಜವಾಳ | ವ್ಯವಸಾಯ |
| ೪೪. | ದಾಸನಹಳ್ಳಿ ರುದ್ರಪ್ಪ | ೬೫ | ರಾಜವಾಳ | ವ್ಯವಸಾಯ |
| ೪೫. | ನಿರಲಿಗಿ ಹನುಮಪ್ಪ | ೫೦ | ರಾಜವಾಳ | ವ್ಯವಸಾಯ |
| ೪೬. | ಕೆ. ಬುಳ್ಳಪ್ಪ | ೫೬ | ಕತ್ತೆಬೆನ್ನೂರು | ವ್ಯವಸಾಯ |
| ೪೭. | ಕೆ. ಮಂಜಪ್ಪ | ೬೦ | ಕತ್ತೆಬೆನ್ನೂರು | ವ್ಯವಸಾಯ |
| ೪೮. | ಶಿಗ್ಲಿ ಶಂಕ್ರಪ್ಪ | ೬೦ | ಹೊಸಪೇಟೆ | ವ್ಯಾಪಾರ |
| ೪೯. | ಹಂದ್ರಾಳ ರುದ್ರಜ್ಜ | ೬೧ | ಏಣಿಗಿ | ವ್ಯವಸಾಯ |
| ೫೦. | ಗುಡೆಕೋಟೆ ಚಂದ್ರಪ್ಪ | ೫೪ | ಉತ್ತಂಗಿ | ವ್ಯವಸಾಯ |

| | | | | |
|---|---|---|---|---|
| ೫೧. | ಹಂದ್ರಾಳ ನಿಂಗಪ್ಪ | ೩೩ | ಏಣಿಗಿ | ವಕೀಲರು |
| ೫೨. | ಕೆ. ಕಾಳಿಂಗಪ್ಪ | ೪೦ | ಸಂಡೂರು | ವ್ಯವಸಾಯ |
| ೫೩. | ಮ್ಯಾಗಳಮನಿ ಶಿವಪ್ಪ | ೬೪ | ತಂಬ್ರಹಳ್ಳಿ | ವ್ಯವಸಾಯ |
| ೫೪. | ಮಹೇಶ | ೪೦ | ನಾಗತಿಬಸಾಪುರ | ಹೋಟೆಲ್ |
| ೫೫. | ಎನ್. ಕರಿಯಪ್ಪ | ೪೪ | ರಾಜವಾಳ | ವ್ಯವಸಾಯ |
| ೫೬. | ಸಿದ್ದೇಶ | ೩೨ | ಹೆಗ್ಡಾಳ | ವ್ಯಾಪಾರ |
| ೫೭. | ಮ್ಯಾಗಳಮನಿ ಬಸವರಾಜ | ೫೮ | ತಂಬ್ರಹಳ್ಳಿ | ವ್ಯವಸಾಯ |
| ೫೮. | ಗುಡದಯ್ಯ | ೬೧ | ರಾಜವಾಳ | ವ್ಯವಸಾಯ |

# ಪರಾಮರ್ಶನ ಗ್ರಂಥಗಳು

೧. ಅಂಗಡಿ ಎಸ್.ಎಸ್., ಸಂಕೀರ್ಣ ವೃತ್ತಿ ಪದಕೋಶ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨. ಅರ್ಜುನ ಯು. ಗೊಳಸಂಗಿ, ಗೊಳಸಂಗಿ ಗ್ರಾಮ ಒಂದು ಸಾಂಸ್ಕೃತಿಕ ಅಧ್ಯಯನ, ಮಲ್ಲಿಕಾರ್ಜುನ ಪ್ರಕಾಶನ, ಗೊಳಸಂಗಿ, ೧೯೯೫

೩. ಇಮ್ರಾಪುರ ಎಸ್.ಜಿ., ಜನಪದ ಒಗಟುಗಳು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ದಾರವಾಡ, ೧೯೮೯

೪. ಎಲ್ಲಪ್ಪ ಕೆಕೆಪುರ, ದೊಕ್ಕಲು ಮಕ್ಕಳು ಒಂದು ಅಧ್ಯಯನ, ಶ್ರೀ ದುರ್ಗಾ ಪ್ರಕಾಶನ, ಕೆಕೆಪುರ, ರಾಂಪುರ, ೧೯೯೭

೫. ಕರೀಗೌಡ ಬೀಚನಹಳ್ಳಿ (ಸಂ.), ಕರಕುಶಲ ಕಲೆಗಳು, ಕನ್ನಡ ವಿಶ್ವವಿದ್ಯಾಲಯ ಕೋಶ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೬. ಕಿಟ್ಟೆಲ್ ಎಫ್.ರೆವರೆಂಡ್, ಕನ್ನಡ ಇಂಗ್ಲಿಷ್ ಡಿಕ್ಷನರಿ, ಏಶಿಯನ್ ಎಜುಕೇಶನಲ್ ಸರ್ವೀಸಸ್, ಹೊಸದೆಹಲಿ, ಮದ್ರಾಸ್, ೧೯೯೯

೭. ಕಾಳೇಗೌಡ ನಾಗವಾರ, ಜನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು, ೧೯೯೭

೮. ಕುಮಾರ್ ಆರ್.ಬಿ., ಮುದ್ದೆ ಕಂಬಾರರು, ಸಾರಾ ಎಂಟರ್‌ಪ್ರೈಸಸ್, ಮೈಸೂರು, ೨೦೦೪

೯. ಗದ್ದಗಿಮಠ ಬಿ.ಎಸ್., ಗದ್ದಗಿಮಠರ ಬರಹಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ೧೯೮೮

ಗಣೇಶ್ ಕೆ.ಆರ್. (ಸಂ.), ಸರ್ವಜ್ಞನ ವಚನಗಳು, ಸೃಷ್ಟಿ ಪ್ರಕಾಶನ, ಬೆಂಗಳೂರು, ೨೦೦೬

೧೦. ಗುಬ್ಬಣ್ಣ ಶಿವಾನಂದ, ಲಿಂಗಾಯಿತ ಸಂಸ್ಕಾರಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೪

೧೧. ಚಲುವೇಗೌಡ ತ.ಚಿ., ಕೆಲವು ಜಾನಪದ ಸಂಪ್ರದಾಯಗಳು, ತಲಗವಾಡಿ ಪ್ರಕಾಶನ, ಮೈಸೂರು, ೧೯೭೮

೧೨. ದೇವೇಂದ್ರಕುಮಾರ ಹಕಾರಿ (ಸಂ.), ಜಾನಪದೀಯ, ವಾಗ್ದೇವಿ ಪುಸ್ತಕಗಳು, ಮೈಸೂರು

೧೩. ದಾನೇಶ ಎ. ಚಕ್ಕಿ, ಆಭರಣಗಳ ಬಗೆಗೆ ಸಾಮಾಜಿಕ ದೃಷ್ಟಿಕೋನ, ಎಸ್.ಎಸ್. ಒಡೆಯರ್, ರಜಿಸ್ಟ್ರಾರ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೭

೧೪. ದೇವರಕೊಂಡಾರೆಡ್ಡಿ, ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧, ಬಳ್ಳಾರಿ ಜಿಲ್ಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೮

೧೫. ನರಸಿಂಹಮೂರ್ತಿ ಎಚ್.ವಿ., ನಮ್ಮ ಹಬ್ಬಗಳು, ವಿಕಾಸ ಪ್ರಕಾಶನ, ಉಡುಪಿ, ೨೦೦೨

೧೬. ನಾಗರಾಜು ಎಂ.ಹೆಚ್., ಕುಂಚಿಟಗರ ಸಾಂಸ್ಕೃತಿಕ ಇತಿಹಾಸ, ಅನಿಕೇತನ ಪ್ರಕಾಶನ, ತುಮಕೂರು, ೨೦೦೩

೧೭. ನಾಯಕ್ ಹಾ.ಮ., ಜಾನಪದ ಸ್ವರೂಪ, ತಳುಕಿನ ವೆಂಕಣ್ಣಯ್ಯ ಸ್ಮಾರಕ ಗ್ರಂಥಮಾಲೆ, ಗೀತಾ ಬುಕ್ ಹೌಸ್, ಮೈಸೂರು, ೨೦೦೩

೧೮. ನಾಗಯ್ಯ ಜೆ.ಎಂ., ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಸಂಪುಟ ೧, ಲೋಹಿಯಾ ಪ್ರಕಾಶನ, ಬಳ್ಳಾರಿ, ೨೦೦೨

೧೯. ಪ್ರಶಾಂತ ಹೆಚ್.ಡಿ. (ಸಂ.), ಜನಸಮುದಾಯ ಸಂಪುಟ, ಕರ್ನಾಟಕ ರಾಜ್ಯಕೋಶ ೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೨೦. ಪಾಂಡುರಂಗ ಡಿ.ಆರ್., ದಕ್ಷಿಣ ಕನ್ನಡ ಜಿಲ್ಲೆಯ ಬೈರರು ಸಾಹಿತ್ಯ ಸಾಂಸ್ಕೃತಿಕ ಅಧ್ಯಯನ, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ೧೯೯೦

೨೧. ಬಂಡಯ್ಯಸ್ವಾಮಿ, ಬೀದರ ಜಿಲ್ಲೆಯ ಜಂಗಮರು: ಒಂದು ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨

೨೨. ಬಸವರಾಜು ಎಲ್. (ಸಂ.), ಸರ್ವಜ್ಞನ ವಚನಗಳು, ಗೀತಾ ಬುಕ್‌ಹೌಸ್, ಮೈಸೂರು, ೧೯೯೦

೨೩. ಭಟ್‌ಸೂರಿ ಕೆ.ಜಿ., ಶಾಸನ ಅಧ್ಯಯನ, ಸಂ.೩, ಸಂ.೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೨೪. ಭಾನುಮತಿ ವೈ.ಸಿ., ಮಲೆನಾಡು ಶೈವ ಒಕ್ಕಲಿಗರು ಜಾನಪದೀಯ ಅಧ್ಯಯನ, ಕೇಶವ ಪ್ರಕಾಶನ, ಮೈಸೂರು, ೧೯೯೪

೨೫. ಭದ್ರಾಪುರ ವ್ಹಿ.ಎಸ್.(ಸಂ.), ಸಮಾಜ ದರ್ಶನ ೯೯, ೨೦೦೦

೨೬. ಬೋರಲಿಂಗಯ್ಯ ಹಿ.ಚಿ., ಹಾಡುವ ಹಾಲಕ್ಕಿ ಸುಕ್ರಿಬೊಮ್ಮೆಗೌಡ, ಪ್ರಜಾವಾಮಿ, ಸಂ.ಪ್ರ. ದಿನಾಂಕ ೧೪.೧೧.೧೯೯೯

೨೭. ಮೃತ್ಯುಂಜಯ ಹೊರಕೇರಿ, ಮಧುರ ಜಾನಪದ, ಅಮರ ಪ್ರಕಾಶನ, ಗುಲಬರ್ಗಾ, ೨೦೦೫

೨೮. ಮಂಜುನಾಥ ಬೇವಿನಕಟ್ಟಿ, ಸುಪ್ಪತ್ತಿಗೆಯ ಹಿಂದಿನ ಬದುಕು ಪಿಂಜಾರರ ಜನಾಂಗೀಯ ಅಧ್ಯಯನ, ೧೯೯೫

೨೯. ಮಾತೆ ಮಹಾದೇವಿ, ಬಸವಧರ್ಮ ಸಂಸ್ಕಾರಗಳು, ವಿಶ್ವಕಲ್ಯಾಣ ಮಿಶನ್ ಬಸವ ಮಂಟಪ, ಬೆಂಗಳೂರು, ೧೯೯೫

೩೦. ರವೀಂದ್ರನಾಥ ಕೆ. (ಸಂ.), ಬಳ್ಳಾರಿ ಜಿಲ್ಲಾ ದರ್ಶನ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ, ೨೦೦೫

೩೧. ರಾಜೇಂದ್ರ ಡಿ.ಕೆ., ನಮ್ಮ ಸುತ್ತಿನ ನಂಬಿಕೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ೧೯೭೩

೩೨. ರಾಗೌ (ಸಂ.), ಸರ್ವಜ್ಞನ ವಚನಗಳು, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೩

೩೩. ಲಕ್ಕಪ್ಪಗೌಡ ಎಚ್.ಜೆ., ಜಾನಪದ ಕೈಪಿಡಿ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೧೯೯೭

೩೪. ಲಠ್ಠೆ ಎಂ.ಎಸ್., ಉತ್ತರ ಕರ್ನಾಟಕದ ಒಡಪುಗಳು, ರವೀಂದ್ರ ಪ್ರಕಾಶನ, ಕಲಬುರ್ಗಿ, ೧೯೭೮

೩೫. ಲಿಂಗಯ್ಯ ಡಿ., ಕೆ.ಆರ್. ಸಂಧ್ಯಾರೆಡ್ಡಿ, ಜಾನಪದ ಸ್ವರೂಪ ಮತ್ತು ಸಾಹಿತ್ಯ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೭

೩೬. ಎಲ್.ವಿ.ಪೈ., ಕನ್ನಡದ ಒಗಟುಗಳ ಗಾದೆಗಳು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೮೩

೩೭. ವಿವೇಕ ರೈ ಬಿ.ಎ., ಕರ್ನಾಟಕ ಜನಪದ ನಂಬಿಕೆಗಳು, ಕರ್ನಾಟಕ ಜಾನಪದ, ೧೯೮೧

೩೮. ವಿವೇಕ ರೈ ಬಿ.ಎ., ಭಾರತೀಯ ಪರಂಪರೆ ಹಾಗೂ ಸಾಹಿತ್ಯದಲ್ಲಿ ಒಗಟು, ಪವನ್ ಪ್ರಿಂಟರ್ಸ್, ಬೆಂಗಳೂರು, ೧೯೮೮

೩೯. ವೆಂಕಟಸುಬ್ಬಯ್ಯ ಜಿ. (ಸಂ.), ಕನ್ನಡ ನಿಘಂಟು, ೩ನೆ ಸಂಪುಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೭೭

೪೦. ವೆಂಕಟ ರಂಗೋಕಟ್ಟಿ (ಅನು), ಗೆಸೆಟಿಯರ್ ಮುಂಬಾಯಿ ಇಲಾಖೆಗೆ ಸೇರಿದ ಕರ್ನಾಟಕ ಭಾಗದ್ದು, ಧಾರವಾಡ, ಬೆಳಗಾವಿ, ವಿಜಾಪುರ, ಕಾನಡಾ ಈ ನಾಲ್ಕು ಜಿಲ್ಲೆಗಳದು. ಏಶಿಯನಂ ಎಜುಕೇಶನಲ್ ಸರ್ವೀಸಸ್ ಹೊಸದೆಹಲಿ, ೧೯೮೪

೪೧. ಶಿವಾನಂದ ಕೆಳಗಿನಮನಿ, ಸುವರ್ಣನಗರಿ ಸುಮಕಲ್ಲ ಬಿದರಿ ಒಂದು ಮಾದರಿ ಗ್ರಾಮ ಅಧ್ಯಯನ, ಶಕ್ತಿ ಪ್ರಿಂಟರ್ಸ್ ಮತ್ತು ಪಬ್ಲಿಷರ್ಸ್, ಬೆಂಗಳೂರು, ೨೦೦೫

೪೨. ಶ್ರೀಕಂಠಯ್ಯ ತೀ.ನಂ., ಕನ್ನಡ ಮಾಧ್ಯಮ ವ್ಯಾಕರಣ, ಗೀತ ಬುಕ್‌ಹೌಸ್ ಪ್ರಕಾಶಕರು, ಮೈಸೂರು, ೨೦೦೬

೪೩. ಸುಜಾತ ಅಕ್ಕಿ, ಬಳ್ಳಾರಿ ಜಿಲ್ಲೆಯ ರಂಗನಟಿಯರು ಅಧ್ಯಯನ, ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೪೪. ಸಜ್ಜನ ಪ್ರಿ.ಜಿ.ಬಿ. (ಸಂ.), ಗಾಣ ಸಿರಿ ಅಖಿಲ ಭಾರತ ಗಾಣಿಗರ ಸಂಘ ರಿ, ಜಿಲ್ಲಾ ಘಟಕ ವಿಜಾಪುರ, ಸ್ಮರಣ ಸಂಚಿಕೆ, ೨೦೦೪

೪೫. ಸೋಮಶೇಖರ ಇಮ್ರಾಪುರ (ಸಂ.), ಆಯ್ದ ಜನಪದ ಒಗಟುಗಳು, ಚೇತನಾ ಪ್ರಕಾಶನ, ಧಾರವಾಡ, ೧೯೯೮

೪೬. ಹರಿಲಾಲ್ ಕೆ. ಪವಾರ್, ಕರ್ನಾಟಕದ ಹೆಳವರು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೫

೪೭. ಹಲಸಂಗಿ ಗೆಳೆಯರು, ಹಲಸಂಗಿ ಹಾಡು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦

೪೮. ಹಿಂಗಮಿರೆ ಬಿ.ಬಿ., ಜಾನಪದ ಸಾಹಿತ್ಯ ದರ್ಶನ, ಸಂ.೨೦, ಜನಪದ ಆಹಾರ ಪಾನೀಯ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

## English

1. Edgar Thurston K. Rangachari, Caste and Tribes of Southern India Volume II - C to J, Asian Educational Services, New Delhi, Madras, 1987
2. Iyer L.K.A., The Mysore Tribes and Castes Five Volumes, Mittal Publications, Delhi, 11035 (India) 1988
3. Government of Karnataka Report of the Karnataka volume I, Third Backward Classes Commission, O. Chinnappa Reddy, Chairman, 1990

4. Kittal R.E.V.P., Kannada English, Dictionary, Asian Educational Services, New Delhi, Madras, 1999
5. Suryanth U. Kamath, Gazatteer of India Karnataka State, Bangalore rural district, Government of Karnataka, Publication, 1989
6. Singh K.S., People of India Karnataka, Volume XXVI, Part 2, First Published 2003
7. Syed Siraj Ul, Hassan the Castes and Tribes of H.E.H. the Nizam's Dominitions Volume I, Bombay the Times Press, 1920

# ಕರ್ನಾಟಕ ರಾಜ್ಯ



ಬೀದರ್
ಆಂಧ್ರಪ್ರದೇಶ
ಮಹಾರಾಷ್ಟ್ರ
ಗುಲಬರ್ಗಾ
ಬಿಜಾಪುರ
ಬೆಳಗಾವಿ
ಬಾಗಲಕೋಟೆ
ರಾಯಚೂರು
ಉ
ಕೊಪ್ಪಳ
ಗದಗ
ಧಾರವಾಡ
ಬಳ್ಳಾರಿ
ಉತ್ತರ ಕನ್ನಡ
ಹಾವೇರಿ
ದಾವಣಗೆರೆ
ಶಿವಮೊಗ್ಗ
ಚಿತ್ರದುರ್ಗ
ಉಡುಪಿ
ಚಿಕ್ಕಮಗಳೂರು
ತುಮಕೂರು
ಕೋಲಾರ
ಹಾಸನ
ಬೆಂಗಳೂರು
ದಕ್ಷಿಣ ಕನ್ನಡ
ಅರಬ್ಬೀಸಮುದ್ರ
ಮಂಡ್ಯ
ತಮಿಳುನಾಡು
ಕೊಡಗು
ಮೈಸೂರು
ಚಾಮರಾಜನಗರ

## ಕರ್ನಾಟಕ ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆ



## ಬಳ್ಳಾರಿ ಜಿಲ್ಲೆಯ ನಕ್ಷೆ



# ಬಳ್ಳಾರಿ ಜಿಲ್ಲೆಯ ಗಾಣಿಗ ಸಮುದಾಯದ ನೆಲೆಗಳು



೧. ಬಳ್ಳಾರಿ
- ಬಿ. ಗೊನಾಳ
- ಎಮ್ಮಿಗನೂರು
- ಚೆಲ್ಲಗುರ್ಕಿ
- ಮೋಕಾ
- ಎಂ. ಗೋನಾಳ

೨. **ಹಗರಿಬೊಮ್ಮನಹಳ್ಳಿ**
- ಏಣಿಗಿ
- ಕಡ್ಲಬಾಳ
- ಕಿತ್ನೂರು
- ಕೋಗಳಿ
- ತಂಬ್ರಹಳ್ಳಿ
- ದಸ್ಮಾಪುರ
- ಮಾನ್ವಿ
- ಮುತುಕೂರು
- ಮೋರಗೇರಿ
- ವರದಾಪುರ
- ಹಂಪಸಾಗರ ೨

೩. **ಹೊಸಪೇಟೆ**
- ಕಂಪ್ಲಿ
- ಗಾದಿಗನೂರು
- ಹೊಸಪೇಟೆ
- ಪಣಾಪುರ
- ಕಮಲಾಪುರ
- ಹಂಪಿ
- ಬುಕ್ಕಸಾಗರ
- ಮಲಪನಗುಡಿ
- ಹನುಮನಹಳ್ಳಿ

೪. **ಹೂವಿನಹಡಗಲಿ**
- ಕತ್ತೆಬೆನ್ನೂರು
- ರಾಜವಾಳ
- ಅಲ್ಲಿಪುರ
- ಉತ್ತಂಗಿ
- ಇಟಗಿ
- ನಾಗತಿ ಬಸಾಪುರ
- ಬಿರಬ್ಬಿ
- ಬೂದನೂರು
- ಮಕರಬ್ಬಿ
- ಹಡಗಲಿ
- ಹಿರೇಬನ್ನಿಮಟ್ಟಿ

೫. **ಕೂಡ್ಲಿಗಿ**
- ಉಜ್ಜಿನಿ
- ಕೊಟ್ಟೂರು
- ಕೂಡ್ಲಿಗಿ
- ಬಣವಿಕಲ್ಲು
- ಹುಡೆಂ
- ಹಿರೇಹೆಗ್ಡಾಳ
- ಹೊಸಹಳ್ಳಿ
- ಕಾನಾಮಡಗು

೬. **ಸಿರುಗುಪ್ಪ**
- ತೆಕ್ಕಲಕೋಟೆ
- ಅಲಬನೂರು
- ತಾಳೂರು
- ಸಿರುಗುಪ್ಪ

೭. **ಸೊಂಡೂರು**
- ಲಕ್ಷ್ಮೀಪುರ
- ಸೊಂಡೂರು
- ನಾಗಲಾಪುರ
- ಜೋಗ
- ತೋರಣಗಲ್ಲು
- ಚೋರನೂರು
- ಉಬ್ಬಳಗುಂಡಿ



ಒಂಟೆತ್ತಿನ ಗಾಣ



[illegible]ಗೆ ಅರಿಷಣ ಹಚ್ಚುವುದು



ಐರಾಣಿ ತರುವ ಪದ್ಧತಿ



ತಾಳಿ ಕಟ್ಟುವುದಕ್ಕಿಂತ ಪೂರ್ವದಲ್ಲಿ ವಧು-ವರರು ಸಿದ್ಧತೆಯಲ್ಲಿರುವುದು



ವರ - ವಧುವಿಗೆ ತಾಳಿಕಟ್ಟುವುದು



ತಾಳಿ ಕಟ್ಟಿದ ಮೇಲೆ ಹಾಲು-ತುಪ್ಪ ಹಾಕಿ ಕೈ ತೊಳೆಸುವುದು



ಹೆಣ್ಣಿನವರಿಗೆ ಗಂಡಿನವರಿಂದ ಎದುರುಗೊಳ್ಳುವ ಶಾಸ್ತ್ರ



ವರನ ಮನೆಗೆ ವಧುವಿನ ಮನೆಯವರು ಬಂಡೆ ಸಾಮಾನ ಕೊಡುವುದು



ಪರಿವರ್ತಿತ ವಿದ್ಯುತ್ ಗಾಣದಿಂದ ಎಣ್ಣೆ ತೆಗೆಯುವುದು



ಪರಿವರ್ತಿತ ವಿದ್ಯುತ್ ಗಾಣವನ್ನು ಸಂಶೋಧಕ ನೋಡುವುದು



ಪರಿವರ್ತಿತ ವಿದ್ಯುತ್ ಗಾಣವನ್ನು ದಸರ ಹಬ್ಬದಲ್ಲಿ ಪೂಜಿಸುವುದು



ಎಣ್ಣೆ ತೆಗೆಯಲಿಕ್ಕೆ ಕುಸುಬಿಯನ್ನು ಸ್ವಚ್ಛ ಮಾಡಿ ಕೊಡುವ ಮುದುಕಿ